# ಬೆಂಗಳೂರು

## Y2K50-Y2K64

ಡಾ|| ಎಂ. ವೆಂಕಟಸ್ವಾಮಿ





ಜಾಗೃತಿ ಪ್ರಿಂಟರ್ಸ್

ನಂ. 56/1-6, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ,
ಮಾಗಡಿ ಮುಖ್ಯರಸ್ತೆ, ಬೆಂಗಳೂರು-560 091.

**BANGALORE Y2K50-Y2K64** - Written by **Dr. M. Venkataswamy,** No. 519, 39th Block, Type 5, CPWD Qtrs, HSR Layout, Bangalore & Published by **Sri. N.P Rajiv** on behalf of **M/s. Jagruthi Printers**, No.56/1-6, Narasimaiah Garden, Kottigepalya (Opp. National Institute of Unani Medicine), Magadi Main Road, Bangalore-560 091.

**First Edition :** 2009 **Price :** Rs. 90.00 **Pages :** 148

**Paper Used :** 70 GSM NS Maplitho



**ಪ್ರಥಮ ಮುದ್ರಣ : 2009**

**ಬೆಲೆ : ರೂ.** 90.00

**ಪುಸ್ತಕ ಮಾರಾಟದ ಹಕ್ಕು : ಪ್ರಕಾಶಕರದ್ದು**

**ಮುಖಪುಟ : ಮೋನಪ್ಪ**

**ಅಕ್ಷರ ಜೋಡಣೆ : ಜಾಗೃತಿ ಪ್ರಿಂಟರ್ಸ್**

**ಗೌರವ ಸಂಪಾದಕರು : ನಿಡಸಾಲೆ ಪುಟ್ಟಸ್ವಾಮಯ್ಯ**

**ಪ್ರಕಾಶಕರು / ಮುದ್ರಕರು :**
**ಜಾಗೃತಿ ಪ್ರಿಂಟರ್ಸ್**
ನಂ. 56/1-6, ನರಸಿಂಹಯ್ಯ ಗಾರ್ಡನ್,
ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯರಸ್ತೆ,
ಬೆಂಗಳೂರು - 560 091.
ಫೋನ್ : 080-23583850

ಬೃಹತ್ ಬೆಂಗಳೂರು ಕಟ್ಟಿದ ಎಲ್ಲಾ ಮಹನೀಯರಿಗೆ

# ಲೇಖಕರ ನುಡಿ

ಬೆಂಗಳೂರು Y2K50 - Y2K64 ಒಂದು ವೈಜ್ಞಾನಿಕ ಕಾದಂಬರಿ, 2050-64ರ ಮಧ್ಯದ ಹೈಪರ್ ಸಿಟಿ ಬೆಂಗಳೂರನ್ನು ಕೇಂದ್ರವಾಗಿರಿಸಿಕೊಂಡು ಕೆಲವು ಪಾತ್ರಗಳ ಜೊತೆಗೆ ರೋಬೋಟ್ಸ್, ಸ್ಪೇಸ್, ವೈದ್ಯ ವಿಜ್ಞಾನ ಮತ್ತು ಆಧುನಿಕ ಯಂತ್ರ-ತಂತ್ರಜ್ಞಾನಗಳೊಂದಿಗೆ ಈ ಕಾದಂಬರಿಯನ್ನು ಹೆಣೆಯಲಾಗಿದೆ. ಇದು ಪೂರ್ಣವಾಗಿ ವೈಜ್ಞಾನಿಕ ಕಲ್ಪನೆಯಾದರೂ ಇದರಲ್ಲಿ ಬರುವ ಬಹಳಷ್ಟು ವಿಷಯಗಳು 2050-64ರ ಮಧ್ಯೆ ನಡೆಯುತ್ತವೆ ಎನ್ನುವುದರಲ್ಲಿ ಸಂದೇಹವಿಲ್ಲ, ಕೆಲವು ಘಟನೆಗಳು ಇನ್ನೂ ಮುಂದಕ್ಕೆ ಸಂಭವಿಸಬಹುದು, ಈ ಕಾದಂಬರಿಯ ಮುಕ್ತಾಯ ಒಂದು ವೈಜ್ಞಾನಿಕ ಕಲ್ಪನೆಯಾಗಿದ್ದು ಅದು ಕೆಲವು ನೂರು, ಸಾವಿರ, ಅಥವಾ ಮಿಲಿಯಾಂತರ ವರ್ಷಗಳಲ್ಲಿ ಸಂಭವಿಸುತ್ತದೆ. ಭೂಮಿ ಎರಡು ರೀತಿಯಲ್ಲಿ ಮಾತ್ರ ಪೂರ್ಣವಾಗಿ ಛಿದ್ರವಾಗಿ ಹೋಗುವ ಸಂಭವಗಳಿವೆ. ಒಂದು, ಯಾವುದೋ ಒಂದು ಅನ್ಯಗ್ರಹ ಅಥವಾ ಒಂದು ದೈತ್ಯ ಉಲ್ಕಾಶಿಲೆ ಭೂಮಿಗೆ ಬಡಿದು ಭೂಮಿ ಛಿದ್ರವಾಗಿ ಹೋಗುತ್ತದೆ. ಎರಡು, ಸೂರ್ಯನು ಒಂದು ದಿನ ಭೂಮಿಯನ್ನು ತನ್ನ ಗುರುತ್ವಾಕರ್ಷಣೆಯ ಶಕ್ತಿಯಿಂದ ತನ್ನ ತೆಕ್ಕೆಗೆ ತೆಗೆದುಕೊಂಡು ಉರಿಸಿಬಿಡುತ್ತಾನೆ.

ಈ ಕಾದಂಬರಿ ಕನ್ನಡ ಪ್ರಭ ಪತ್ರಿಕೆಯಲ್ಲಿ ದೈನಿಕ ಧಾರಾವಾಹಿಯಾಗಿ ಪ್ರಕಟವಾಗಿ ಐದು ವರ್ಷಗಳೇ ಕಳೆದುಹೋಗಿವೆ. ಆದರೂ ಅದನ್ನು ಪ್ರಕಟಿಸಲು ಮನಸ್ಸು ಬರಲಿಲ್ಲ, ಪ್ರತಿದಿನವೂ ಒಂದೊಂದು ಹೊಸ ರೀತಿಯ ತಂತ್ರಜ್ಞಾನ ನಮ್ಮ ಮುಂದೆ ಬರುತ್ತಲೇ ಇದ್ದು ಈ ಕಾದಂಬರಿಯನ್ನು ಇನ್ನಷ್ಟು ಅಪ್‌ಡೇಟ್ ಮಾಡಲು ಯೋಚಿಸುತ್ತ ವೈಜ್ಞಾನಿಕ ವಿಷಯಗಳನ್ನು ಸಂಗ್ರಹಿಸುತ್ತಲೇ ಇದ್ದೆ. ಆದರೆ ಅದನ್ನೆಲ್ಲ ಅಲ್ಲಲ್ಲಿ ಸೇರಿಸುತ್ತಾ ಹೋದರೆ ಕಾದಂಬರಿ ಮುಗಿಯುವ ಸೂಚನೆಗಳೇ ಕಂಡುಬರದ ಕಾರಣ ಹಾಗೆ ಪ್ರಕಟಿಸಲು ತೀರ್ಮಾನಿಸಿದೆ.

ಕಳೆದ ಕೆಲವು ದಶಕಗಳಿಂದ ಪ್ರಪಂಚದಾದ್ಯಂತ ನಡೆಯುತ್ತಿರುವ ಸಂಶೋಧನೆಗಳನ್ನು ಗಮನಿಸಿದರೆ ಇನ್ನೂ ಏನೇನು ಯಂತ್ರಗಳು - ತಂತ್ರಜ್ಞಾನ ಬರುತ್ತದೋ ಹೇಳುವುದೇ ಅಸಾಧ್ಯ. ಅಮೆರಿಕಾ, ಯುರೋಪ್ ದೇಶಗಳೆ ಅಲ್ಲ ಚೀನಾ, ಇಂಡಿಯಾ, ಜಪಾನ್, ಕೊರಿಯಾ ಇನ್ನಿತರ ದೇಶಗಳೂ ಹಿಂದೆ ಬಿದ್ದಿಲ್ಲ, ಹೊಸ ಹೊಸ ತಂತ್ರಜ್ಞಾನಕ್ಕಾಗಿ ಬಿಲಿಯಾಂತರ ಡಾಲರುಗಳನ್ನು ವಿನಿಯೋಗಿಸುತ್ತಿವೆ. ಸ್ಪೇಸ್ : ಉಪಗ್ರಹಗಳು,

ಸ್ಟಾರ್‌ವಾರ್ಸ್, ಟೈಮ್‌ಮೆಷಿನ್, ಅನ್ಯಗ್ರಹಗಳು ಮತ್ತು ಜೀವಿಗಳು, ಸ್ಪೇಸ್ ಕಾಲೋನಿಗಳು; ವೈದ್ಯವಿಜ್ಞಾನ, ಸೂಪರ್ ಕಂಪ್ಯೂಟರ್ಸ್, ಮಿನಿಷೀಕರಣ ರೋಬೋಟ್ಸ್, ಮಾಲಿಕ್ಯೂಲಾರ್ ಬಯಾಲಜಿ, ಆಧುನಿಕ ಯುದ್ಧ ಸಾಮಗ್ರಿಗಳು, ರೀಮ್ಯಾಟಿರೀಲಿಸಮ್, ಹೈಪರ್ ಸ್ಪೆಕ್ಟ್ರಲ್ ಸಮೀಕ್ಷೆ, ಹೈಪರ್ ದರೋಡೆಗಳು; ಆಧುನಿಕ ಸೂಪರ್ ಸ್ಕೈಸಿಗ್ನಲ್‌ಗಳು ಹೀಗೆ ಹೇಳುತ್ತಾ ಹೋದರೆ ತಲೆ ಚಿಟ್ಟು ಹಿಡಿದು ಹೋಗುತ್ತದೆ. ಮೈಖಿಯೊ ಕಾಖು ಅವರ ಹೈಪರ್ ಸ್ಪೇಸ್ ಮತ್ತು ಪ್ಯಾರಲಲ್ ವರ್ಲ್ಡ್ ಕೃತಿಗಳನ್ನು ಓದಿ ನನ್ನ ತಲೆ ಗಿರಗಿರ ತಿರುಗಿಬಿಟ್ಟಿತ್ತು. ಹಾಗೆಯೇ ಪ್ರಪಂಚದಾದ್ಯಂತ ನಡೆಯುತ್ತಿರುವ ಆರ್ ಅಂಡ್ ಡಿ ವಿಷಯಗಳನ್ನು ಗಮನಿಸಿದರೆ ಸಾಕು ಅಬ್ಬಬ್ಬ! ಎನಿಸಿಬಿಡುತ್ತದೆ.

ಒಂದು ಲೆಕ್ಕಾಚಾರದ ಪ್ರಕಾರ ಪ್ರತಿ ಹತ್ತು ವರ್ಷಗಳಿಗೆ ಮನುಷ್ಯನ ಇಳಿನ 200-250 ಪಟ್ಟು ಹೆಚ್ಚುತ್ತದೆ ಎನ್ನಲಾಗಿದೆ. ಅಂದರೆ ಬರುವ 300 ವರ್ಷಗಳ ಸುಮಾರಿಗೆ ಮನುಷ್ಯನ ಜ್ಞಾನ 250-300 ಮಿಲಿಯನ್ ಪಟ್ಟು ಹೆಚ್ಚುತ್ತದೆ. ಈ ವಿಷಯಗಳನ್ನು ಊಹಿಸಿಕೊಳ್ಳುವುದೇ ರೋಮಾಂಚನ. ಆ ಕಾಲಕ್ಕೆ ಮನುಷ್ಯ ರೀಮ್ಯಾಟಿರಿಯಲಿಸಮ್ ಅಥವಾ ವಾರ್ಮ್‌ಹೋಲ್ಸ್ ಮೂಲಕ ಆವಿಯಾಗಿ ಕ್ಷಣಗಳಲ್ಲಿ ಯೋಚಿಸಿದ ಸ್ಥಳದಲ್ಲಿ ಇರುತ್ತಾನೆ ಎನ್ನುತ್ತಾರೆ ಹೈಪರ್ ಬುದ್ಧಿ ಜೀವಿಗಳು.

ಈ ವೈಜ್ಞಾನಿಕ ಕಾದಂಬರಿ ಕನ್ನಡದಲ್ಲಿ ಒಂದು ಹೊಸ ಪ್ರಯತ್ನ ಎನ್ನುವ ನಂಬಿಕೆಯಿಂದ ಇದನ್ನು ಓದುಗರಾದ ನಿಮಗೆ ಬಿಟ್ಟುಬಿಡುತ್ತೇನೆ. ಒಂದು ಒಳ್ಳೆಯ ಸುದ್ದಿ ಎಂದರೆ ಈ ಕಾದಂಬರಿಯನ್ನು ಗೆಳೆಯರಾದ ಡಾ. ಹೆಚ್.ಎಸ್.ಎಮ್. ಪ್ರಕಾಶ್ ಅವರ ಸಹಾಯದಿಂದ ಇಂಗ್ಲಿಷ್‌ನಲ್ಲಿ ಭಾಷಾಂತರ ನಡೆಯುತ್ತಿದ್ದು ಕೊನೆಯ ಹಂತದಲ್ಲಿದೆ. ಇಂಗ್ಲಿಷ್ ಕಾದಂಬರಿಯಲ್ಲಿ ಸಾಕಷ್ಟು ಮಾರ್ಪಾಟುಗಳಿದ್ದು ಅವೆಲ್ಲ ಮುಂದಿನ ದಶಕಗಳಲ್ಲಿ ಬರಲಿರುವ ಆಧುನಿಕ ತಂತ್ರಜ್ಞಾನದ ಆವಿಷ್ಕಾರಗಳಾಗಿವೆ.

ಈ ಕಾದಂಬರಿಯನ್ನು ಅಂದವಾಗಿ ಹೊರತಂದಿರುವ ಜಾಗೃತಿ ಪ್ರಿಂಟರ್ಸ್‌ನ ಯುವ ಉದ್ಯಮಿ ನಿಡಸಾಲೆ ಪಿ. ವಿಜಯ್, ಸೊಗಸಾದ ಹೊದಿಕೆ ಬಿಡಿಸಿರುವ ಕಲಾವಿದ ಮಿತ್ರರಾದ ಶ್ರೀ ಮೊನಪ್ಪ ಅವರಿಗೂ, ದೈನಿಕ ಧಾರಾವಾಹಿಯಾಗಿ ಪ್ರಕಟಿಸಿದ ಕನ್ನಡ ಪ್ರಭ ಬಳಗ, ಡಿಟಿಪಿ ಮಾಡಿದ ಮಹೇಶ್ ಮತ್ತು ಓದುಗರಾದ ನಿಮಗೆ ನನ್ನ ಕೃತಜ್ಞತೆಗಳು. ಕೊನೆಗೆ ಶ್ರೀಮತಿ ಸುಶೀಲ ಮತ್ತು ಕ್ರಾಂತಿಗೆ.

ಬೆಂಗಳೂರು
23-12-2009

ಡಾ. ಎಂ. ವೆಂಕಟಸ್ವಾಮಿ
ಎಂ.ಎಸ್ಸಿ., ಡಿ.ಲಿಟ್.,
E-mail : alemarimvs@gmail.com
ಫೋನ್ : 9449041334

# ಬೆಂಗಳೂರು Y2K50-Y2K64



Each and every atom of my body is a part of stars once upon a time.

**ದಿನಾಂಕ : ಕ್ರಿ.ಶ. Y2K50 01 01**

**ಸ್ಥಳ : ಬೆನ್ ನಗರ**

**ಸಮಯ : ಬೆಳಿಗ್ಗೆ ಆರು ಗಂಟೆ :**

ಎ ವಲಯದ ಆಕಾರ ಬಂಗಲೆಯಲ್ಲಿ ಸಣ್ಣದಾಗಿ ಧ್ವನಿ ಮೊಳಗಿತು. ಇಂಪಾದ ಧ್ವನಿ ಸುರುಳಿ ಸುರುಳಿಯಾಗಿ ರಾಗವಾಗಿ ಮನೆಯೆಲ್ಲಾ ಓಡಾಡುತ್ತಾ ಮಂಚದ ಮೇಲೆ ನಗ್ನವಾಗಿ ಮಲಗಿದ್ದ ಐಯಾನ್ ಮತ್ತು ಅಶ್ವಿನಿಯ ಕಿವಿಗಳನ್ನು ಮುಟ್ಟಿತು.

ಕಳೆದ ನಡುರಾತ್ರಿ ಝೀರೋ ಗಂಟೆಯ ಕೊನೆಯ ಕ್ಷಣ ಮುಗಿದು ಸೆಕೆಂಡಿನ ಮುಳ್ಳು ಹೊಸ ವರ್ಷಕ್ಕೆ ಜಿಗಿದಾಗ ಇಬ್ಬರೂ ಒಂದು ಸುದೀರ್ಘ ಚುಂಬನದಲ್ಲಿ ಸಿಲುಕಿ ಕೊಂಡಿದ್ದರು. ಅನಂತರ ಹಗುರವಾಗಿ ಒಂದೊಂದು ಪೆಗ್ ಏರಿಸಿ ಹೊಸದಾಗಿ ಮದುವೆಯಾದವರಂತೆ ರತಿ ಕ್ರೀಡೆಯಲ್ಲಿ ತೊಡಗಿಕೊಂಡಿದ್ದರು.

ಅವರ ಪುಟ್ಟ ಮಗು ಕಾಸ್ಮೋರಾ ಪಕ್ಕದ ಕೋಣೆಯಲ್ಲಿ ಮೆತ್ತನೆಯ ಹಾಸಿಗೆ ಮೇಲೆ ಮಲಗಿದ್ದಾಳೆ. ಅವಳ ಪಕ್ಕದಲ್ಲಿಯೆ ರೋಬೋಟ್ ಒಂದು ಅವಳ ಚಲನವಲನಗಳನ್ನು ಗಮನಿಸುತ್ತ ನಿಂತುಕೊಂಡಿದೆ. ರಾತ್ರಿಯ ತಂಪಿನಲ್ಲಿ ಕಾಲ ಕಳೆದು, ಬಾಲ ಸೂರ್ಯನ ಕಿರಣಗಳಿಗಾಗಿ ಕಾದು ಕುಳಿತಿದ್ದ ನೈದಿಲೆಯಂತೆ ಐಯಾನ್ ಮತ್ತು ಅಶ್ವಿನಿಯ ಕಣ್ಣುಗಳು

ಬಿರಿದವು. ಅವರಿಬ್ಬರು ರಾತ್ರಿ ರೋಬೋಟ್‌ಗೆ ನಿರ್ದೇಶನ ನೀಡದೆ ಮಲಗಿದ್ದರಿಂದ ರೋಬೋಟ್ ಅವರ ಹತ್ತಿರಕ್ಕೆ ಬಂದು ''ಮೆ ಐ ಹೆಲ್ಪ್ ಯು'' ಎಂದಿತು ವಿನಮ್ರವಾಗಿ.

ನಗ್ನಳಾಗಿದ್ದ ಅಶ್ವಿನಿ ದಿಢೀರನೆ ಕಣ್ಣು ಬಿಟ್ಟು ನೋಡುತ್ತಾಳೆ. ರೋಬೋಟ್ ಅವಳ ಹತ್ತಿರದಲ್ಲೇ ನಿಂತುಕೊಂಡು ಅವಳನ್ನೇ ನೋಡುತ್ತಿದೆ. ಅಶ್ವಿನಿ ಒಂದು ಕ್ಷಣ ಮಾನ ಕಳೆದುಕೊಂಡವಳಂತೆ ಬ್ಲಾಂಕೆಟನ್ನು ಸರ್ರನೆ ಮೈ ಮೇಲಕ್ಕೆ ಎಳೆದುಕೊಳ್ಳುತ್ತ ''ಕಂ ಆಫ್ಟರ್ ಥರ್ಟಿ ಮಿನಿಟ್ಸ್'' ಎಂದಳು.

''ಸಾರಿ ಮ್ಯಾಮ್'' ಎಂದ ರೋಬೋಟ್ ತನ್ನ ಸ್ಥಾನಕ್ಕೆ ಹೋಗಿ ನಿಂತುಕೊಂಡಿತು. ಅಶ್ವಿನಿ ಎದ್ದು ಕುಳಿತುಕೊಂಡು ಪ್ಯಾಂಟಿ ಮೇಲೆ ಸಣ್ಣದಾದ ನಿಕ್ಕರ್ ಮತ್ತು ದೊಗಳೆ ಶರ್ಟ್ ಧರಿಸಿ ಐಯಾನ್ ಬೆತ್ತಲೆ ದೇಹವನ್ನು ಮತ್ತೆ ತಬ್ಬಿಕೊಂಡು ಬ್ಲಾಂಕೆಟ್ ಎಳೆದುಕೊಂಡಳು.

ಅನಂತರ ಸ್ವಲ್ಪ ಸಮಯವಾದ ಮೇಲೆ ಕಣ್ಣು ಮುಚ್ಚಿಕೊಂಡೆ ರಿಮೋಟ್ ಕಂಟ್ರೋಲ್ ತೆಗೆದುಕೊಂಡು. ಪತಿ ಪತ್ನಿಯರು ಏಳುವ ಹೊತ್ತಿಗೆ ಉಳಿದ ರೋಬೋಟ್‌ಗಳು ಮಾಡಬೇಕಾದ ಕೆಲಸಗಳ ಬಗ್ಗೆ ಅಶ್ವಿನಿ ನಿರ್ದೇಶನ ನೀಡಿದಳು. ಅಶ್ವಿನಿ ನಿರ್ದೇಶನ ನೀಡಿದ್ದ ಸಮಯಕ್ಕೆ ಸರಿಯಾಗಿ ಎರಡು ಕಾಫಿ ಕಪ್ಪುಗಳನ್ನು ಟಿಪಾಯಿಯ ಮೇಲಿಟ್ಟು ರೋಬೋಟ್ ಬಂದು ''ಕಾಫಿ ತಯಾರಾಗಿದೆ'' ಎಂದು ಆಹ್ವಾನಿಸಿತು.

ಐಯಾನ್ ಮತ್ತು ಅಶ್ವಿನಿ ಮಂಪರು ಕಣ್ಣುಗಳನ್ನು ಉಜ್ಜಿಕೊಳ್ಳುತ್ತ ಟಿಪಾಯಿ ಮುಂದೆ ಕುರ್ಚಿಗಳ ಮೇಲೆ ಕುಳಿತುಕೊಂಡರು. ಗಾಯತ್ರಿ ಮಂತ್ರ ಹಾಲಿನಲ್ಲಿ ಸಣ್ಣದಾಗಿ ಕೇಳಿಬರುತ್ತಿದೆ. ಹಿಂದೆಯೆ ಗೋಡೆಗಳಲ್ಲಿ ಸಮೃದ್ಧ ಹಸಿರು ತುಂಬಿದ ಸಣ್ಣ ಸಣ್ಣ ತಪ್ಪಲುಗಳು, ತಪ್ಪಲುಗಳ ಮೇಲೆ ರಾಶಿ ರಾಶಿ ಮೋಡಗಳು ಕಾಣಿಸಿಕೊಂಡವು.

ಅಶ್ವಿನಿ ಮತ್ತು ಐಯಾನ್ ಕಾಫಿ ಹೀರಿ ತಮ್ಮದೆ ಪ್ರತ್ಯೇಕ ಸ್ನಾನದ ಕೋಣೆಗಳ ಕಡೆಗೆ ನಡೆದರು. ಅವರು ನಡೆದು ಬರುತ್ತಿದ್ದಂತೆ ಸ್ವಯಂಚಾಲಿತ ಬಾಗಿಲುಗಳು ತೆರೆದುಕೊಂಡವು. ಸ್ನಾನದ ಟಬ್ಬುಗಳಲ್ಲಿ ಉಗುರು ಬೆಚ್ಚನೆಯ ನೀರು ತುಂಬಿಕೊಂಡಿದೆ. ''ಇವೊತ್ತು ವರ್ಷದ ಮೊದಲ ದಿನ ಸೋಮವಾರ, ಸಮಯ ಆರು ಗಂಟೆ ಐವತ್ತೇಳು ನಿಮಿಷ ಇಪ್ಪತ್ತೇಳು ಸೆಕೆಂಡ್‌ಗಳು. ಉಷ್ಣಾಂಶ ಹತ್ತೊಂಬತ್ತು ಡಿಗ್ರಿ ಸೆಲ್ಸಿಯಸ್... ತೇವಾಂಶ ಶೇಕಡ ಅರವತ್ತೈದು...'' ಗೋಡೆಯಲ್ಲಿದ್ದ ಯಂತ್ರ ಹೇಳುತ್ತ ಹೋಗುತ್ತಿತ್ತು.

ಮೊದಲನೇ ವರ್ಷದ ಮೊದಲ ದಿನ ಅಶ್ವಿನಿ ಸ್ನಾನದ ಟಬ್ಬಿನ ಹತ್ತಿರಕ್ಕೆ ಹೋಗಿ ಅದರ ಒಳಕ್ಕೆ ಇಳಿಯದೆ ತುಟಿಯ ಮೇಲೆ ಕೈ ಇಟ್ಟುಕೊಂಡು ಅಲ್ಲೇ ನಿಂತುಕೊಂಡಳು. ಅವಳ ಮಿದುಳಿಗೆ ಒಂದು ಉಪಾಯ ಹೊಳೆಯಿತು. ಅಲ್ಲಿಂದ ಹಿಂದಕ್ಕೆ ತಿರುಗಿಕೊಂಡು ಐಯಾನ್ ಇದ್ದ ಸ್ನಾನದ ಕೋಣೆಯ ಒಳಗೆ ನುಗ್ಗಿದಳು. ಐಯಾನ್ ಆಗಲೆ ಟಬ್ಬಿನ ಒಳಗೆ ಅರ್ಧ ಮುಳುಗಿದ್ದು, ಒಳಕ್ಕೆ ಬಂದ ಅಶ್ವಿನಿಯನ್ನು ನೋಡಿ ಅವನ ತುಟಿಗಳು ಸಣ್ಣದಾಗಿ ಬಿರಿದವು. ಅಶ್ವಿನಿ ನೇರವಾಗಿ ಹೋಗಿ ಅವನ ಪಕ್ಕದಲ್ಲಿ ಸೇರಿಕೊಂಡಳು.

ಒಂದು ರೋಬೋಟ್ ಕಾಫಿ ಕಪ್ಪುಗಳನ್ನು ತೊಳೆದಿಟ್ಟು, ಅಂದಿನ ದಿನ ಪತ್ರಿಕೆ ತೆಗೆದುಕೊಂಡು ಟಿಪಾಯಿ ಮೇಲೆ ಹರಡುತ್ತಿದ್ದರೆ ಇನ್ನೊಂದು ರೋಬೋಟ್ ಕಾಸ್ಮೋರಾ ಹತ್ತಿರದಲ್ಲಿ ನಿಂತುಕೊಂಡು ಕಣ್ಣಲ್ಲಿ ಕಣ್ಣಿಟ್ಟು ಅವಳನ್ನೇ ಕಾಯುತ್ತಿತ್ತು. ಮತ್ತೊಂದು ರೋಬೋಟ್ ಅಡಿಗೆ ಮನೆಯಲ್ಲಿ ಬೆಳಗಿನ ಟಿಫಿನ್ ತಯಾರಿ ಮಾಡುತ್ತಿತ್ತು. ಆ ರೋಬೋಟ್‌ಗಳು ಏನೇನು ಮಾಡಬೇಕೆಂದು ಆಗಲೆ ಅಶ್ವಿನಿಯಿಂದ ಆದೇಶ ಪಡೆದುಕೊಂಡಿದ್ದವು.

ಐಯಾನ್ ಮತ್ತು ಅಶ್ವಿನಿಗೆ ಮದುವೆಯಾಗಿ ನಾಲ್ಕು ವರ್ಷಗಳು ಕಳೆದಿವೆ. ಐಯಾನ್ ಆರು ಅಡಿ ಹನ್ನೊಂದು ಅಂಗುಲ ಎತ್ತರವಿದ್ದರೆ ಅಶ್ವಿನಿ ಆರು ಅಡಿ ಎಂಟು ಅಂಗುಲ ಎತ್ತರ ಇದ್ದಾಳೆ. ಐಯಾನ್ ತೂಕ ಎಪ್ಪತ್ತೆಂಟು ಕೆಜಿಯಾದರೆ ಅಶ್ವಿನಿಯ ತೂಕ ಅರವತ್ತೇಳು ಕೆಜಿ. ಇಬ್ಬರದು ಹೆಚ್ಚು ಕಡಿಮೆ ಒಂದೇ ಬಣ್ಣ. ಎರಡು ಕುಟುಂಬಗಳು ಬಿಲಿಯನ್ ಟ್ರಿಲಿಯನ್ ಡಾಲರುಗಳಿಗೆ ಬಾಳುತ್ತವೆ.

ಇಂಡಿಯಾದಲ್ಲಿ ಮೊದಲು ರೂಪಾಯಿ ಎಂದು ಕರೆಯುತ್ತಿದ್ದ ಕರೆನ್ಸಿಯನ್ನು ಪ್ರಸ್ತುತ ರೂಪಯ್ಯ ಎಂದು ಕರೆಯುತ್ತಿದ್ದಾರೆ. ಒಂದು ಕಾಲದಲ್ಲಿ ಪ್ರಪಂಚವನ್ನೇ ಹಿಡಿತದಲ್ಲಿ ಇಟ್ಟುಕೊಂಡಿದ್ದ ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕಾ ಇಂದು ಛಿದ್ರಛಿದ್ರವಾಗಿ ಒಡೆದುಹೋಗಿದೆ. ಪ್ರಪಂಚದ ಎಲ್ಲಾ ದೇಶಗಳಲ್ಲೂ ಐಶ್ವರ್ಯವಂತರ ವಲಯಗಳು ಪ್ರತ್ಯೇಕವಾಗಿ ಬೆಳೆದು ನಿಂತಿವೆ. ಹಾಗೆ ಬಡತನದ ವಲಯಗಳು ಹರಡಿ ಹಾಸಿಕೊಂಡಿವೆ.

ಆದರೂ ಯುನೈಟೆಡ್ ಸ್ಟೇಟ್ಸ್ ಆಫ್ ಅಮೆರಿಕಾದ ಕೆಲವು ದೇಶಗಳು ಇಂದಿಗೂ ಪ್ರಪಚಂದ ಹಲವು ದೇಶಗಳನ್ನು ತಮ್ಮ ಕೈಗೊಂಬೆಗಳಂತೆ ಆಡಿಸುತ್ತಿವೆ.

ಯುನೈಟೆಡ್ ಸ್ಟೇಟ್ಸ್ ಆಫ್ ಇಂಡಿಯಾಗಿರುವ ಒಂದೇ ಒಂದು ತೊಡಕು ಎಂದರೆ ವಲಯ ಐದು, ಆರು ಮತ್ತು ಏಳು ಅಂದರೆ ಸಣ್ಣ ಸಣ್ಣ ದೊಡ್ಡ ದೊಡ್ಡ ಹಳ್ಳಿ, ಪಟ್ಟಣಗಳಲ್ಲಿ ಇನ್ನೂ ಬಡತನ ಹಾಗೇ ಉಳಿದುಕೊಂಡಿರುವುದು. ಜೊತೆಗೆ ಜಾತಿ, ಅಸ್ಪೃಶ್ಯತೆಗಳೆಂಬ ಭೂತಗಳು ಇನ್ನೂ ಈ ವಲಯಗಳಲ್ಲಿ ತಾಂಡವವಾಡುತ್ತಿವೆ.

ಐಯಾನ್ ಮತ್ತು ಅಶ್ವಿನಿ ಸ್ನಾನದ ಟಬ್ಬಿನಲ್ಲಿ ಬೆಚ್ಚನೆಯ ನೀರಿನಲ್ಲಿ ತುಸು ಹೊತ್ತು ಅಂಗಾಂಗಳನ್ನು ಸವರುತ್ತ ಕಾಲ ಕಳೆದು ಎದ್ದು ನಿಂತರು. ಸ್ವಚ್ಛ ನೀರನ್ನು ಚಿಮ್ಮಿಸುವ ತುಂತುರು ನೀರಿನ ಕೆಳಗೆ ನಿಂತು ಮೈ ಉಜ್ಜಿಕೊಂಡು ಅಲ್ಲಿಂದ ನಿಧಾನವಾಗಿ ಬಂದು ಕನ್ನಡಿಯ ಮುಂದೆ ನಿಂತರು. ವಿಶೇಷ ಹೂ ಎಲೆ ಪರಾಗಗಳಿಂದ ತೆಗೆದು ನೈಸರ್ಗಿಕ ಬೇಸ್‌ಗಳಿಂದ ತಯಾರಿಸಿದ್ದ ಗಮ ಗಮ ಸುವಾಸನೆಯುಳ್ಳ ಸುಗಂಧ ನೀರನ್ನು ಮಿತವಾಗಿ ಹಿತವಾಗಿ ಅವರು ದೇಹಗಳಿಗೆ ಬಳಿದುಕೊಂಡರು.

ಐಯಾನ್, ಅಶ್ವಿನಿಯ ರೂಪವನ್ನು ನೋಡಿ ತಡೆಯಲಾರದೆ ಅವಳ ಹತ್ತಿರಕ್ಕೆ ಸಾಗಿ ಮೃದುವಾಗಿ ಆಲಂಗಿಸಿಕೊಂಡು ಅವಳ ತುಟಿಗಳ ಮೇಲೆ ತನ್ನ ತುಟಿಗಳನ್ನು ಒಮ್ಮೆ ಒತ್ತಿದ.

ಅಶ್ವಿನಿಯ ಕಣ್ಣು ರೆಪ್ಪೆಗಳು ಚಿಟ್ಟೆಯ ರೆಕ್ಕೆಗಳಂತೆ ಪಟಪಟನೆ ಹೊಡೆದುಕೊಂಡವು. ಆ ಸದ್ದನ್ನು ಜೋರಾಗಿ ಕೇಳಬೇಕೆನ್ನುವ ಆಸೆ ಅವನಲ್ಲಿ ಅಂಕುರಿಸಿತು.

''ಅಶ್ವಿನಿ ಇಲ್ಲೆ ಇರು'' ಎಂದು ಐಯಾನ್ ಲೀವಿಂಗ್ ಕೋಣೆಗೆ ಹೋಗಿ ಮೇಜಿನ ಮೇಲಿದ್ದ ಒಂದು ಪುಟ್ಟ ಮೈಕ್ರೊ ರೆಕಾರ್ಡರನ್ನು ಕೈಗೆ ತೆಗೆದುಕೊಂಡ. ಐಯಾನ್ ಎಲ್ಲಿ ಹೋದ ಎನ್ನುವ ಕುತೂಹಲದಲ್ಲಿ ಅಶ್ವಿನಿ ಅವನಿಗಾಗಿ ಅಲ್ಲೇ ನಿಂತು ಕಾಯತೊಡಗಿದಳು. ಒಳಗೆ ಬಂದ ಐಯಾನ್ ತನ್ನ ಕೈಯಲ್ಲಿದ್ದ ಪುಟ್ಟ ಮೈಕ್ರೊ ರೆಕಾರ್ಡ್ ಸ್ವಿಚ್ಚನ್ನು ಒತ್ತಿ ''ಕಮಾನ್ ರೆಪ್ಪೆ ಆಡಿಸು'' ಎಂದ.

ಅಶ್ವಿನಿ ಕಣ್ಣು ರೆಪ್ಪೆಗಳನ್ನು ಚಿಟ್ಟೆಯಂತೆ ಬಡಿದುಕೊಂಡಳು. ಐಯಾನ್ ಮೈಕ್ರೊ ರೆಕಾರ್ಡರನ್ನು ಅವಳ ಕಣ್ಣುಗಳ ಹತ್ತಿರವಿಟ್ಟು ಸ್ವಿಚ್ ಒತ್ತಿ ಅವಳನ್ನು ನೋಡುತ್ತಾ ''ಬ್ಯೂಟಿಫುಲ್'' ಎಂದ. ಕೆಲವು ಕ್ಷಣಗಳಾದ ಮೇಲೆ ಅವಳ ಕೆನ್ನೆಗೆ ಚುಂಬಿಸಿದ. ಇಬ್ಬರು ಲೀವಿಂಗ್ ಕೋಣೆಗೆ ಬಂದರು. ಈಗ ಮನೆಯ ಮಾಸ್ಟರ್ ಕಂಟ್ರೋಲ್ ರೋಬೋಟ್ ಅಶ್ವಿನಿಯ ಹತ್ತಿರಕ್ಕ ಬಂದು ''ಬೇಬಿ ಕಾಸ್ಮೋರಾ ಎದ್ದಿದ್ದಾಳೆ... ಕರೆದು ತರೂದೆ?'' ಕೇಳಿತು.

ಅಶ್ವಿನಿ ಎದ್ದು ಹೋಗಿ ಮಗುವನ್ನು ಮೃದುವಾಗಿ ತಟ್ಟಿ ಮಾತನಾಡಿಸಿದಳು. ಮಗು ಇನ್ನು ಅರೆಕೊರೆ ನಿದ್ದೆಯಲ್ಲೇ ಆಕಳಿಸುತ್ತಿತ್ತು. ''ಮಗು ಎದ್ದು ಕುಳಿತ ಮೇಲೆ ಕರೆದ್ಕೊಂಡು ಬಾ...'' ಎಂದು ರೋಬೋಟ್‌ಗೆ ಅಶ್ವಿನಿ ನಿರ್ದೇಶನ ನೀಡಿ ಹಿಂದಕ್ಕೆ ಬಂದಳು. ಅವರಿಗಾಗಿ ಮೇಜಿನ ಮೇಲೆ ತಿಂಡಿ ತಯಾರಾಗಿತ್ತು.

ಈಗ ಮೈಕ್ರೊ ರೆಕಾರ್ಡರನ್ನು ಕಂಪ್ಯೂಟರ್ ಮೋಡ್‌ಗೆ ಪೋಣಿಸಿ ಅದರಿಂದ ಒಮ್ಮುವ ಸದ್ದನ್ನು ಆಲಿಸತೊಡಗಿದ. ಒಂದು ಹದ್ದು ನೆಲದಿಂದ ಆಕಾಶದ ಕಡೆಗೆ ಹಾರುವ ಮುನ್ನ ರೆಕ್ಕೆಗಳನ್ನು ಬಡಿದುಕೊಂಡು ಏಳುವಾಗಿನ ಸದ್ದು ಅನಂತರ ನಿಧಾನವಾಗಿ ಚಿಟ್ಟೆಯೊಂದು ನಿಶ್ಯಬ್ದ ಸಮಯದಲ್ಲಿ ಕಿವಿಯ ಪಕ್ಕದಿಂದ ಹಾರಿಹೋಗುವಾಗ ಕೇಳುವ ಸದ್ದಿನಂತೆ ಕೇಳಿಸತೊಡಗಿತು. ಐಯಾನ್ ಕಂಪ್ಯೂಟರ್ ಮುಂದೆ ಕುಳಿತು ಸದ್ದನ್ನು ಇನ್ನಷ್ಟು ಮತ್ತಷ್ಟು ಹೆಚ್ಚಿಸುತ್ತಾ ಹೋದ. ಗಂಡು ನವಿಲು ತನ್ನ ಭಾರಿ ರೆಕ್ಕೆಗಳನ್ನು ಬಡಿದುಕೊಳ್ಳುವ ಸದ್ದು ಕೇಳಿಸತೊಡಗಿತು.

''ಇದೇನು ಸದ್ದು?'' ಅಶ್ವಿನಿ, ಐಯಾನ್ ಇದ್ದ ಕಡೆಗೆ ಬಂದು ನೋಡುತ್ತಾಳೆ. ಕಂಪ್ಯೂಟರ್ ಮೂಲಕ ಗೋಡೆಗಳಲ್ಲಿದ್ದ ಸ್ಪೀಕರ್‌ಗಳಲ್ಲಿ ಬೆಟ್ಟ ಗುಡ್ಡಗಳೇ ಹಾರಿ ಹೋಗುವಂತಹ ಸದ್ದು. ''ಏನಿದು ಸದ್ದು...?'' ಅಶ್ವಿನಿ ಕೇಳಿದಳು. ಐಯಾನ್ ಅಶ್ವಿನಿ ಕಡೆಗೆ ನೋಡುತ್ತ ''ಅದೇ ನಿನ್ನ ಕಣ್ಣು ರೆಪ್ಪೆಗಳ ಚಂಚಲತೆಯ ಸದ್ದು'' ಎಂದ. ಅಶ್ವಿನಿ ''ವಾವ್...'' ಎಂದು ಗೋಡೆಗಳ ಮೇಲಿನ ದೃಶ್ಯಗಳ ಜೊತೆಗೆ ಐಯಾನ್ ಸೃಷ್ಟಿಸಿರುವ ಸದ್ದನ್ನು ದಂಪತಿಗಳಿಬ್ಬರು ಸ್ವಲ್ಪ ಹೊತ್ತು ಸಿಮ್ಯುಲೇಷನ್ ಇಫೆಕ್ಟ್‌ನ ಜೊತೆಗೆ ಮನೆಯಲ್ಲೇ ಕುಳಿತುಕೊಂಡು ತಂಪುದಾಣದಲ್ಲಿ ಇರುವಂತೆ ಆನಂದಿಸಿದರು.

ಇದೇ ರೀತಿಯಾಗಿ ಐಯಾನ್ ಒಮ್ಮೆ ಅಶ್ವಿನಿ ನಿದ್ದೆ ಮಾಡುತ್ತಿದ್ದಾಗ ಅವಳ ಹೃದಯದ ಬಡಿತವನ್ನು ರೆಕಾರ್ಡ್ ಮಾಡಿ ಅವಳಿಗೆ ಕೇಳಿಸಿದಾಗ ಬೆಟ್ಟ ಗುಡ್ಡಗಳೆ ಕಂಪಿಸಿದಂತೆ ಮನೆಯೆ ಬಿದ್ದು ಹೋಗುವಂತಹ ಸದ್ದನ್ನು ಕೇಳಿದ ಅಶ್ವಿನಿ "ಇದು ಯಾವ ಸದ್ದು...?" ಎಂದು ಆಶ್ಚರ್ಯ ವ್ಯಕ್ತಪಡಿಸಿದಳು. "ಇದು ಯಾವ ಕೃತಕ ಸದ್ದೂ ಅಲ್ಲ. ಪ್ರಪಂಚವೆ ಜೀವ ತುಂಬಿ ನಡೆದಾಡುತ್ತಿರುವ ಸದ್ದು... ನಿನ್ನ ಹೃದಯ ಬಡಿತ" ಎಂದಿದ್ದ. ಅಶ್ವಿನಿ ಅವಳ ಹೃದಯದ ಬಡಿತವನ್ನು ಕೇಳಿ ಕಂಗಾಲಾಗಿ ಹೋಗಿದ್ದಳು.

ಈಗ ಇಬ್ಬರೂ ಡೈನಿಂಗ್ ಟೇಬಲ್ ಮೇಲೆ ಕುಳಿತುಕೊಂಡರು. ರೋಬೋಟ್ ಫ್ರಿಜ್‌ನಿಂದ ಕೆಲವು ಐಸ್ ತಿಂಡಿಗಳನ್ನು ತೆಗೆದುಕೊಂಡು ಮೈಕ್ರೋ ಓವನ್‌ನಲ್ಲಿಟ್ಟು ಬಿಸಿ ಮಾಡಿ ಟೇಬಲ್ ಮೇಲೆ ಇಟ್ಟಿತ್ತು. ಅಶ್ವಿನಿ ರಿಮೋಟ್ ಕಂಟ್ರೋಲ್ ತೆಗೆದುಕೊಂಡು ಬಟನ್ ಒತ್ತಿದಳು.

ರೋಬೋಟ್ ಒಂದು ಸಣ್ಣ ಯಂತ್ರವನ್ನು ತಂದು ಮೇಜಿನ ಮೇಲೆ ಇಟ್ಟಿತು. ಅಶ್ವಿನಿ ಈ ಪುಟ್ಟ ಯಂತ್ರವನ್ನು ತೆಗೆದುಕೊಂಡು ತಿಂಡಿಗಳ ಮುಂದೆ ಇಟ್ಟಳು. ಆ ಯಂತ್ರ ಆಹಾರ ತಿನ್ನಲು ಯೋಗ್ಯವಾಗಿದೆ ಎಂದು ಸಲಹೆ ನೀಡಿತು. ಅಶ್ವಿನಿ ಆ ಯಂತ್ರವನ್ನು ಮೇಜಿನ ಮೇಲೆ ಇಟ್ಟಿದ್ದೆ ರೋಬೋಟ್ ಯಂತ್ರವನ್ನು ತೆಗೆದುಕೊಂಡೋಗಿ ಯಥಾ ಸ್ಥಾನದಲ್ಲಿ ಇಟ್ಟು ಬಂದಿತು. ಐಯಾನ್ ಮತ್ತು ಅಶ್ವಿನಿ ತಿಂಡಿ ತಿಂದು ಕಾಫಿ ಕುಡಿದರು.

ಈ ನಡುವೆ ಅವರ ಪುಟ್ಟ ಮಗಳು ಕಾಸ್ಮೋರಾ ಎದ್ದು ಕುಳಿತಿದ್ದಳು. ಕಾಸ್ಮೋರಾಳನ್ನು ನೋಡಿಕೊಳ್ಳುತ್ತಿದ್ದ ರೋಬೋಟ್ ಅವಳನ್ನು ಸ್ನಾನದ ಕೋಣೆಗೆ ಕರೆದುಕೊಂಡು ಹೋಗಿ ಹಲ್ಲು ಉಜ್ಜಿ ಸ್ನಾನ ಮಾಡಿಸಿ ಟವಲಿನಿಂದ ದೇಹವನ್ನು ಒರೆಸಿ, ಪೌಡರ್ ಹಚ್ಚಿ ಬಟ್ಟೆ ಬದಲಾಯಿಸಿ ಅವಳನ್ನು ನಿಧಾನವಾಗಿ ನಡೆಸಿಕೊಂಡು ಬಂದು ಅವಳ ತಾಯಿಯ ಹತ್ತಿರಕ್ಕೆ ತಂದು ಬಿಟ್ಟಿತು. ಅಶ್ವಿನಿ ಮಗಳ ಕೆಂಪು ಕೆನ್ನೆಗೆ ಒಂದು ಮುತ್ತು ಕೊಟ್ಟು ಎದೆಗೆ ತಬ್ಬಿಕೊಂಡು ಅನಂತರ ತೊಡೆಯ ಮೇಲೆ ಕೂರಿಸಿಕೊಂಡಳು. ರೋಬೋಟ್ ಅವಳು ಆಡಿಕೊಳ್ಳುವ ಬೊಂಬೆಗಳನ್ನು ಅಣಿಗೊಳಿಸಲು ಹೊರಟುಹೋಯಿತು.

ಐಯಾನ್ ಕಛೇರಿಗೆ ಹೋಗಲು ತಯಾರಾಗುತ್ತಿದ್ದರೆ ಅಶ್ವಿನಿ ಮಗುವಿಗೆ ಖನಿಜಗಳು ಮತ್ತು ಪ್ರೋಟಿನ್ ಮಿಶ್ರಣ ಹಾಲು ಕುಡಿಸಿ ಮಗುವಿನ ಕೈಯಿಗೆ ವಿಶೇಷ ಚಾಕೋಲೇಟ್ ಒಂದನ್ನು ಕೊಟ್ಟಳು. ಐಯಾನ್ ತನಗೆ ಬೇಕಾದ ವಸ್ತುಗಳನ್ನು ತುಂಬಿಕೊಂಡು ಬ್ರೀಫ್‌ಕೇಸ್ ಜೊತೆಗೆ ತನ್ನ ಕೋಣೆಯಿಂದ ಹಾಲ್‌ಗೆ ಬಂದ.

ಕಾಸ್ಮೋರಾ ನಿಂತಿರುವುದನ್ನು ನೋಡಿ "ಹಲೊ ಕಾಸ್ಮು...?" ಬಗ್ಗಿ ಅವಳ ಕೆನ್ನೆಗೆ ಒಂದು ಮುತ್ತು ನೀಡಿದ. ಕೆನ್ನೆ ಸ್ನಾಯುಗಳು ಸಡಿಲಗೊಂಡು ಕಾಸ್ಮೋರಾ ಕಣ್ಣುಗಳಲ್ಲಿ ಕಚುಗುಳಿ ಕಾಣಿಸಿಕೊಂಡಿತು. ಮಗುವಿನ ಮುಖವನ್ನು ನೋಡುತ್ತಿದ್ದಂತೆ ಅಶ್ವಿನಿಯ

ತುಟಿಗಳು ಬಿರಿದವು. ಐಯಾನ್ ಈಗ ಅಶ್ವಿನಿಯ ಕಡೆಗೆ ಮುಖ ತಿರುಗಿಸಿ ಅವಳ ತುಟಿಗಳಿಗೆ ತನ್ನ ತುಟಿಗಳನ್ನು ಒತ್ತಿದ. ಮಗು ಇಬ್ಬರನ್ನು ನೋಡುತ್ತಿತ್ತು.

"ಓಕೆ ನಾನು ಬರ್ತೀನಿ...?" ಎಂದ ಐಯಾನ್ ಬ್ರೀಫ್‌ಕೇಸ್ ಜೊತೆಗೆ ಬಾಗಿಲು ಹತ್ತಿರ ಹೋಗಿದ್ದೆ ವಾಗಿಲು ತೆರೆದುಕೊಂಡಿತು. ಐಯಾನ್ ಬಾಗಿಲು ದಾಟುತ್ತಿದ್ದಂತೆ "ಹ್ಯಾವ್ ಎ ನೈಸ್ ಡೇ..." ಎಂದಳು ಅಶ್ವಿನಿ. ಕಾಸ್ಮೋರಾ ಕೈ ಆಡಿಸಿದಳು.



ಸೌರಮಂಡಲದಲ್ಲಿ 4.6 ಬಿಲಿಯ ವರ್ಷಗಳ ಹಿಂದೆ ಭೂಮಿ ಸೃಷ್ಟಿಯಾಯಿತು. ಭೂಮಿಯ ಮೇಲೆ ಸುಮಾರು 3.5 ಬಿಲಿಯ ವರ್ಷಗಳ ಹಿಂದೆ ಏಕಕೋಶ ಜೀವಿಗಳು ಹುಟ್ಟಿ , ಜೀವ ವಿಕಾಸ ಹೊಂದುತ್ತಾ ಹೋಗಿ ದಶಲಕ್ಷ ವರ್ಷಗಳ ಹಿಂದೆ ಆದಿಮಾನವ ರೂಪಗೊಂಡ ನೈಸರ್ಗಿಕ ಸೃಷ್ಟಿಯ ಅದ್ಭುತಗಳ ನಡುವೆ ಮಾನವನು ಸಹ ಭೂಮಿಯ ಮೇಲೆ ಒಂದೊಂದೆ ಅದ್ಭುತಗಳನ್ನು ಸೃಷ್ಟಿಸತೊಡಗಿದ. ಮಾತು ಭಾಷೆಯಾಯಿತು, ಭಾಷೆ ಸಾಹಿತ್ಯವಾಯಿತು. ಲೋಹಗಳನ್ನು ಉಪಯೋಗಿಸಲಾಯಿತು. ಪ್ರಪಂಚದ ಮೂಲೆ ಮೂಲೆಯಲ್ಲಿ ಮಾನವ ನಿರ್ಮಿತ ಸ್ಮಾರಕಗಳು ಸೃಷ್ಟಿಯಾದವು. ಮಾನವ ಚಂದ್ರನನ್ನು ತಲುಪಿ ಹಿಂದಿರುಗಿದ. ವಿದ್ಯುತ್, ಕಂಪ್ಯೂಟರ್ ಸೃಷ್ಟಿಯಾಯಿತು. ಐಟಿಬಿಟಿ ನಗರಗಳು ಸೃಷ್ಟಿಯಾದವು. ಇವುಗಳಲ್ಲಿ ಕೆಲಸ ನಿರ್ವಹಿಸುವವರನ್ನು ಟೆಕ್ಕಿಗಳೆಂದು ಕರೆಯಲಾಯಿತು. ಪ್ರಸ್ತುತ ಜಿನೋಮ್ ನಕ್ಷೆಯ ತಯಾರಿ ಮುಗಿದಿದೆ.



ಯುನೈಟೆಡ್ ಸ್ಟೇಟ್ಸ್ ಆಫ್ ಇಂಡಿಯಾದಲ್ಲಿ ಐವತ್ತಾರು ರಾಜ್ಯಗಳಿದ್ದು ನೂರಾರು ನಗರಗಳಿವೆ. ಅವುಗಳನ್ನು ಎ ಬಿ ಸಿ ಡಿ ಇ ವಲಯಗಳೆಂದು ವರ್ಗೀಕರಿಸಲಾಗಿದೆ. ಜೊತೆಗೆ ಸಾವಿರಾರು ಪಟ್ಟಣಗಳು, ಲಕ್ಷಾಂತರ ಹಳ್ಳಿಗಳಿವೆ. ಯುಎಸ್‌ಐನಲ್ಲಿರುವ ನಗರಗಳಲ್ಲ ಪ್ರಸ್ತುತ ಬೆನ್ ನಗರವೆ ಸುಂದರವಾದುದು ಮತ್ತು ವಿಶಾಲವಾದುದು.

ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಮಹಾಭಾರತ ಘಟಿಸಿದ ಸಮಯದಲ್ಲಿ ಪಾಂಡವರ ರಾಜಧಾನಿ ಇಂದ್ರಪ್ರಸ್ಥ ಇದ್ದುದಾಗಿ ತಿಳಿದುಬರುತ್ತದೆ. ಅನಂತರ ಬ್ರಿಟಿಷರ ಕಾಲದಲ್ಲಿ ಅಂದರೆ ಕ್ರಿ.ಶ. 1912ರವರೆಗೆ ಪೂರ್ವದ ಬಂಗಾಳಕೊಲ್ಲಿಯ ತಟದಲ್ಲಿರುವ ಕೆನ್‌ನಗರ ಇಂಡಿಯಾ ದೇಶದ ರಾಜಧಾನಿಯಾಗಿತ್ತು. ಕ್ರಿ.ಶ. 1912 ರಿಂದ ಕ್ರಿ.ಶ. 2022ರವರೆಗೆ ಇಂದ್ರಪ್ರಸ್ಥ ದೆಹಲಿ ಎಂಬ ಹೆಸರಿನಲ್ಲಿ ಇಂಡಿಯಾ ದೇಶದ ರಾಜಧಾನಿಯಾಗಿತ್ತು. ಕ್ರಿ.ಶ. 2022ರ ನಂತರ ಯುಎಸ್‌ಐ ಎರಡು ವಿಭಾಗಗಳಾಗಿ ಒಡೆದುಕೊಂಡಿತು.

ಯುಎಸ್‌ಐ ಉತ್ತರ ಮತ್ತು ಯುಎಸ್‌ಐ ದಕ್ಷಿಣ ದೇಶಗಳು. ಉತ್ತರ ದೇಶಗಳಿಗೆ ದೇಲ್‌ನಗರ ರಾಜಧಾನಿಯಾದರೆ ದಕ್ಷಿಣ ದೇಶಗಳಿಗೆ ಬೆನ್ ನಗರ ರಾಜಧಾನಿಯಾಯಿತು.

ಯುಎಸ್‌ಐನಲ್ಲಿ ಏಳು ಎ ನಗರಗಳು, ಹದಿನಾಲ್ಕು ಬಿ ನಗರಗಳು, ಇಪ್ಪತ್ತೆಂಟು ಸಿ ನಗರಗಳು, ಐವತ್ತಾರು ಡಿ ನಗರಗಳು, ನೂರಾ ಇಪ್ಪತ್ತೇಳು ಇ ನಗರಗಳು ಇವೆ. ಇವುಗಳ ಜೊತೆಗೆ ಸಾವಿರಾರು ಸಣ್ಣ ಮಧ್ಯಮ ಮತ್ತು ದೊಡ್ಡ ಪಟ್ಟಣಗಳು, ಲಕ್ಷಾಂತರ ಹಳ್ಳಿ ಪ್ರದೇಶಗಳು ಇವೆ.

ಎ ನಗರಗಳಲ್ಲಿ ಒಂದರಿಂದ ಮೂರು ವಲಯಗಳು, ಬಿ ನಗರಗಳಲ್ಲಿ ಎರಡರಿಂದ ನಾಲ್ಕು ವಲಯಗಳು, ಸಿ ನಗರಗಳಲ್ಲಿ ಮೂರರಿಂದ ಐದು ವಲಯಗಳು, ಡಿ ನಗರಗಳಲ್ಲಿ ನಾಲ್ಕರಿಂದ ಆರು ವಲಯಗಳು, ಇ ನಗರಗಳಲ್ಲಿ ಐದರಿಂದ ಏಳು ವಲಯಗಳು ಇವೆ. ಇವುಗಳನ್ನು ಆರ್ಥಿಕ ಬಲದಿಂದ ವಿಂಗಡಿಸಲಾಗಿದೆ.

ಎ ನಗರದ ವಲಯ ಒಂದರಲ್ಲಿರುವವರು ವರ್ಷಕ್ಕೆ ಒಂದು ಬಿಲಿಯನ್ ರೂಪಾಯಿಗಳಿಗಿಂತ ಹೆಚ್ಚು ಆದಾಯ ಇರುವವರು, ವಲಯ ಎರಡರಲ್ಲಿರುವವರು ಒಂದು ಬಿಲಿಯನ್‌ನಿಂದ ಐವತ್ತು ಕೋಟಿ ರೂಪಾಯಿಗಳ ಆದಾಯ ಇರುವವರು. ಮೂರನೇ ವಲಯದಲ್ಲಿರುವವರು ಐವತ್ತು ಕೋಟಿಯಿಂದ ಇಪ್ಪತ್ತೈದು ಕೋಟಿ ಆದಾಯ ಇರುವವರು. ಮೂರನೇ ವಲಯದಲ್ಲಿರುವವರು ಐವತ್ತು ಕೋಟಿಯಿಂದ ಇಪ್ಪತ್ತೈದು ಕೋಟಿ ಆದಾಯ ಇರುವವರು. ನಾಲ್ಕನೇ ವಲಯದಲ್ಲಿರುವವರು ಇಪ್ಪತ್ತೈದು ಕೋಟಿಯಿಂದ ಹತ್ತು ಕೋಟಿ ರೂಪಾಯಿಗಳು ಆದಾಯ ಇರುವವರು. ಐದನೇ ವಲಯದಲ್ಲಿರುವವರ ಆದಾಯ ಹತ್ತು ಕೋಟಿಯಿಂದ ಐದು ಕೋಟಿ ರೂಪಾಯಿಗಳು. ಆರನೇ ವಲಯದಲ್ಲಿರುವವರ ಆದಾಯ ಐದು ಕೋಟಿಯಿಂದ ಕೆಳಗೆ. ಏಳನೇ ವಲಯದವರ ಆದಾಯ ಎರಡು ಕೋಟಿಗಿಂತ ಒಳಗಿನ ಆದಾಯ. ಅದಕ್ಕಿಂತಲೂ ಕೆಳಗಿನ ಆದಾಯ ಇರುವವರೆಂದರೆ ಸಣ್ಣ ಮಧ್ಯಮ ನಗರಗಳು ಮತ್ತು ಹಳ್ಳಿ ಪ್ರದೇಶಗಳಲ್ಲಿ ವಾಸಿಸುವ ಜನಗಳು.

ಬೆನ್ ನಗರದ ಎ ವಲಯದಲ್ಲಿ ಒಂದು ಸಾವಿರ ಸೂಪರ್ ಸ್ಮಾರ್ಟ್ ಬಂಗಲೆಗಳಿದ್ದು ಎಲ್ಲವೂ ಅಂತಾರಾಷ್ಟ್ರೀಯ ಮಟ್ಟದಲ್ಲಿ ರೂಪುಗೊಂಡಿರುವ ಬಂಗಲೆಗಳು. ಈ ಬಂಗಲೆಗಳಲ್ಲಿ ವಾಸಿಸುವವರೆಲ್ಲ ಬಿಲಿಯನ್... ಟ್ರಿಲಿಯನ್ ರೂಪಾಯಿಗಳಿಗೆ ಬಾಳುವವರು. ಈ ವಲಯದ ಸುತ್ತಲು ಮೂರು ಪ್ರತ್ಯೇಕ ಭದ್ರತಾ ಗೋಡೆಗಳಿವೆ. ಯಾವುದೇ ರೀತಿಯ ಹೊರಗಿನ ವಸ್ತುಗಳಾಗಲಿ, ಮನುಷ್ಯರಾಗಲಿ ಕಣ್ಣು ತಪ್ಪಿಸಿ ಒಳಗೆ ನುಸುಳಲು ಸಾಧ್ಯವೇ ಇಲ್ಲ.

ಎಲ್ಲಾ ದಿಕ್ಕುಗಳಲ್ಲೂ ಎತ್ತರದಲ್ಲಿ ವಿಶೇಷ ಸ್ವಯಂಚಾಲಿತ ಕ್ಯಾಮರಾಗಳನ್ನು ಜೋಡಿಸಿ ಕಾವಲು ಕಾಯಲಾಗಿದೆ. ಜೊತೆಗೆ ಒಂದೆರೆಡು ಉಪಗ್ರಹಗಳು ಆ ಮನೆಗಳ ಮೇಲೆ ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿವೆ. ಪ್ರತಿಯೊಂದು ಬಾಗಿಲಲ್ಲೂ ಸೂಪರ್ ಕಂಪ್ಯೂಟರ್‌ಗಳಿವೆ. ಯಾರೇ

ಒಳಗೆ ಹೋಗಬೇಕಾದರೂ ತಮ್ಮಲ್ಲಿರುವ ಮ್ಯಾಗ್ನೆಟಿಕ್ ಕಾರ್ಡುಗಳನ್ನು ರೋಬೋಟ್‌ಗೆ ಕೊಟ್ಟರೆ, ರೋಬೋಟ್ ಕಂಪ್ಯೂಟರುಗಳ ಮುಂದಿಟ್ಟು ಅಪ್ಪಣೆಯನ್ನು ನೀಡುತ್ತದೆ.

ಆ ವಲಯದಲ್ಲಿ ವಾಸಿಸುವ ಪ್ರತಿಯೊಬ್ಬರ ಭಾವಚಿತ್ರಗಳು ಮತ್ತು ಅವರ ಅಂಗಾಂಗಗಳ ವಿವರಗಳನ್ನು ರಕ್ತ ಗುಂಪು, ಜೀನ್ಸ್ ಸಲ್ವೆವ್ ವೈದ್ಯಕೀಯ ಇತ್ಯಾದಿ ವಿವರಗಳನ್ನು ಕಂಪ್ಯೂಟರ್‌ಗಳು ತಮ್ಮ ಒಡಲಲ್ಲಿ ತುಂಬಿಕೊಂಡಿವೆ. ಸೂಪರ್‌ಸ್ಮಾರ್ಟ್ ಸಾವಿರ ಮನೆಗಳ ಆ ವಲಯ ಹತ್ತು ಸಾವಿರ ಎಕರೆಗಳಲ್ಲಿ ಹರಡಿಕೊಂಡಿದ್ದು ಎಲ್ಲಾ ರೀತಿಯ ಸವಲತ್ತುಗ್ಗಳು ಒಳಗಡೆಯೇ ಇದೆ.

ಈಜುಕೊಳಗಳು, ಕ್ಲಬ್ಬುಗಳು, ಪಾರ್ಲರ್‌ಗಳು, ಹೂತೋಟಗಳು, ಆಟದ ಮೈದಾನಗಳು, ಫಿಲ್ಮ್ ಸ್ಟುಡಿಯೋ, ಶಾಲೆ ಕಾಲೇಜುಗಳು ಎಲ್ಲಾ ವಸ್ತುಗಳು ದೊರಕುವ ಸೂಪರ್ ಮಾರ್ಕೆಟ್ಟುಗಳು... ಹೀಗೆ ಒಟ್ಟಿನಲ್ಲಿ ಪ್ರಪಂಚದ ಯಾವುದೇ ಮೂಲೆಯಲ್ಲಿ ದೊರಕುವ ವಸ್ತುಗಳು ಅಲ್ಲಿ ದೊರಕುತ್ತವೆ. ಯಾವುದೇ ವೈಜ್ಞಾನಿಕ ಲ್ಯಾಬ್‌ನಲ್ಲಿ ರಾತ್ರಿ ಅವಿಷ್ಕಾರಗೊಂಡ ಹೊಚ್ಚ ಹೊಸ ವಸ್ತು ಮತ್ತು ಯಂತ್ರಗಳು ಬೆಳಗ್ಗೆಯೇ ಆ ವಲಯದಲ್ಲಿ ಕಾಣಿಸಿಕೊಳ್ಳುತ್ತವೆ.



ಅಶ್ವಿನಿ ತನ್ನ ಪ್ರೀತಿಯ ಮಗಳನ್ನು ಕಿಂಡರ್ ಗಾರ್ಟನ್ ಬೇಬಿ ಸಿಟ್ಟಿಂಗ್‌ಗೆ ಕರೆದುಕೊಂಡು ಹೋಗಲು ತಯಾರಿ ಮಾಡುತ್ತಿದ್ದಾಳೆ. ಸೂಪರ್ ರೋಬೋಟ್‌ಗಳು ಕಲಿಸುವ ಬೇಬಿ ಸಿಟ್ಟಿಂಗ್ ಉಸ್ತುವಾರಿ ನೋಡಿಕೊಳ್ಳಲು ಒಬ್ಬಳು ಹೆಣ್ಣು ಮಾತ್ರ ಆ ಶಾಲೆಯಲ್ಲಿ ಇರುತ್ತಾಳೆ. ಅಶ್ವಿನಿ ತನ್ನ ಪುಟ್ಟ ಮಗಳನ್ನು ಕಾರಿನಲ್ಲಿ ಕೂರಿಸಿಕೊಂಡು ಬೇಬಿ ಸಿಟ್ಟಿಂಗ್ ನಡೆಯುತ್ತಿದ್ದ ಕಟ್ಟಡದ ಕಡೆಗೆ ಕಾರನ್ನು ಓಡಿಸಿದಳು.

ಕಾರನ್ನು ಕಟ್ಟಡದ ಮುಂದೆ ನಿಲ್ಲಿಸಿದ ಅಶ್ವಿನಿ ತನ್ನ ಮಗಳನ್ನು ಕೈಹಿಡಿದುಕೊಂಡು ಕಟ್ಟಡದ ಬಾಗಿಲಿಗೆ ಬಂದಳು. ಬಾಗಿಲಲ್ಲೆ ಕಾಯುತ್ತಿದ್ದ ರೋಬೋಟ್ ಬಂದು ಮಗುವಿನ ಕೈ ಹಿಡಿದುಕೊಂಡು ಒಳಕ್ಕೆ ನಡೆಸಿಕೊಂಡು ಹೋಗುತ್ತಿದ್ದಂತೆ ಅಶ್ವಿನಿ ನೋಡುತ್ತ ನಿಂತುಕೊಂಡಳು. ಅನಂತರ ಹಿಂದಕ್ಕೆ ಬಂದು ಕಾರಿನಲ್ಲಿ ಕುಳಿತುಕೊಂಡಳು. ಕಾರು ಚಲಿಸತೊಡಗಿತು.

ರೋಬೋಟುಗಳು ನಡೆಸುವ ಆ ಬೇಬಿ ಸಿಟ್ಟಿಂಗ್‌ನಲ್ಲಿ ಮಕ್ಕಳಿಗೆ ನೂರಕ್ಕೆ ನೂರರಷ್ಟು ಸೇಫ್ಟಿ ಇದೆ. ಪೋಷಕರು ತಮ್ಮ ಮಕ್ಕಳು ಏನು ಮಾಡುತ್ತಿವೆ ಎನ್ನುವುದನ್ನು ಇಂಟರ್‌ನೆಟ್ ಮೂಲಕ ನೋಡುವ ವ್ಯವಸ್ಥೆ ಇದೆ. ಯಾವ ಮಗು ಏನು ಕೇಳುತ್ತಿದೆ? ಅದಕ್ಕೆ ಏನು ಬೇಕಾಗುತ್ತದೆ ಎನ್ನುವುದನ್ನು ಅರಿತುಕೊಳ್ಳುವ ಆ ರೋಬೋಟ್‌ಗಳು ಬಣ್ಣ ಬಣ್ಣದ ಬೊಂಬೆಗಳನ್ನು ಎತ್ತಿಕೊಂಡು ಮಕ್ಕಳ ಮುಂದೆ ಆಡಿಸುತ್ತವೆ. ಮಕ್ಕಳು ಆಟ ಆಡುವಾಗ

ಆಯ ತಪ್ಪಿ ಕೆಳಕ್ಕೆ ಬೀಳುವುದಕ್ಕಿಂತ ಮುಂಚೆಯೆ ರೋಬೋಟ್‌ಗಳು ಮಕ್ಕಳನ್ನು ಹಿಡಿದುಕೊಳ್ಳುತ್ತವೆ.

ಒಂದೊಂದು ಮಗುವನ್ನು ನೋಡಿಕೊಳ್ಳಲು ಒಂದೊಂದು ರೋಬೋಟ್ ಇದ್ದು ಅವುಗಳಿಗೆ ನಿರ್ದೇಶನ ನೀಡುವ ಸೂಪರ್ ರೋಬೋಟ್‌ಗಳಿವೆ. ಇವುಗಳನ್ನೆಲ್ಲ ನೋಡಿಕೊಳ್ಳಲು ಇಡೀ ಶಾಲೆಗೆ ಉಪಾಧ್ಯಾಯಿನಿ ಒಬ್ಬಳಿದ್ದಾಳೆ. ಒಂದೊಂದು ತರಗತಿಯಲ್ಲೂ ಸಾಕಷ್ಟು ಬೊಂಬೆಗಳು ಮತ್ತು ಹಲವು ರೀತಿಯ ಉಪಕರಣಗಳಿವೆ. ಪಕ್ಷಿಗಳಂತೆ, ಪ್ರಾಣಿಗಳಂತೆ ಉಲಿಯುವ ಯಂತ್ರಗಳು, ಗೋಡೆಗಳ ತುಂಬಾ ಬಣ್ಣ ಬಣ್ಣದ ಪಕ್ಷಿ, ಪ್ರಾಣಿಗಳು... ಹಚ್ಚಹಸಿರು ತಪ್ಪಲುಗಳು... ಮೋಡಗಳು ಹೀಗೆ ನಿಮಿಷ ನಿಮಿಷಕ್ಕೂ ಬದಲಾಗುವ ವ್ಯವಸ್ಥೆಯನ್ನು ಆ ಕೋಣೆಯಲ್ಲಿ ಮಾಡಲಾಗಿದೆ. ಇದೆಲ್ಲದರ ಜೊತೆಗೆ ದಿನಕ್ಕಿಷ್ಟು ಪಾಠಗಳನ್ನು ರೋಬೋಟ್‌ಗಳು ಮಕ್ಕಳಿಗೆ ಕಲಿಸುತ್ತವೆ.



ಸಾಯಂಕಾಲ ಎಂಟು ಗಂಟೆ ಸಮಯ. ಬೆನ್ ನಗರದ ಐದನೆಯ ವಲಯದಲ್ಲಿರುವ ಬಹು ಮಹಡಿಯ ಕಛೇರಿಯೊಂದು ಬಣ್ಣ ಬಣ್ಣದ ವಿದ್ಯುತ್ ದೀಪಗಳಿಂದ ಝಗಝಗಿಸುತ್ತಿದೆ. ಅದೇ ಕಟ್ಟಡದ ಒಳಗಿರುವ ಒಂದು ಕೋಣೆಯಲ್ಲಿ ಸೂಪರ್ ಕಂಪ್ಯೂಟರ್ ಮುಂದೆ ಕುಳಿತಿರುವ ಐಯಾನ್ ತಾನು ಕಳೆದ ಎರಡು ಗಂಟೆಗಳಲ್ಲಿ ಫೀಡ್ ಮಾಡಿದ ಡಾಟಾವನ್ನು ಒಂದು ಬಟನ್ ಒತ್ತಿ ಶೇಖರಣೆ ಮಾಡಿದ. ಕಂಪ್ಯೂಟರ್ ಐಯಾನ್‌ಗೆ ವಂದನೆಗಳನ್ನು ಸಲ್ಲಿಸಿ ವಿಶ್ರಾಂತಿ ಪಡೆಯಿತು. ಕೇವಲ ಹತ್ತು ನಿಮಿಷಗಳ ವಿಶ್ರಾಂತಿಯ ನಂತರ ಸೂಪರ್ ರೋಬೋಟ್ ಅದೇ ಕಂಪ್ಯೂಟರ್‌ಗೆ ಮುಂದಿನ ಕೆಲಸಗಳ ಬಗ್ಗೆ ನಿರ್ದೇಶನ ನೀಡಲು ತಯಾರಾಗುತ್ತಿತ್ತು.

ಐಯಾನ್ ಕಂಪ್ಯೂಟರ್ ಪರದೆಯಿಂದ ತನ್ನ ಕಣ್ಣುಗಳನ್ನು ತೆಗೆದು ಗೋಡೆಯ ಕಡೆಗೆ ನೆಟ್ಟ. ಹಚ್ಚ ಹಸಿರು ತಪ್ಪಲುಗಳು ಅವನ ಕಣ್ಣುಗಳು ತುಂಬಿಕೊಂಡವು. ಆಯಾಸವಾದ ಕಣ್ಣುಗಳಿಗೆ ಕೃತಕ ಹಸಿರು ಮತ್ತು ದಣಿದ ದೇಹಕ್ಕೆ ಬೇಕಾದಷ್ಟು ಆಮ್ಲಜನಕವನ್ನು ಆ ಕೋಣೆಯಲ್ಲಿ ಸಂಚರಿಸುವಂತೆ ವ್ಯವಸ್ಥೆ ಮಾಡಲಾಗಿತ್ತು. ಕುರ್ಚಿಯಿಂದ ಎದ್ದ ಐಯಾನ್ ಸ್ನಾನದ ಕೋಣೆಗೆ ಹೋಗಿ ಯೂರಿನ್ ಪಾಸ್ ಮಾಡಿ ಕೊಳಾಯಿ ಕೆಳಗೆ ಕೈ ಇಟ್ಟಿದ್ದೆ ಕೊಳಾಯಿಯಿಂದ ನೀರು ಸುರಿಯಿತು. ಕೈ ತೊಳೆದು ಪಕ್ಕಕ್ಕೆ ತೆಗೆದುಕೊಂಡಿದ್ದೆ ನೀರು ಸುರಿಯುವುದು ನಿಂತು ಹೋಯಿತು. ಅಲ್ಲಿಂದ ಬಂದು ತನ್ನ ಖಾಸಗಿ ಕೋಣೆಯಲ್ಲಿ ಕುಳಿತುಕೊಂಡ. ಒಂದೆರೆಡು ಕ್ಷಣಗಳು ಕೈಕಾಲು ಚೆಲ್ಲಿದ ನಂತರ ಬ್ರೀಫ್‌ಕೇಸ್‌ನಲ್ಲಿದ್ದ ಪುಟ್ಟ ಮೊಬೈಲ್ ತೆಗೆದು ಬಟನ್ ಒತ್ತಿದ. ಅದೂ ಬರಿ ಮೊಬೈಲ್ ಅಲ್ಲ. ಅದರಲ್ಲಿ ಹಲವು ರೀತಿಯಾ ಪ್ರೋಗ್ರಾಂಗಳನ್ನು ಮಾಡಬಹುದು. ಜಿ.ಪಿ.ಎಸ್ ಇಂಟರ್‌ನೆಟ್ ವ್ಯವಸ್ಥೆ ಎಲ್ಲವೂ

ಇದೆ. ಒಂದು ಕಾಲದಲ್ಲಿ ಕಂಪ್ಯೂಟರ್ ಮಾಡುತ್ತಿದ್ದ ಕೆಲಸಗಳನ್ನೆಲ್ಲ ಈಗ ಮೊಬೈಲ್ ಮಾಡುತ್ತಿದೆ.

ಅಶ್ವಿನಿ ಮತ್ತು ಕಾಸ್ಮೋರಾ ಅರ್ಧ ಗಂಟೆಯಲ್ಲಿ ಮನೆ ತಲುಪುವುದಾಗಿ ಜಪಾನಿ ಉಚ್ಚಾರಣೆಯಲ್ಲಿ ಸ್ಮಾರ್ಟ್ ಮನೆಯ ಮಾಸ್ಟರ್ ರೋಬೋಟ್ ಉಲಿಯಿತು. ಐಯಾನ್ ತಾನು ಅರ್ಧ ಗಂಟೆಯಲ್ಲಿ ಮನೆಗೆ ಬರುವುದಾಗಿ ರೋಬೋಟ್‌ಗೆ ತಿಳಿಸಿದ.

ಅರ್ಧ ಗಂಟೆಯ ನಂತರ ತನ್ನ ಬ್ರೀಫ್‌ಕೇಸ್‌ನ ಜೊತೆಗೆ ಎದ್ದು ನಿಂತು ಬಾಗಿಲು ಹತ್ತಿರಕ್ಕೆ ಬರುತ್ತಿದ್ದಂತೆ ಬಾಗಿಲು ತಾನಾಗಿಯೆ ತೆರೆದುಕೊಂಡು ಐಯಾನ್ ಹೊರಗೆ ಹೋಗಲು ದಾರಿ ಮಾಡಿಕೊಟ್ಟಿತು. ಐಯಾನ್ ನಾಲ್ಕು ಹೆಜ್ಜೆ ನೇರವಾಗಿ ನಡೆದು ಒಂದೆಜ್ಜೆ ಬಲಕ್ಕೆ ನಡೆದು ಲಿಫ್ಟ್ ಹತ್ತಿರಕ್ಕೆ ಬಂದು ನಿಂತುಕೊಂಡು "ಡೌನ್ ಫ್ಲೋರ್, ಸೆಕೆಂಡ್ ಗೇಟ್" ಎಂದ ಮಿತವಾದ ಸುಗಂಧ ಅಲ್ಲೆಲ್ಲ ಹರಡಿಕೊಂಡಿತ್ತು. ಕೆಲವೇ ಕ್ಷಣಗಳಲ್ಲಿ ಐಯಾನ್‌ನನ್ನು ಲಿಫ್ಟ್ ತನ್ನ ಒಡಲಿಗೆ ಸೇರಿಸಿಕೊಂಡಿತು. ಲಿಫ್ಟ್ ಹತ್ತನೆ ಮಹಡಿಯಿಂದ ಕೆಳಕ್ಕೆ ಜಾರುತ್ತ ಬಂದು ಅಲ್ಲಿಂದ ಎರಡನೆ ಬಾಗಿಲಿನಲ್ಲಿ ನಿಂತು ಬಾಗಿಲು ತೆರೆದುಕೊಂಡಿತು. ಐಯಾನ್ ತನ್ನ ಕಾರಿನ ಹತ್ತಿರಕ್ಕೆ ನಡೆದು ಬಂದು ಜೇಬಿನಲ್ಲಿದ್ದ ಸಣ್ಣದಾದ ರಿಮೋಟ್ ಕಂಟ್ರೋಲ್ ತೆಗೆದು ಬಾಗಿಲು ಕಡೆಗೆ ತೋರಿಸಿ ಬಟನ್ ಒತ್ತಿದ.

"ಜಿಗ್ಮಾ ಕೆ" ಎನ್ನುವ ಆ ಕಾರಿನ ಬಾಗಿಲು ತೆರೆದುಕೊಂಡಿತು. ಐಯಾನ್ ಕಾರಿನ ಒಳಕ್ಕೆ ಸೇರಿಕೊಂಡು ಬ್ರೀಫ್‌ಕೇಸನ್ನು ಹಿಂದಿನ ಸೀಟಿನಲ್ಲಿ ಇಟ್ಟಿದ್ದ ಹಿಂದಿನ ಸೀಟಿನ ಮೂಲೆಯಲ್ಲಿದ್ದ ಎರಡು ಸ್ಪ್ರಿಂಗ್‌ಗಳು ಆ ಬ್ರೀಫ್‌ಕೇಸನ್ನು ನಿಧಾನವಾಗಿ ತೆಗೆದುಕೊಂಡು ಸೀಟಿನ ಕೆಳಗಿಟ್ಟು ಭದ್ರಪಡಿಸಿದವು.

ಸ್ಟೇರಿಂಗ್‌ನ ಮಧ್ಯದಲ್ಲಿ ಅಡಗಿಕೊಂಡಿದ್ದ ರಿಮೋಟ್ ಕಂಟ್ರೋಲ್ ತನಗೆ ತಾನೇ ಐಯಾನ್ ಕೈಗಳಿಗೆ ಬಂದಿತು. ಐಯಾನ್ ರಿಮೋಟ್ ತೆಗೆದುಕೊಂಡು ಕಾರಿಗೆ ನಿರ್ದೇಶನ ನೀಡಿದ. ಕಾರು ಸಣ್ಣಗೆ ಶಬ್ದ ಮಾಡುತ್ತ ಚಾಲನೆಗೊಂಡಿತು. ಅನಂತರ ಅದು ಯಾವ ಶಬ್ದವೂ ಇಲ್ಲದೆ ಚಲಿಸತೊಡಗಿತು.

ಮೂರು ಆಸನಗಳ ಆ ಕಾರಿನ ತೂಕ ಕೇವಲ ನೂರು ಕೇಜಿಗಳು. ಎರಡು ಆಸನಗಳಿಂದ ಹತ್ತು ಆಸನಗಳವರೆಗಿನ ಕಾರುಗಳು ಮಾರ್ಕೆಟ್ಟಿನಲ್ಲಿ ದೊರಕುತ್ತವೆ. ಭೂಗರ್ಭದಲ್ಲಿ ದೊರಕುತ್ತಿದ್ದ ಇಂಧನ ಪೂರ್ಣವಾಗಿ ಮುಗಿದು ಹೋಗಿ ಇಪ್ಪತ್ತು ವರ್ಷಗಳೆ ಕಳೆದು ಹೋಗಿವೆ. ಕ್ರಿ.ಶ. 2030 ವರ್ಷಗಳವರೆಗೂ ಭೂಗರ್ಭದಲ್ಲಿದ್ದ ಇಂಧನವನ್ನೆಲ್ಲ ಹೊರಕ್ಕೆ ತೆಗೆದ ಹಿಂದಿನ ತಲೆಮಾರುಗಳು ಭೂಮಿಯನ್ನು ಬೆಂಕಿ ಉಂಡೆಯಾಗಿ ಪರಿವರ್ತಿಸಿದ್ದವು. ಅನಂತರದ ದಿನಗಳಲ್ಲಿ ಭೂಮಿ ಸ್ವಲ್ಪ ಸ್ವಲ್ಪವೆ ತಣ್ಣಗಾಗಿತ್ತು. ಕೆಲವು ದೇಶಗಳು ಮಾತ್ರ ಇಂಧನವನ್ನು ಸಂಶೋಧನೆಗಳಿಗಾಗಿ ಉಳಿಸಿಕೊಂಡಿವೆ. ಕ್ರಿ.ಶ. 2010ರ

ಸುಮಾರಿಗೆ ಪ್ರಪಂಚದಾದ್ಯಂತ ವರ್ಷಕ್ಕೆ 25 ಬಿಲಿಯನ್ ಟನ್ನುಗಳಷ್ಟು ಇಂಧನವನ್ನು ಉರಿಸಲಾಗುತ್ತಿತ್ತು.



ಭೂಚರಿತ್ರೆಯ ಕಾರ್ಬಾನಿಫೆರಸ್ ಯುಗ (350 ದಶಲಕ್ಷ ವರ್ಷ) ಮತ್ತು ಟರ್ಷಿಯರಿ ಯುಗದಲ್ಲಿ (25 ದಶಲಕ್ಷ ವರ್ಷಗಳ ಹಿಂದೆ) ಕಲ್ಲಿದ್ದಲು ಭೂಪದರಗಳಲ್ಲಿ ಯಥೇಚ್ಛವಾಗಿ ರೂಪುಗೊಂಡಿರುವುದು ಕಂಡುಬರುತ್ತದೆ. ಹಿಂದಿನ ಜೌಗು ಪ್ರದೇಶ ಅಥವಾ ಉಪ್ಪು ನೀರಿನ ಸರೋವರಗಳಲ್ಲಿ ಕಲ್ಲಿದ್ದಲ ಸ್ತರಗಳು ಜಲಜ ಶಿಲೆಗಳೊಂದಿಗೆ ಕಂಡು ಬಂದಿವೆ. ಈಗ್ಗೆ ಮುನ್ನೂರೈವತ್ತು ದಶಲಕ್ಷ ವರ್ಷಗಳ ಹಿಂದೆ ಭಾರಿ ಅರಣ್ಯಗಳು ಜೌಗಿನಲ್ಲಿ ಸಾವಧಾನವಾಗಿ ಕುಸಿದು ಹೂತುಹೋದವು. ಕೆಲವೆಡೆ ಇವು ಸ್ಥಳಾಂತರಗೊಂಡು ನಿಧಾನವಾಗಿ ಮಡ್ಡಿಯಲ್ಲಿ ಇಳಿದು ಮುಚ್ಚಿಹೋದವು. ಅನಂತರ ಶಿಥಿಲವಾಗಿ ಜೌಗಿನಲ್ಲಿದ್ದ ಸೂಕ್ಷ್ಮಜೀವಿಗಳು ಅವುಗಳ ಮೇಲೆ ಆಕ್ರಮಣ ಮಾಡಿದವು. ಆಳಕ್ಕೆ ಇಳಿದ ಸಸ್ಯಗಳನ್ನು ಮೇಲಿನಿಂದ ಶಿಲಾಸ್ತರಗಳು ಮುಚ್ಚುತ್ತಾ ಬಂದವು. ಅದರ ಮೇಲೆ ಸಸ್ಯ ಮತ್ತೆ ಬೆಳೆಯಿತು. ಭೂಕುಸಿತದಿಂದಾಗ ಅವೂ ನೆಲದಾಳಕ್ಕೆ ಇಳಿದವು. ಈ ಪ್ರಕ್ರಿಯೆ ಅನೇಕ ಬಾರಿ ಘಟಿಸಿ ಸಸ್ಯಗಳ ಮೇಲೆ ಸ್ತರಗಳು ಪರ್ಯಾಯವಾಗಿ ಸಂಚಯಿಸಿದವು. ಆಳ ಭಾಗದಲ್ಲಿ ಒತ್ತಡ, ಉಷ್ಣತೆ ಹೆಚ್ಚುತ್ತಾ ಹೋಯಿತು, ಜೊತೆಗೆ ಭೂಚಲನೆಯ ಪರಿಣಾಮವಾಗಿ ಸಸ್ಯದ ಅವಶೇಷಗಳು ಸಾವಧಾನವಾಗಿ ರೂಪಾಂತರ ಹೊಂದಿ ಕಲ್ಲಿದ್ದಲಾಗಿ ಬದಲಾವಣೆ ಹೊಂದಿದವು.



ಐಯಾನ್ ಕಾರು ಸಾಗುತ್ತ ಹೋಗಿ ಒಂದನೇ ವಲಯದಲ್ಲಿದ್ದ ಡೌನ್‌ಟೌನ್ ಸ್ಟ್ರೀಟ್‌ನ ನಾಲ್ಕನೆ ಮುಖ್ಯರಸ್ತೆಯ ಏಳನೆ ಸಂಖ್ಯೆ ''ಆಕಾರಾ'' ಬಂಗಲೆಯ ಮುಂದೆ ನಿಂತುಕೊಂಡಿತು.

ಐಯಾನ್ ಕಾರಿನಿಂದ ಕೆಳಗಿಳಿಯುತ್ತಿದ್ದಂತೆ ಬ್ರೀಫ್‌ಕೇಸು ಹಿಂದಿನ ಭಾಗದಲ್ಲಿ ಕಾಣಿಸಿಕೊಂಡಿತು. ಐಯಾನ್ ಬ್ರೀಫ್‌ಕೇಸನ್ನು ಎಡಕೈಯಲ್ಲಿ ತೆಗೆದುಕೊಂಡು ಬಟನ್ ಒತ್ತಿದ. ಕಾರು ಬಾಗಿಲುಗಳನ್ನು ಮುಚ್ಚಿಕೊಂಡು ಅದೇ ಬಂಗಲೆಯ ಕೆಳಗಿದ್ದ ಸೆಲ್ಲಾರ್‌ನಲ್ಲಿ ತನಗೆ ನಿಗದಿಯಾಗಿದ್ದ ಸ್ಥಳದಲ್ಲಿ ಹೋಗಿ ನಿಂತುಕೊಂಡಿತು.

ಐಯಾನ್ ನಡೆದು ಹೋಗಿ ಮನೆ ಬಾಗಿಲು ಮುಂದೆ ನಿಂತುಕೊಂಡ. ರೋಬೋಟ್ ಬಾಗಿಲು ತೆಗೆದು ಸುಸ್ವಾಗತ ಹೇಳಿತು. ಆಗಲೆ ಮನೆ ತಲುಪಿದ್ದ ಅಶ್ವಿನಿ ಮತ್ತು ಕಾಸ್ಮೋರಾ ತಮ್ಮ ಮಿನಿ ಥಿಯೇಟರಿನ ಪ್ಲಾಸ್ಮ ಪರದೆಯ ಮುಂದೆ ಕುಳಿತು ಯಾವುದೊ ಆಲ್ಬಮ್ ನೋಡುತ್ತಿದ್ದರು. ಐಯಾನ್ ಒಳಗೆ ಬಂದ ವಿಷಯ ಪರದೆಯ ಒಂದು ಮೂಲೆಯಲ್ಲಿ ಕಾಣಿಸಿಕೊಂಡಿತು. ಅಶ್ವಿನಿ ಸ್ವಿಚ್ ಒತ್ತಿ ಆಲ್ಬಮ್ ನಿಲ್ಲಿಸಿ ಲೀವಿಂಗ್ ಕೋಣೆಗೆ ಎದ್ದು ಬಂದಳು. ಐಯಾನ್ ಮತ್ತು ಅಶ್ವಿನಿ ಆಲಿಂಗನದ ಜೊತೆಗೆ ಅದೇ ಬಣ್ಣದ ಪಾರದರ್ಶಕ

ಉಡುಪಿನಲ್ಲಿ ಆಕರ್ಷಕವಾಗಿ ಕಾಣುತ್ತಿದ್ದಳು. ಉದ್ದವಾದ ಮೂಗು, ವಿಶಾಲವಾದ ಹಣೆ, ಸುಂದರವಾದ ಗಲ್ಲ, ಹೊಳೆಯುವ ಕಣ್ಣುಗಳು, ಆಲ್ಬಮ್‌ನಲ್ಲಿ ಕುಣಿದಾಡುವ ಮಾಡಲ್‌ನಂತೆ ಕಾಣುವ ಅಶ್ವಿನಿ ಟೋಟಲ್ಲಾಗಿ ಒಂದು ಸುಂದರ ಬೊಂಬೆಯಂತೆ ಕಾಣಿಸುತ್ತಿದ್ದಳು.

ಮಗುವಾದ ಮೇಲೆ ತನ್ನ ಸೌಂದರ್ಯ ಪೂರ್ಣವಾಗಿ ಹಾಳಾಗಿ ಬಿಡುತ್ತದೆ ಎಂದುಕೊಂಡಿದ್ದ ಅಶ್ವಿನಿ ತನ್ನ ದೇಹದ ಆಕಾರ ಮತ್ತು ಅಂದವನ್ನು ಉಳಿಸಿಕೊಳ್ಳಲು ಪಟ್ಟ ಪಾಡು ಅಷ್ಟಿಷ್ಟಲ್ಲ. ಹತ್ತಿರ ಹತ್ತಿರ ಅರ್ಧ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದ್ದಾಳೆ. ಮಗು ಬೇಡವೆಂದುಕೊಂಡಿದ್ದ ಅಶ್ವಿನಿಗೆ ಮದುವೆಯಾದ ಎರಡು ಮೂರು ವರ್ಷಗಳಲ್ಲಿ ತಮಗೆ ತೀರ ಹತ್ತಿರದವರ ಕುಟುಂಬದಲ್ಲಿ ತಾಯಿ ಮಗುವಿನ ಮಧ್ಯದ ಆಕರ್ಷಣೆಯಿಂದ ಬೆರಗುಗೊಂಡು ಮಗುವನ್ನು ಪಡೆಯಲು ನಿಶ್ಚಯಿಸಿದ್ದಳು. ಐಯಾನ್ ಈ ವಿಷಯದಲ್ಲಿ ಅಶ್ವಿನಿಗೆ ಪೂರ್ಣವಾದ ಸ್ವಾತಂತ್ರ್ಯವನ್ನು ನೀಡಿದ್ದ. ದೀರ್ಘವಾಗಿ ಎರಡು ವರ್ಷಗಳು ಯೋಚಿಸಿದ ನಂತರ ಮಗುವಿಗೆ ಜನ್ಮ ನೀಡಲು ತೀರ್ಮಾನಿಸಿದ್ದಳು.

ಒಂದು ಕುಟುಂಬದಲ್ಲಿ ಒಂದೇ ಮಗು ಎನ್ನುವ ಸರಕಾರದ ನಿರ್ಣಯವನ್ನು ಎಲ್ಲರೂ ಪಾಲಿಸುತ್ತಿದ್ದರು. ಈ ಕಾಲದಲ್ಲಿ ಎ ವಲಯದ ಕುಟುಂಬಗಳು ಒಂದು ಮಗುವಿಗೆ ಜನ್ಮ ನೀಡುವುದೆಂದರೆ ಅದೊಂದು ಅದ್ಭುತ ವಿಷಯವಾಗಿತ್ತು. ಈಗ ಸರಕಾರದ ಆಡಳಿತದಲ್ಲಿ ಯಾವ ಉದ್ದಿಮೆಗಳು ಇಲ್ಲ. ಮಿಲ್ಟ್ರಿ ವಿಭಾಗ ಬಿಟ್ಟರೆ ತೆರಿಗೆ ವಿಭಾಗ ಮಾತ್ರ ಸರಕಾರದ ಆಡಳಿತದಲ್ಲಿ ಉಳಿದಿದೆ. ಆದರೆ ರಾಷ್ಟ್ರಪತಿ, ಪ್ರಧಾನ ಮಂತ್ರಿ, ಶಾಸಕರು ಮತ್ತು ಅಧಿಕಾರಿಗಳು ಮಾತ್ರ ಸರಕಾರವನ್ನು ಎಂದಿನಂತೆ ನಡೆಸುತ್ತಿದ್ದಾರೆ.

ವೈದ್ಯಕೀಯ ವಿಜ್ಞಾನ ಎಷ್ಟೊಂದು ಮುಂದುವರಿದಿದೆ ಎಂದರೆ ಒಂದು ಮಗುವನ್ನು ಪಡೆಯುವ ಮುನ್ನ ತಾಯಿಯ ದೇಹದಲ್ಲಿನ ಪ್ರತಿಯೊಂದು ಖನಿಜಾಂಶದ ವಿವರಗಳು... ದೈಹಿಕ ದೃಢತೆ... ಬೌದ್ಧಿಕ ಸ್ಥಿರತೆ ಎಲ್ಲವನ್ನು ತಿಳಿದುಕೊಂಡು ಇಂತಹ ದಿನ ಇದೇ ಸಮಯಕ್ಕೆ ಪತಿ ಪತ್ನಿ ಕೂಡಬೇಕೆಂದು ವೈದ್ಯರು ಸೂಚಿಸುತ್ತಿದ್ದರು. ಅದಕ್ಕೆ ಮುಂಚೆ ಮಹಿಳೆ ಒಂದೆರೆಡು ತಿಂಗಳಿಂದ ಯಾವ ಯಾವ ಆಹಾರ ಎಷ್ಟೆಷ್ಟು ಖನಿಜಗಳ ಸಮೇತ ತೆಗೆದುಕೊಳ್ಳಬೇಕು? ಎಷ್ಟೊತ್ತು ನಿದ್ದೆ ಮಾಡಬೇಕು? ಎಷ್ಟೊತ್ತು ವ್ಯಾಯಾಮ ಮಾಡಬೇಕು? ಇಡೀ ದಿನ ಯಾವ ಯಾವ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಬೇಕು? ಮನಸ್ಸು ಉಲ್ಲಾಸದಿಂದ ಇರಬೇಕಾದರೆ ಏನು ಮಾಡಬೇಕು? ದಿನಕ್ಕೆ ಎಷ್ಟೊತ್ತು ಮಾತನಾಡಬೇಕು? ನಗಬೇಕು ಎನ್ನುವುದನ್ನು ವೈದ್ಯರು ಸೂಚಿಸುತ್ತಿದ್ದರು.

ಈಗೀಗ ವೈದ್ಯಕೀಯ ಸ್ಪೆಷಿಲೈಜೇಷನ್ಸ್ ಯಾವ ಮಟ್ಟಕ್ಕೆ ಬೆಳೆದು ನಿಂತಿದೆ ಎಂದರೆ ನಗುವಿನಿಂದ ದೇಹದ ಮೇಲೆ ಆಗುವ ಪರಿಣಾಮಗಳು... ದುಃಖದಿಂದ ದೇಹದ ಮೇಲೆ ಬೀರುವ ಪರಿಣಾಮಗಳು... ಯಾವ ಉದ್ಯೋಗದಿಂದ ಯಾರ ದೇಹದ ಮೇಲೆ ಯಾವ

ರೀತಿಯ ದುಷ್ಪರಿಣಾಮಗಳು ಬೀರುತ್ತವೆ... ಹೀಗೆ ಪ್ರತಿಯೊಂದು ವಿಷಯಕ್ಕೂ ವಿಶೇಷ ವೈದ್ಯರು ಸೃಷ್ಟಿಯಾಗಿದ್ದಾರೆ.

ಅಶ್ವಿನಿ ಮತ್ತು ಐಯಾನ್ ಮಗುವನ್ನು ಪಡೆಯಲು ಎರಡು ತಿಂಗಳುಗಳಿಂದ ತಯಾರಿ ನಡೆಸಿ ರಾತ್ರಿ ವಿಶೇಷ ಕೋಣೆಯಲ್ಲಿ ಕುಳಿತಿದ್ದಾರೆ. ಇಬ್ಬರನ್ನು ಆ ಸನ್ನಿವೇಶಕ್ಕೆ ವಿಶೇಷವಾಗಿ ಸಜ್ಜುಗೊಳಿಸಿದ್ದಾರೆ. ವಿಶಾಲ ಕೋಣೆಯ ಮಧ್ಯದಲ್ಲಿ ಅಪರೂಪವಾದ ಪಲ್ಲಂಗ, ಅದರ ಮೇಲೆ ಹೂವಿನ ದಳಗಳಲ್ಲಿ ತಯಾರಿಸಿದಂತಹ ವಿಶೇಷ ಬಣ್ಣಗಳ ಹಾಸಿಗೆ... ಸುತ್ತಲು ಗೋಡೆಗಳಲ್ಲಿ ಬೆಟ್ಟಗುಡ್ಡ ತಪ್ಪಲುಗಳು... ಹಚ್ಚನೆ ಹಸಿರು ಹೊದಿಕೆ... ಬಣ್ಣ ಬಣ್ಣದ ಹೂವುಗಳು... ಭೋರ್ಗರೆದು ಧುಮುಕುವ ಜಲಪಾತ... ಹಾರಾಡುವ ಚಿಟ್ಟೆಗಳು... ತಣ್ಣನೆ ಗಾಳಿ... ತೇಲಾಡುವ ಮೋಡಗಳು... ಮೇಲೆ ಮಿನುಗುವ ನಕ್ಷತ್ರಗಳು... ಸುತ್ತಲು ಬಾನಂಚಿನಲ್ಲಿ ಬೆಳಕಿನ ಕಿರಣಗಳು.

ಎರಡು ದೇಹಗಳು ಉದ್ರೇಕದಿಂದ ಒಂದಾದಾಗ ಐಯಾನ್‌ನ ವೀರ್ಯಾಣುಗಳು ಸಮುದ್ರದಲ್ಲಿ ಈಜಾಡಿ ಅಶ್ವಿನಿಯ ಅಂಡಾಣುವೆಂಬ ಸರೋವರ ತಲುಪುವುದರಿಂದ ಹಿಡಿದು ಒಂಬತ್ತು ತಿಂಗಳು ಕಾಲ ಮಗು ಅಶ್ವಿನಿಯ ಗರ್ಭದಲ್ಲಿ ಹಂತ ಹಂತವಾಗಿ ಬೆಳೆದು ನಿಂತ ಚಿತ್ರಣವನ್ನು ಚಿತ್ರಿಸಲಾಗಿತ್ತು. ಕಾಸ್ಮೋರಾ ಆಗಾಗ ತನ್ನ ತಾಯಿಯ ಗರ್ಭದಲ್ಲಿ ಹಂತ ಹಂತವಾಗಿ ಬೆಳೆದು ನಿಂತ ಪ್ರತಿ ಕ್ಷಣದ ಸನ್ನಿವೇಶಗಳನ್ನು ಕಂಪ್ಯೂಟರ್ ಡಿವಿಡಿ ಡಿಸ್ಕ್‌ನಲ್ಲಿ ನೋಡುತ್ತಿರುತ್ತಾಳೆ.

ಇಷ್ಟೆಲ್ಲಾ ಅದ್ಭುತಗಳನ್ನು ಸೃಷ್ಟಿಸಿರುವ ಈ ಮನುಷ್ಯನ ಮಿದುಳಿನಲ್ಲಿ ಏನಿದೆ? ಮಿದುಳು ಕೇವಲ ಸಾವಿರದ ಐದುನೂರು ಗ್ರಾಂ ತೂಕವಿರುವ ಒಂದು ಮಾಂಸದ ಮುದ್ದೆ. ನೂರಕ್ಕೆ ಶೇಡ ತೊಂಬತ್ತೈದರಷ್ಟು ನೀರಿನ ಅಂಶವಿರುವ ಮಾನವನ ದೇಹದಲ್ಲಿ ಇನ್ನುಳಿದ ಐದು ಅಂಶ ಬರಿ ಖನಿಜಗಳು. ಈ ಖನಿಜಗಳು ಮಣ್ಣಿನಲ್ಲಿ ದೊರಕುವ ಖನಿಜಗಳೆ ಆಗಿವೆ. ಒಂದು ಕಾಲದಲ್ಲಿ ಪಂಚಭೂತಗಳು ಎಂದು ಕರೆಯುತ್ತಿದ್ದ ಭೂಮಿ, ಆಕಾಶ, ನೀರು, ಬೆಂಕಿ ಮತ್ತು ಗಾಳಿ ಎಂಬ ಪಂಚಭೂತಗಳಲ್ಲಿ ಆಕಾಶ ಎಂಬ ಭೂತ ಇಲ್ಲವೆ ಇಲ್ಲ ಎಂದು ತಿಳಿದ ಮೇಲೆ ಚತುಷ್ಠ ಭೂತಗಳು ಎಂಬುದು ಈಗ ಚಾಲನೆಗೆ ಬಂದಿದೆ.

ಇಷ್ಟಕ್ಕೂ ಈ ಮನುಷ್ಯ ಪ್ರಾಣಿಯ ದೇಹದಲ್ಲಿ ಯಾವ ಖನಿಜಗಳು ಎಷ್ಟೆಷ್ಟಿವೆ? ಅರವತ್ತು ಎಂಟು ಕೆ.ಜಿ. ತೂಕದ ಮನುಷ್ಯನಲ್ಲಿ 44.23 ಕೆ.ಜಿ ಆಮ್ಲಜನಕ, 12.25 ಕೆ.ಜಿ. ಕಾರ್ಬನ್, 6.8 ಕೆ.ಜಿ. ಹೈಡ್ರೋಜನ್, 2.04 ಕೆ.ಜಿ. ಸಸಾರಜನಕ, 2.04 ಕೆ.ಜಿ. ನೈಟ್ರೋಜನ್, 1.09 ಕೆ.ಜಿ. ಕ್ಯಾಲ್ಸಿಯಂ, 650 ಗ್ರಾಂ ಗಂಧಕ 348 ಗ್ರಾಂ ಮ್ಯಾಗ್ನಿಷಿಯಂ, 2.78 ಗ್ರಾಂ ಕಬ್ಬಿಣ ಮತ್ತು 337.5 ಗ್ರಾಂ ಉಳಿದ ಧಾತುಗಳಿರುತ್ತವೆ. ಜೊತೆಗೆ ಮ್ಯಾಂಗನೀಸ್, ತಾಮ್ರ, ಐಯೋಡಿನ್, ಜಿಂಕ್, ಕೊಬಾಲ್ಟ್ ಮತ್ತು ಫ್ಲೋರಿನ್ ಖನಿಜಗಳು ಇರುತ್ತವೆ.

ಕಾರ್ಬನ್ ಮತ್ತು ಹೈಡ್ರೋಜನ್‌ನಿಂದ ಕಾರ್ಬೋ ಹೈಡ್ರೇಟ್ಸ್ ಅಂದರೆ ಸಕ್ಕರೆ ಮತ್ತು ಕೊಬ್ಬು ಉತ್ಪತ್ತಿಯಾದರೆ, ಹೈಡ್ರೋಜನ್, ನೈಟ್ರೋಜನ್, ಕಾರ್ಬನ್ ಮತ್ತು ಪಾಸ್ಫರಸ್‌ನಿಂದ ಎಲುಬುಗಳಾದರೆ, ಕಬ್ಬಿಣದಿಂದ ರಕ್ತದಲ್ಲಿನ ಕೆಂಪು ಕೋಶಗಳು ಉತ್ಪತ್ತಿಯಾಗುತ್ತವೆ. ಸೋಡಿಯಂ ಮತ್ತು ಕ್ಲೋರೈಡ್‌ನಿಂದ ಉಪ್ಪು ಉತ್ಪತ್ತಿಯಾಗುತ್ತದೆ. ಇದೆಲ್ಲವೂ ಮನುಷ್ಯನ ದೇಹಕ್ಕೆ ದೊರಕುವುದು ಮಣ್ಣಿನಿಂದ. ಮಣ್ಣು ಶಿಲೆಗಳಿಂದ ಉತ್ಪತ್ತಿಯಾದರೆ, ಶಿಲೆಗಳು ಭೂಗರ್ಭದಿಂದ ಲಾವಾ ರೂಪದಲ್ಲಿ ಚಿಮ್ಮಿ ಬರುತ್ತವೆ. ವಸುಂಧರೆ ಮಾನವ ದೇಹದಂತೆ ನೂರಾರು ಧಾತುಗಳ ಒಂದು ಮುದ್ದೆ.

ಈ ಮಣ್ಣಿನಲ್ಲಿನ ಧಾತುಗಳು ವೀರ್ಯಾಣು - ಅಂಡಾಣುಗಳ ಮೂಲಕ ಹಂತ ಹಂತವಾಗಿ ಮಾಂಸ ಮುದ್ದೆಯಾಗಿ ಮಾನವನಾಗಿ ಬೆಳೆಯುತ್ತದೆ. ಮಾನವ ತನ್ನ ಮಿದುಳಿನಿಂದ ಭೂಮಿಯ ಮೇಲೆ ಅದ್ಭುತಗಳನ್ನು ಸೃಷ್ಟಿಸಿದ್ದಾನೆ.



ಬೆನ್ ನಗರದ ಎ ವಲಯದಲ್ಲಿರುವ ಜಿಗ್ಮಾ ಕಟ್ಟಡದ ಇಪ್ಪತ್ತೊಂದನೆ ಮಹಡಿಯಲ್ಲಿ ಸ್ಪೇಸ್ ಕಾಲೋನಿಗೆ ಹೋಗುವ ಹದಿನಾರು ವಿದ್ಯಾರ್ಥಿಗಳಿಗೆ ತರಬೇತಿ ನೀಡಲಾಗುತ್ತಿದೆ. ಈ ಅಭ್ಯರ್ಥಿಗಳಲ್ಲಿ ಐವರು ಯುವತಿಯರು ಇದ್ದಾರೆ. ಅವರೆಲ್ಲ ಬರುವ ತಿಂಗಳು ಅಂದರೆ Y2K53ನೇ ವರ್ಷದ ಮೊದಲು ತಿಂಗಳು ಹದಿನಾಲ್ಕನೆ ತಾರೀಖು ಬೆಳಗಿನ ಜಾವ ಎರಡು ಗಂಟೆಗೆ ಸ್ಪೇಸ್ ಕಾಲೋನಿ ಕಡೆಗೆ ಪ್ರಯಾಣ ಮಾಡಲಿದ್ದಾರೆ.

ಯುಎಸ್‌ಐ ವಶದಲ್ಲಿರುವ ಅಂಟಾರ್ಕ್‌ಟಿಕದ ದಕ್ಷಿಣ ಗಂಗೋತ್ರಿ ಪ್ರದೇಶದಲ್ಲಿರುವ ಅತಿಥಿ ಗೃಹದಲ್ಲಿ ಒಂದು ದಿನವಿದ್ದು ಅಲ್ಲಿಂದ ಮರುದಿನ ಅವರೆಲ್ಲ ಸ್ಪೇಸ್ ಕಾಲೋನಿ ಕಡೆಗೆ ಪ್ರಯಾಣ ಮಾಡಲಿದ್ದಾರೆ.

ಜಿಗ್ಮಾ ಕಟ್ಟಡದಲ್ಲಿ ಎಲ್ಲಾ ರೀತಿಯ ತರಬೇತಿಗಳನ್ನು ಮುಗಿಸಿರುವ ಹದಿನಾರು ಅಭ್ಯರ್ಥಿಗಳು ಮಾನಸಿಕವಾಗಿ, ದೈಹಿಕವಾಗಿ ಫಿಟ್ ಆಗಿದ್ದಾರೆ. ಅವರಿಗೆ ಅಂತಿಮವಾಗಿ ಕೆಲವು ಸೂಚನೆಗಳನ್ನು ತರಬೇತುದಾರರು ನೀಡುತ್ತಿದ್ದಾರೆ. ಸ್ಪೇಸ್ ತರಬೇತುದಾರರಲ್ಲಿ ಐಯಾನ್ ಕೂಡ ಒಬ್ಬರಾಗಿದ್ದು ಈಗಾಗಲೆ ಹಲವು ಬಾರಿ ಸ್ಪೇಸ್ ಕಾಲೋನಿಗಳಿಗೆ ಹೋಗಿ ಬಂದಿದ್ದಾರೆ.

ಪ್ರಸ್ತುತ ಭೂಮಂಡದಲ್ಲಿರುವ ಎಲ್ಲಾ ದೇಶಗಳಲ್ಲೂ ನಿರುದ್ಯೋಗ ತೀರ ಉಲ್ಬಣಿಸಿದ್ದು ಯುವಕರು ಮತ್ತು ಯುವತಿಯರು ಸ್ಪೇಸ್ ಕಾಲೋನಿಗಳಲ್ಲಿರುವ ಕಂಪನಿಗಳಲ್ಲಿ ಉದ್ಯೋಗ ಮಾಡಲು ತಹತಹಿಸುತ್ತಿದ್ದಾರೆ. ಇಂದಿಗೆ ನಲವತ್ತು ಐವತ್ತು ವರ್ಷಗಳ ಹಿಂದೆ ಆಗ ಬಹಳಷ್ಟು ಅಭಿವೃದ್ಧಿಗೊಳ್ಳುತ್ತಿದ್ದ ಮತ್ತು ತೃತೀಯ ಜಗತ್ತಿನ ದೇಶಗಳೆಂದು ಕರೆಯುತ್ತಿದ್ದ ದೇಶಗಳ ಅಭ್ಯರ್ಥಿಗಳು ಯುನೈಟೆಡ್ ಸ್ಟೇಟ್ಸ್ ಆಫ್ ಅಮೇರಿಕಾ ದೇಶಕ್ಕೆ ಉದ್ಯೋಗ ಅರಸಿ ಹೋಗುತ್ತಿದ್ದರು. ಆದರೆ ಈಗ ಎಲ್ಲರೂ ಸ್ಪೇಸ್ ಕಾಲೋನಿಗಳಿಗೆ ಹೋಗುತ್ತಿದ್ದಾರೆ.

ಐಯಾನ್ ತನ್ನ ಖಾಸಗಿ ವಿಶ್ರಾಂತಿ ಕೋಣೆಯಲ್ಲಿ ಕುಳಿತು ಲಂಚ್ ತೆಗೆದುಕೊಳ್ಳುತ್ತಿದ್ದಾನೆ. ಎದುರಿಗೆ ಪುಟ್ಟ ಪ್ಲ್ಯಾಸ್ಮ ಟಿವಿಯಲ್ಲಿ ಅನ್ಯ ಲೋಕದ ಸಿಗ್ನೇಚರ್ಸ್ ಎನ್ನುವ ಸಿನಿಮಾ ಬರುತ್ತಿದೆ. ಸರಿಯಾಗಿ ಅದೇ ಸಮಯಕ್ಕೆ ಐಯಾನ್‌ನ ಅದೇ ಪ್ಲ್ಯಾಸ್ಮ ಪರದೆಯ ಮೂಲೆಯಲ್ಲಿ ಒಂದು ಸುಂದರವಾದ ಹೆಣ್ಣು ಕಾಣಿಸಿಕೊಳ್ಳುತ್ತಾಳೆ.

''ಹಲೊ... ಮೆ ಐ ಡ್ರಾ ಯುವರ್ ಅಟೆಂಷನ್ ಪ್ಲೀಸ್...'' ಎನ್ನುತ್ತದೆ ಒಂದು ಹೆಣ್ಣಿನ ಧ್ವನಿ. ಐಯಾನ್ ಬಾಯಲ್ಲಿ ಇಟ್ಟುಕೊಂಡಿದ್ದ ಹ್ಯಾಮ್ ತುಂಡಿನ ಜೊತೆಗೆ ಧ್ವನಿ ಬಂದ ಕಡೆಗೆ ನೋಡುತ್ತಾನೆ. ಅವಳ ಮುಖವನ್ನು ನೋಡಿದ್ದೆ. ''ನಾವ್ ನೋ...'' ತುಟಿಗಳಿಗೆ ಬಂದ ಪದಗಳನ್ನು ನುಂಗಿಕೊಳ್ಳುತ್ತ ಹಾಗೆ ಅವಳ ಕಡೆಗೆ ನೋಡುತ್ತಿರುವುದನ್ನು ಗಮನಿಸಿದ ಹೆಣ್ಣು ಮುಸಿ ಮುಸಿ ನಗುತ್ತ, ''ನನ್ನೆಸರು ನಿಹಾರಿಕೆ'' ಎನ್ನುತ್ತಾಳೆ. ''ನಿಹಾರಿಕ ಅಲ್ಲ ನಕ್ಷತ್ರಗಳ ಪುಂಜವೆ ನನ್ನೆದುರಿಗಿದೆ'' ಹ್ಯಾಮ್ ತುಂಡನ್ನು ಅಗಿಯುತ್ತಾ ಐಯಾನ್ ತನಗೆ ಗೊತ್ತಿಲ್ಲದೆಯೆ ಹೇಳಿದ. ಮತ್ತೆ ಅದೇ ನಗು. ಅವನ ಜೀವನದಲ್ಲಿ ಅಂತಹ ಸುಂದರಿಯನ್ನು ನೋಡೇ ಇಲ್ಲ ಎನ್ನುತ್ತದೆ ಅವನ ಮಿದುಳಿನ ಕೋಶಗಳು. ಆದರೆ ಇದೆ ಧ್ವನಿಯನ್ನು ಎಲ್ಲೋ ಯಾವಾಗಲೊ ಕೇಳಿದ್ದೀನಲ್ಲ ಎಂಬುದಾಗಿ ಅವನ ಮಿದುಳು ಕೋಶಗಳು ಜ್ಞಾಪಿಸುತ್ತವೆ.

''ಹೌದು! ಇದಕ್ಕೆ ಮುಂಚೆ ನಾವು ಯಾವಾಗ್ಲಾದರು ಮಾತನಾಡಿದ್ದೀವ...'' ಐಯಾನ್ ಪ್ರಶ್ನಿಸುತ್ತಾನೆ.

''ಹೌದು ! ನಾವಿಬ್ಬರು ಮಾತನಾಡಿದ್ದೀವಿ'' ಎಂದಳು ಸುಂದರಿ ಭುಜಗಳನ್ನು ಕುಣಿಸುತ್ತ. ಅವಳ ಅಪರೂಪವಾದ ಸೌಂದರ್ಯ, ಮಾತನಾಡುವ ಶೈಲಿ, ಬಾಡಿ ಗೆಶ್ಚರ್ಸ್‌ನ ಆಕರ್ಷಣೆಯಿಂದ ಐಯಾನ್ ಅವಳನ್ನೇ ತಿಂದುಬಿಡುವಂತೆ ನೋಡುತ್ತಿದ್ದಾನೆ. ಅನ್ಯಗ್ರಹಗಳಿಂದ ಭೂಮಿಗೆ ಇಳಿದುಬಂದಿರುವ ರೂಪಸಿಯನ್ನು ಮೊದಲ ಬಾರಿಗೆ ನೋಡುತ್ತಿರುವಂತಿದೆ ಅವನಿಗೆ. ಅವನ ಕಣ್ಣುಗಳ ಒಳಗಿನ ಇಂಗಿತವನ್ನು ಅರಿತುಕೊಂಡ ಅಕೆ,

''ತಿನ್ನುವುದಕ್ಕೆ ನಾನು ಟಿವಿ ಒಳಗಿದ್ದೀನಿ'' ಎಂದಳು. ಈ ಮಾತುಗಳಿಂದ ಇನ್ನಷ್ಟು ಗಲಿಬಿಲಿಗೊಂಡ ಐಯಾನ್ ಅವಳನ್ನು ಈಗಲೆ... ಈಗಲೆ... ಎದುರುಗೊಳ್ಳಬೇಕು ಎಂದು ತಹತಹಿಸಿ ಹೋಗಿದ್ದಾನೆ. ನಿಧಾನವಾಗಿ ಸಾವರಿಸಿಕೊಂಡ ಐಯಾನ್ ಒಮ್ಮೆಲೆ ಜ್ಞಾನೋದಯವಾದಂತೆ,

''ನಿಮ್ಮ ತಮ್ಮ ಸ್ಪೇಸ್ ಕಾಲೋನಿಗೋಗಲು ಆಯ್ಕೆಯಾಗಿದ್ದಾನೆ'' ಎಂದ.

''ತುಂಬಾ ಥ್ಯಾಂಕ್ಸ್. ನನ್ನ ತಮ್ಮನ ಆಯ್ಕೆ ಮಾಡಿದ್ದಕ್ಕೆ'' ಎಂದಳು.

''ನಾನೇನು ಮಾಡ್ಲಿಲ್ಲ. ಹಿ ಟ್ರೂಲಿ ಡಿಸರ್ವ್ಡ್. ಆಯ್ಕೆಯಾದ ಅಷ್ಟೇ'' ಐಯಾನ್ ಹೇಳಿದ. ಅವಳ ಧ್ವನಿಯನ್ನು ಗುರುತಿಸಿದ ಅವನ ಮಿದುಳಿನ ಕೋಶಗಳು ಅವನ ನಾಲಿಗೆ ಮೂಲಕ ಹೊರಗೆಡುವಿದ್ದವು. ಅವನಿಗೆ ಈಗ ಜ್ಞಾಪಕಕ್ಕೆ ಬಂದಿತ್ತು. ಕೆಲವು ದಿನಗಳ ಹಿಂದೆ

ಸ್ಪೇಸ್ ಕಾಲೋನಿಯ ಆಯ್ಕೆಗಾಗಿ ಆಕೆಯ ತಮ್ಮ ಜಿಗ್ಮಾಗೆ ಬರಲಿದ್ದಾನೆ. ಅವನ ಹೆಸರು ನಾರಿಮನ್. ಸಾಧ್ಯವಾದರೆ ಅವನನ್ನು ಆಯ್ಕೆ ಮಾಡಿ ಎಂದಿದ್ದಳು ಫೋನ್‌ನಲ್ಲಿ.

"ನಿಮ್ಮ ಹೆಸರು ತಿಳಿದುಕೊಳ್ಳಬಹುದೆ...?" ಐಯಾನ್ ಪ್ರಶ್ನೆಗೆ ಲವ್‌ಲಿನಾ ಎನ್ನುವ ಉತ್ತರ ದಿಢೀರ್‌ನೆ ಬಂದಿತು.

"ಲವ್‌ಲೀನಾ ತುಂಬಾ ಚೆನ್ನಾಗಿದೆ, ನೈಸ್. ನಿನ್ನನ್ನ ಈಗ್ಲೆ ನೇರವಾಗಿ ನೋಡಬೇಕಲ್ಲ"

"ಈಗ್ಲೇನಾ...?"

"ಯಾಕೆ ಏನಾದರೂ ತೊಂದರೆ ಇದೆಯಾ...?"

"ಏನೂ ಇಲ್ಲ, ನಾನು ನಾನೂರು ಕಿಲೋಮೀಟರ್ ದೂರದಲ್ಲಿದ್ದೀನಿ" ಎನ್ನುತ್ತಾ ಟಿವಿ ಸ್ಕ್ರೀನ್ ಒಳಗಿಂದಲೆ ಐಯಾನ್ ಹತ್ತಿರಕ್ಕೆ ಮುಖ ಮಾಡಿದಳು.

ಅಶ್ವಿನಿಯ ರೂಪ ಲವ್‌ಲಿನಾ ಮುಂದೆ ತೀರಾ ಸಪ್ಪೆಯಾಗಿ ತೋರಿತು, ಐಯಾನ್‌ಗೆ. ಐಯಾನ್ ಕಣ್ಣುಗಳ ಆಳಕ್ಕೆ ನೋಡುತ್ತ "ವೆರಿ ಸ್ಮಾರ್ಟ್ ಗೈ" ಎಂದಳು ಲವ್‌ಲಿನಾ ತುಟಿಗಳಲ್ಲಿಯೆ... ಅವಳು ಎದುರಿಗೆ ಇದ್ದಿದ್ದರೆ ಇಷ್ಟೊತ್ತಿಗೆ ಏನೇನು ನಡೆದುಬಿಡ್ತಾ ಇತ್ತೋ ಏನೊ...

"ನಿನ್ನ ವಿಳಾಸ ಹೇಳು. ನಾನು ಅರ್ಧಗಂಟೆಯಲ್ಲಿ ಅಲ್ಲಿರ್ತಿನಿ. ಇಲ್ಲ ನೀನೆ ಹೇಳು ಎಲ್ಲಿಗೆ ಬರ್ಲಿ...?" ಐಯಾನ್ ಎಲ್ಲವನ್ನು ಕಳೆದುಕೊಂಡವನಂತೆ ಕೇಳಿದ.

"ಐಯಾಮ್ ವೆರಿ ಸಾರಿ... ನನ್ಗೂ ನಿನ್ನನ್ನ ಎದುರುಗೊಳ್ಳಬೇಕು ಅನಿಸುತ್ತೆ... ಆದರೆ...?"

"ಆದರೆ?"

"ನನ್ನ ಬಾಯ್‌ಫ್ರೆಂಡ್ ಹಾಸಿಗೆ ಮೇಲೆ ನನಗಾಗಿ ಕಾಯ್ತಾ ಇದ್ದಾನೆ" ಎಂದಳು ಲವ್‌ಲಿನಾ.

ಅಲ್ಲಿಗೆ ಐಯಾನ್ ಉನ್ಮಾದವೆಲ್ಲ ಜರ್‍ರನೆ ಇಳಿದುಹೋಗಿ. ಮುಖ ಕಪ್ಪಾಗಿ. ಮೈಯೆಲ್ಲ ತಣ್ಣಗಾದಂತೆ ತೋರಿತು.

ಐಯಾನ್ ಮುಖವನ್ನು ನೊಡಿದ ಲವ್‌ಲಿನಾಗೆ ಅಯ್ಯೋ ಪಾಪ ಎನಿಸಿತು.

ಕೂಡಲೆ "ನನ್ನನ್ನು ಕ್ಷಮಿಸು. ತಮಾಷೆ ಮಾಡಿದೆ" ಎಂದ ಲವ್‌ಲಿನಾ ಗಲಗಲನೆ ನಕ್ಕಳು.

ನಿಜ ಹೇಳುತ್ತಿದ್ದಾಳೊ... ಸುಳ್ಳು ಹೇಳುತ್ತಿದ್ದಾಳೊ ಅವನಿಗೆ ಗೊತ್ತಾಗಲಿಲ್ಲ.

ಹೆಜ್ಜೆ ತಪ್ಪಿದವನಂತೆ ತಡವರಿಸುತ್ತ ಸ್ಪೇಸ್‌ನಲ್ಲಿ ಕಳೆದುಹೋದವನಂತೆ ಹಣೆಯನ್ನು

ಕೆರೆದುಕೊಳ್ಳುತ್ತ ಅವಳನ್ನೇ ದಿಟ್ಟಿಸಿ ನೋಡುತ್ತಿದ್ದ "ಓಕೆ ನಾನು ಮತ್ತೆ ನಿಮ್ಮ ಜೊತೆ ಮಾತಾಡ್ತೀನಿ" ಎಂದಳು ಲವ್‌ಲಿನಾ.

ಅಷ್ಟರಲ್ಲಿ ಸಂಪರ್ಕವು ಕಡಿದುಕೊಂಡಿತು. ಐಯಾನ್ ಅಲ್ಲೇ ಇದ್ದ ಕೊಳಾಯಿ ಕೆಳಗೆ ಕೈಇಟ್ಟಿದ್ದೆ ನೀರು ಸುರಿಯತೊಡಗಿತು. ಕೈ ತೊಳೆದುಕೊಂಡು ಟವಲ್‌ನಲ್ಲಿ ಒರೆಸಿಕೊಂಡು, ತನ್ನ ಖಾಸಗಿ ಕೋಣೆಯಿಂದ ಇನ್ನೊಂದು ಕೋಣೆಯ ಕಡೆಗೆ ತಟ್ಟಾಡುತ್ತಾ ನಡೆದ.ಐಯಾನ್ ತಲೆಯಲ್ಲಿ ಅವಳ ಮುಖ ಸಾವಿರಾರು ಮುದ್ರೆಗಳಾಗಿ ಹೋಗಿ ಕಣ್ಣುಗಳ ತುಂಬ ತುಂಬಿಹೋಗಿತ್ತು. ಹೇಗಾದರೂ ಮಾಡಿ ಅವಳ ಜೊತೆಗೆ ಒಂದು ದಿನವಾದರೂ ಕಳೆಯಲೇಬೇಕು. ಒಂದು ಬಿಲಿಯನ್ ಹಣ ಖರ್ಚಾದರು ಸರಿ. ಎಂತಹ ಸುಂದರಿ...? ನನ್ನ ಬಾಯ್ ಫ್ರೆಂಡ್ ಹಾಸಿಗೆ ಮೇಲೆ ನನಗಾಗಿ ಕಾಯ್ತಾ ಇದ್ದಾನೆ ಅಂದಳಲ್ಲ? ಅವಳು ನಿಜವೆ ಹೇಳಿರಬೇಕು. ಅವಳ ಸೌಂದರ್ಯವನ್ನು ನೋಡಿದ ಯಾರೇ ಆಗಲಿ ಮ್ಯಾಡ್ ಆಗುವುದಂತು ಖಂಡಿತ.

ಏನು ಕೆಲಸ ಮಾಡುತ್ತಿರಬಹುದು? ಹುಂ ಅವಳಿಗೆ ಕೆಲಸವಾದರೂ ಏತಕ್ಕೆ? ಅವಳು ಮನಸು ಮಾಡಿದರೆ ತನ್ನ ಸೌಂದರ್ಯದಿಂದ ದೇಶಗಳನ್ನೇ ಕೊಳ್ಳೆ ಹೊಡೆಯಬಹುದು. ಇಲ್ಲ, ದೇಶ ದೇಶಗಳ ಮಧ್ಯ ಯುದ್ಧಗಳನ್ನೇ ಮಾಡಿಸಬಹುದು. ಇವಳನ್ನು ಹೇಗಾದರೂ ಮಾಡಿ ಸಂಧಿಸಬೇಕಲ್ಲ, ಅವನಿಂದ ಯಾವ ಕೆಲಸವನ್ನು ಮಾಡಲಾಗಲಿಲ್ಲ.

ಆ ಕೋಣೆಯಿಂದ ಮತ್ತೆ ತನ್ನ ಖಾಸಗಿ ಕೋಣೆಗೆ ಹಿಂದಿರುಗಿ ಬಂದು ಕುಳಿತುಕೊಂಡ. ಚಡಪಡಿಸುತ್ತ ಫೋನ್ ಇನ್ ಟಿವಿ ಸ್ವಿಚ್ಚೊತ್ತಿ ತನಗೆ ಬಂದ ಫೋನ್ ಇನ್ ಟಿವಿ ಕರೆ ಸಂಖ್ಯೆಯನ್ನು ಚೆಕ್ ಮಾಡಿದ. ಆ ಸಂಖ್ಯೆ ಬೆನ್ ನಗರದಲ್ಲೇ ಇರುವ ಸಂಖ್ಯೆಯೆ ಆಗಿತ್ತು. ಆಕೆ ನಾನೂರು ಕಿಲೋಮೀಟರ್‌ಗಳ ದೂರದಲ್ಲಿದ್ದೀನಿ ಎಂದಿದ್ದು ಸುಳ್ಳೆ? ಸಂಖ್ಯೆಯ ವಿಳಾಸವನ್ನು ತಿಳಿದುಕೊಳ್ಳಲು ಇಂಟರ್‌ನೆಟ್ ಸಹಾಯ ತೆಗೆದುಕೊಂಡು ನೋಡುತ್ತಾನೆ.

ಅದು ಬೆನ್ ನಗರದ ಸುಪ್ರಸಿದ್ಧ ಹೋಟಲ್‌ನ ಒಂದು ಕೋಣೆಯಲ್ಲಿನ ಸಂಖ್ಯೆಯಾಗಿದೆ. 'ಓ... ನಿಜವಾಗಿಯೂ ಲವ್‌ಲಿನಾ ಬಾಯ್‌ಫ್ರೆಂಡ್ ಜೊತೆಗೆ ಸಮಯ ಕಳೆಯುತ್ತಿರಬಹುದು. ಆಕೆಯನ್ನು ಈಗ ಸಂಪರ್ಕಿಸುವುದು ಸರಿಯಲ್ಲ, ಅವಳು ಮತ್ತೆ ಖಂಡಿತ ನನ್ನನ್ನು ಸಂಪರ್ಕಿಸುತ್ತಾಳೆ' ಎಂದುಕೊಳ್ಳುತ್ತಾನೆ ಐಯಾನ್.

ಅಶ್ವಿನಿ ಫೋನ್ ಇನ್ ಟಿವಿಯಲ್ಲಿ ಕಾಣಿಸಿಕೊಂಡಳು. ಐಯಾನ್ ಮುಖ ನೋಡಿದ್ದೆ ಬೆಚ್ಚಿ ಬಿದ್ದ ಅಶ್ವಿನಿ "ಏನಾಯಿತು? ವಾಟ್ ಈಸ್ ರಾಂಗ್ ವಿತ್ ಯು...?" ಎಂದಳು ಗಾಬರಿಯಂದ. ಕೆಲವೇ ಕ್ಷಣಗಳಲ್ಲಿ ಮುಖದ ಲಕ್ಷಣಗಳನ್ನು ಬದಲಾಯಿಸಿಕೊಂಡ ಐಯಾನ್ "ಏನೂ ಇಲ್ಲ..." ಎಂದ.

"ನೊ ಸಮ್‌ಥಿಂಗ್ ಈಸ್ ರಾಂಗ್..." ಎಂದಳು ಅಶ್ವಿನಿ.

ಐಯಾನ್ ಮುಗುಳು ನಗುತ್ತಾ ''ಓ ಕಮಾನ್ ಅಶ್ವಿನಿ. ಮುಖ ತೊಳೆದುಕೊಂಡೆ ಅಷ್ಟೇ'' ಎಂದ.

''ಬೇಗ ಬಂದುಬಿಡು. ಐ ವಾಂಟು ಯು ಇಮಿಡಿಯಟ್ಲಿ'' ಎಂದಳು ಅಶ್ವಿನಿ. ಐಯಾನ್ ಅವಳನ್ನೇ ದಿಟ್ಟಿಸಿ ನೋಡಿದ.

ಅಶ್ವಿನಿ ತುಟಿಗಳನ್ನು ಸವರಿಕೊಂಡು ಪಕ್ಕದಲ್ಲಿದ್ದ ಗ್ಲಾಸ್ ತೆಗೆದುಕೊಂಡು ಒಂದು ಪೆಗ್ ಮಿನರಲ್ ಪೇಯ ಕುಡಿದು ಐಯಾನ್ ಕಡೆಗೆ ನೋಡಿದಳು. ಮಾದಕ ತುಂಬಿದ ಕಣ್ಣುಗಳು... ದಪ್ಪವಾಗಿರುವ ತುಟಿಗಳು... ರಂಗೇರಿದ ಕೆನ್ನೆಗಳು... ಆಗಲೆ ಒಂದೊ ಎರಡೊ ಪೆಗ್ಗು ಕುಡಿದಿರಬೇಕು ಎಂದುಕೊಂಡನು.

''ನಾನು ಈಗಲೆ ಹೋಗದಿದ್ದರೆ ಅನಾಹುತವೇ ನಡೆದು ಹೋಗುತ್ತದೆ'' ಎಂದುಕೊಂಡು ಐಯಾನ್ ಬ್ರೀಫ್‌ಕೇಸ್ ತೆಗೆದುಕೊಂಡು ಕಛೇರಿಯಿಂದ ಹೊರನಡೆದ. ಈಗಲೂ ಅವನ ತಲೆ ತುಂಬಾ ಲವ್‌ಲಿನಾಳೆ ತುಂಬಿ ಹೋಗಿದ್ದಳು.

ಅಶ್ವಿನಿ ಕೂಡ ಭಾರಿ ಹಣವಂತರ ಕುಟುಂಬದಿಂದ ಬಂದವಳು. ಅವಳ ಕುಟುಂಬದ ಕಾರುಬಾರು ದೇಶ ವಿದೇಶಗಳಲ್ಲಿ ಹರಡಿಹೋಗಿದೆ. ಐಯಾನ್ ಮತ್ತು ಅಶ್ವಿನಿಯ ಮದುವೆ ಇಂದಿನವರೆಗೂ ಬೆನ್ ನಗರದಲ್ಲಿ ನಡೆದ ಅತ್ಯಂತ ದುಬಾರಿ ಮದುವೆ ಎಂದು ಖ್ಯಾತಿ ಪಡೆದಿದೆ. ಅವರಿಬ್ಬರು ಮೂರು ತಿಂಗಳು ಕಾಲ ತಮ್ಮದೇ ಗುಬ್ಬಚ್ಚಿಯಂತಹ ವಿಮಾನದಲ್ಲಿ ಖಂಡ ಖಂಡಗಳನ್ನೆಲ್ಲ ಸುತ್ತಾಡಿ ಹನಿಮೂನ್ ಮಾಡಿ ಬಂದಿದ್ದರು.

ಐಯಾನ್ ನೇರವಾಗಿ ಬೆಡ್‌ರೂಂ ತಲುಪಿದ. ಅಶ್ವಿನಿ, ಐಯಾನ್‌ನನ್ನು ನೋಡಿದ್ದೆ ತಡ ತೋಳುಗಳನ್ನು ಚಾಚಿಕೊಂಡು ಹತ್ತಿರಕ್ಕೆ ನಡೆದಳು. ಬಂಗಾರ ಬಣ್ಣದ ಅರ್ಧ ತೋಳಿನ ಸ್ಕರ್ಟ್‌ನಲ್ಲಿ ಅವಳ ಎದೆಗಳು ಎದ್ದು ಕಾಣಿಸುತ್ತಿವೆ. ಮಿನಿ ನಿಕ್ಕರಿನ ಕೆಳಗೆ ಮಿನುಗುತ್ತಿದ್ದ ತೊಡೆಗಳು ನಗ್ನವಾಗಿ ತೂರಾಡುತ್ತಿವೆ. ಐಯಾನ್ ಆಶ್ಚರ್ಯವಾಗಿ ಅವಳನ್ನೇ ನೋಡತೊಡಗಿದ.

''ಸಾರಿ ಐಯಾನ್, ಇಂಟರ್‌ನೆಟ್‌ನಲ್ಲಿ ಒಂದು ಸಿನಿಮಾ ನೋಡಿದೆ. ನನ್ನಿಂದ ತಡೆಯಲಾಗಲಿಲ್ಲ'' ಎಂದಳು. ''ಓ ಅದಾ ವಿಷಯ?'' ಐಯಾನ್ ಪರಿಸ್ಥಿತಿಯನ್ನು ಎದುರಿಸಲು ತಯಾರಾಗತೊಡಗಿದ. ಅಶ್ವಿನಿ ತಡೆಯಲಾರದೆ ಅವನ ಬಾಹುಗಳಲ್ಲಿ ಒರಗಿ ಹೋದಳು. ಐಯಾನ್, ಅಶ್ವಿನಿಯನ್ನು ಹಾಸಿಗೆ ಮೇಲೆ ಕೂರಿಸಿ ತಾನು ಒಂದು ಪೆಗ್ಗು ಏರಿಸಿದ. ಈಗ ಐಯಾನ್, ಅಶ್ವಿನಿ ಹತ್ತಿರಕ್ಕೆ ನಡೆದು ಬಂದು ಅವಳ ಕಣ್ಣಲ್ಲಿ ಕಣ್ಣಿಟ್ಟು ನೋಡತೊಡಗಿದ. ಮಾಟವಾದ ಮೂಗು, ಮುದ್ದಾಗಿ ಬೆಸೆದುಕೊಂಡಿರುವ ಕೆಂಪನೆಯ ತುಟಿಗಳು, ಕೆಳದುಟಿಯ ಕೆಳಗೊಂದು ಕಪ್ಪು ಮಚ್ಚೆ, ಮಾದಕವೇರಿರುವ ಕಣ್ಣುಗಳ ಮೇಲೆ ರೆಪ್ಪೆಗಳೂ ತೂರಾಡುತ್ತಿವೆ.

ಐಯಾನ್, ಅಶ್ವಿನಿಯನ್ನು ತಬ್ಬಿಕೊಂಡು ತುಟಿಗಳಿಗೆ ತುಟಿಗಳನ್ನು ಒತ್ತಿದ. ಆಗಲೇ ಮತ್ತೇರಿ ಹೋಗಿದ್ದ ಅಶ್ವಿನಿಯ ತುಟಿಗಳು ಕಾದು ಕಾದು ಕನಲಿ ಹೋಗಿದ್ದವು. ಆ ಸಾಯಂಕಾಲ ಮಾದಕವಾಗಿ ಮತ್ತೇರುತ್ತ ರಾತ್ರಿಯಾಗುತ್ತ ಹೋಗುತ್ತಿತ್ತು. ಒಂದು ರೋಬೋಟ್ ಕಾಸ್ಮೋರಾಳನ್ನು ಮಲಗಿಸಿ ಪಕ್ಕದಲ್ಲಿ ನಿಂತುಕೊಂಡಿದ್ದರೆ ಉಳಿದ ರೋಬೋಟ್‌ಗಳು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದವು.

ಐಯಾನ್ ಮತ್ತು ಅಶ್ವಿನಿ ಉನ್ಮಾದದ ಯುದ್ಧದಲ್ಲಿ ತೊಡಗಿಕೊಂಡಿದ್ದರು



ನಿಗದಿತ ದಿನ ಸಮಯಕ್ಕೆ ಸರಿಯಾಗಿ ಸ್ಪೇಸ್ ಕಾಲೋನಿಗೆ ಹೋಗಲು ಹದಿನಾರು ಅಭ್ಯರ್ಥಿಗಳ ಜೊತೆಗೆ ಇಬ್ಬರು ಮೇಲ್ವಿಚಾರಕರು ಸೇರಿ ಬೆನ್ ನಗರದಿಂದ ವಿಮಾನದಲ್ಲಿ ಅಂಟಾರ್ಕ್‌ಟಿಕ ಕಡೆಗೆ ಹೊರಟರು.

ವಿಮಾನ ಪೂರ್ಣವಾಗಿ ರಿಮೋಟ್ ಕಂಟ್ರೋಲ್‌ನಲ್ಲಿ ತನ್ನ ಪ್ರಯಾಣವನ್ನು ಪ್ರಾರಂಭಿಸಿತು. ಬೆನ್ ನಗರದಿಂದ ಎಪ್ಪತ್ತೇಳು ಡಿಗ್ರಿ ಮೂವತ್ತು ಮೂರು ಅಕ್ಷಾಂಶದ ಮೇಲೆ ಗಂಟೆಗೆ ಸಾವಿರ ಕಿ. ಮೀಟರುಗಳ ವೇಗದಲ್ಲಿ ಸಾಗಿದ ವಿಮಾನ ಕೇವಲ ಹನ್ನೆರಡು ಗಂಟೆಗಳಲ್ಲಿ ದಾರಿ ಸವೆದು ಯುಎಸ್‌ಐಗೆ ಸೇರಿದ ಗಂಗೋತ್ರಿಯ ನಿಲ್ದಾಣದಲ್ಲಿ ಇಳಿದುಕೊಂಡಿತು. ದಕ್ಷಿಣ ಧ್ರುವ ಎನ್ನುವ ಅಂಟಾರ್ಕಟಿಕ ಅರವತ್ತೊಂಬತ್ತು ಡಿಗ್ರಿ ಐವತ್ತೊಂಬತ್ತು ಡಿಗ್ರಿಗಳು ದಕ್ಷಿಣ ಮತ್ತು ಹನ್ನೊಂದು ಡಿಗ್ರಿ ಏಳು ಡಿಗ್ರಿಗಳು ಪೂರ್ವದಲ್ಲಿ ಇದೆ. ಹತ್ತಿರದ ತೀರವೆಂದರೆ ಆರುನೂರ ಐವತ್ತು ಕಿ.ಮೀಟರುಗಳ ದೂರದಲ್ಲಿರುವ ದಕ್ಷಿಣ ಅಮೆರಿಕಾ ಖಂಡದ ತುತ್ತತುದಿ. ನಮ್ಮ ದೇಶದ ಕನ್ಯಾ ಕುಮಾರಿಯಿಂದ ಇಲ್ಲಿಗೆ 11 ಸಾವಿರ ಕಿ.ಮೀಟರುಗಳ ದೂರ.

ಅದು ಜನವರಿ ತಿಂಗಳಾಗಿದ್ದು ರಾತ್ರಿ ಹನ್ನೆರಡು ಗಂಟೆಗೂ ಸೂರ್ಯ ಆಕಾಶದಲ್ಲಿ ಬುಗುರಿಯಂತೆ ಗಿರಿಕಿ ಹೊಡೆಯುತ್ತ ಗಸ್ತಿ ಹೊಡೆಯುತ್ತಿದ್ದಾನೆ. ಉಷ್ಣಾಂಶ ಸೊನ್ನೆಯಿಂದ ಮೈನಸ್ ಏಳು ಡಿಗ್ರಿಗಳಷ್ಟಿದೆ. ಇಲ್ಲಿ ಬೇಸಿಗೆ ಕಾಲದಲ್ಲಿ ಇಪ್ಪತ್ನಾಲ್ಕು ಗಂಟೆಗಳು ಬೆಳಕೆ ಇರುತ್ತದೆ. ಇದಕ್ಕೆ ವಿರುದ್ಧವೆಂದರೆ ಚಳಿಗಾಲದಲ್ಲಿ ಇಪ್ಪತ್ನಾಲ್ಕು ಗಂಟೆಗಳೂ ಕತ್ತಲೆ ಇರುತ್ತದೆ. ಆಗ ಉಷ್ಣಾಂಶ ಸೊನ್ನೆಯಿಂದ ಮೈನಸ್ ಅರವತ್ತು ಎಪ್ಪತ್ತು ಡಿಗ್ರಿಗಳ ಕೆಳಗೆ ಹೋಗಿಬಿಡುತ್ತದೆ.

ವಿಮಾನ ಇಳಿಯುವುದಕ್ಕೆ ಎರಡು ಗಂಟೆ ಮುಂಚೆಯೇ ವಿಮಾನದ ಒಳಗಿದ್ದವರು ಅಂಟಾರ್ಕ್‌ಟಿಕ ಹವಾಗುಣಕ್ಕೆ ತಕ್ಕಂತೆ ಉಡುಪನ್ನು ಬದಲಾಯಿಸಿಕೊಂಡಿದ್ದರು. ಎಲ್ಲರೂ ಅವರವರ ಲಗೇಜುಗಳ ಸಮೇತ ವಿಮಾನ ಇಳಿದುಕೊಳ್ಳುತ್ತಿದ್ದಂತೆ ಅಲ್ಲಿನ ಗೈಡ್‌ಗಳು ಅವರನ್ನು ಎದುರಿಗಿದ್ದ ಅತಿಥಿಗೃಹಕ್ಕೆ ಕರೆದೊಯ್ದರು. ಅತಿಥಿಗೃಹವೆಂದರೆ ಗುಡಾರಗಳು.

ಅವರು ಅಲ್ಲಿ ಉಳಿದುಕೊಳ್ಳಲು ಎಲ್ಲವೂ ಮೊದಲೆ ಏರ್ಪಾಟಾಗಿತ್ತು. ಅಂಟಾರ್ಕ್ಟಿಕ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದ ಅವರು ಹನ್ನೆರಡು ಗಂಟೆಗಳ ಕಾಲ ಅಲ್ಲಿ ವಿಶ್ರಾಂತಿ ತೆಗೆದುಕೊಂಡು ಸ್ಪೇಸ್ ಕಾಲೋನಿಗೆ ಹೋಗಬೇಕಿತ್ತು.

ಆ ಹನ್ನೆರಡು ಗಂಟೆಗಳಲ್ಲಿ ಅಂಟಾರ್ಕ್ಟಿಕದ ಐಸ್ ಬರ್ಗ್‌ಗಳು... ಪೆಂಗ್ವಿನಲೋಕ... ದೈತ್ಯ ತಿಮಿಂಗಿಲಗಳ ಆಟ... ಸೀಲ್‌ಗಳ ಹೊರಳಾಟವನ್ನು ಅವರು ನೋಡಲು ಆತುರದಿಂದ ಕಾಯುತ್ತಿದ್ದರು. ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು ಐಸ್‌ಫುಡ್ ಬಿಸಿ ಮಾಡಿ ತಿಂದು, ಐಸನ್ನು ಬಿಸಿ ಮಾಡಿ ಕುಡಿದು ಗೈಡ್‌ಗಳ ಸಹಾಯದಿಂದ ಹೊರಕ್ಕೆ ಬಂದರು. ಅಂಟಾರ್ಕ್ಟಿಕ ನೋಡಲು ಹೋಗುವ ಪ್ರವಾಸಿಗರು ಮುಖ್ಯವಾಗಿ ಇಲ್ಲಿನ ಎರಡು ಅದ್ಭುತಗಳನ್ನು ವೀಕ್ಷಿಸಲು ಹಾತೊರೆಯುತ್ತಾರೆ. ಒಂದು ದಿಗಂತದಲ್ಲಿ ಕಾಣಿಸಿಕೊಳ್ಳುವ "ಅರೋರಾ" ಎಂಬ ಬಣ್ಣಗಳ ದೊಂಬರಾಟ, ಎರಡು ಬರ್ಫ್ ಗುಡ್ಡಗಳ ಸೊಗಸು. ಬೇಸಿಗೆ ಮತ್ತು ಚಳಿಕಾಲದ ಆಚಿನ ದಿನಗಳಲ್ಲಿ ಮಾತ್ರ ಆರೋರಾ ಬಣ್ಣಗಳನ್ನು ವೀಕ್ಷಿಸಬಹುದಾಗಿದೆ.

ಎಲ್ಲರೂ ಐಸ್ ಸೀಟುಗಳ ಮೇಲೆ ನಿಂತುಕೊಂಡು ದಿಗಂತದ ಕಡೆಗೆ ನೋಡುತ್ತಿದ್ದಾರೆ. ಎಲ್ಲರ ಕೈಗಳಲ್ಲೂ ಟೆಲಿಸ್ಕೋಪ್‌ಗಳಿವೆ. ಎಂತಹ ನೋಟ? ಅಲ್ಲಿಂದ ಭೂಮಿಯೇ ಒಂದು ಬೋಗುಣಿಯಂತೆ ಕಾಣಿಸುತ್ತಿದೆ. ಹಿಮದ ಗುಡ್ಡೆಗಳು ತಬ್ಬಲಿ ಮಕ್ಕಳಂತೆ ಉರುಳಾಡುತ್ತಿವೆ. ಬಿಳುಪೆಂದರೆ ಬಹುಶಃ ಇದಕ್ಕಿಂತ ಬಿಳುಪನ್ನು ಅವರು ಎಲ್ಲೂ ನೋಡಿರಲಿಲ್ಲ. ಬರಿ ಕಣ್ಣಿನಲ್ಲಿ ನೋಡಿದರೆ ಕಣ್ಣುಗಳು ಕುರುಡಾಗಿ ಬಿಡುತ್ತವೆ. ಅಷ್ಟೊಂದು ಬಿಳುಪು. ಎಲ್ಲೆಲ್ಲೂ ಬಿಳುಪು, ಭೂಮಿಯೆ ಬಿಳುಪಿನ ನೊರೆಯಿಂದ ತುಳುಕಾಡುವಂತೆ ಕಾಣಿಸುತ್ತಿದೆ. ಕಣ್ಣುಗಳನ್ನು ರಕ್ಷಿಸಿಕೊಳ್ಳಲು ಎಲ್ಲರೂ ವಿಶೇಷ ಕನ್ನಡಕಗಳನ್ನು ಧರಿಸಿದ್ದಾರೆ.

ಅದರಾಚೆ ದಿಗಂತದಲ್ಲಿ ಬಣ್ಣದ ಓಕುಳಿಯಾಟ, ಬಾನ್‌ಗಡಿಯ ಮೇಲೆ ಕಾಣಿಸಿಕೊಳ್ಳಲು ತವಕಿಸುತ್ತಿದೆ. ಅದೆ ಅರೋರಾ... ಸೂರ್ಯ ದಿಗಂತದ ಅಂಚಿನಲ್ಲಿ ಗಿರಿಕಿ ಹೊಡೆಯುತ್ತಿದ್ದಂತೆ ಬೆಳಕಿನ ಕಿರಣಗಳು ಆಕಾಶವೆಂಬ ಪರದೆಯ ಮೇಲೆ ಕಾಣಿಸಿಕೊಳ್ಳುತ್ತವೆ. ಬಿಳಿ ಬಣ್ಣ... ಏಳು ಬಣ್ಣಗಳಾಗಿ... ನೂರಾರು ಬಣ್ಣಗಳಾಗಿ ಹೊಡೆದುಕೊಂಡು ಅರೋರಾ ಕಾಣಿಸುತ್ತಿದೆ.

ಅರೋರಾ ನೋಡುತ್ತಿರುವವರ ಬಾಯಿಗಳಿಂದ ಮಾತುಗಳು ಹೊರಡಲೇ ಇಲ್ಲ. ಆ ಗುಂಪಿನಲ್ಲಿ ಲವ್‌ಲೀನಾ ಕೂಡ ನಿಂತಿದ್ದಾಳೆ. ಯಾರ ರೂಪ ಯಾರಿಗೂ ಕಾಣಿಸುತ್ತಿಲ್ಲ. ಎಲ್ಲರೂ ಚಳಿಯನ್ನು ತಡೆದುಕೊಳ್ಳಲು ವಿಶೇಷ ಮತ್ತು ದಪ್ಪವಾದ ಉಡುಪುಗಳ ಒಳಗೆ ಅವಿತುಕೊಂಡಿದ್ದಾರೆ. ಸೂರ್ಯ ಪೂರ್ವದಲ್ಲಿ ಹುಟ್ಟುವಾಗ ಸೃಷ್ಟಿಯಾಗುವ ಬೆಳಕಿನ ಬಣ್ಣಗಳಿಗಿಂತ ನೂರಾರು, ಸಾವಿರಾರು ಪಟ್ಟು ಹೆಚ್ಚಿನ ವಿಸ್ಮಯ ಬಣ್ಣಗಳು ಇಲ್ಲಿ ಕಾಣಿಸುತ್ತಿವೆ.

ಬಣ್ಣಗಳ ದೊಂಬರಾಟವನ್ನು ನೋಡುತ್ತಿದ್ದಂತೆ ಅಕ್ಕಪಕ್ಕದಲ್ಲಿ ಓಡಾಡುತ್ತಿದ್ದ

ಪೆಂಗ್ವಿನ್‌ಗಳು ಕೊರಕ್ ಕೊರಕ್ ಎಂದು ಸದ್ದು ಮಾಡುತ್ತ ಅವರ ಗಮನವನ್ನು ಸೆಳೆಯಲು ಪ್ರಯತ್ನಿಸುತ್ತಿವೆ. ಅವುಗಳ ಜೊತೆಗೆ ಕೆಲವರು ಸಂಭಾಷಣೆಗೆ ತೊಡಗಿದಂತೆ ಅವು ಜನರನ್ನು ಜನರು ಅವುಗಳನ್ನು ನೋಡುತ್ತ ನಿಂತಿದ್ದಾರೆ. ಚಳಿ ತಾರಕ ಏರುತ್ತಿದೆ. ದಿಗಂತದಲ್ಲಿ ಬಣ್ಣಗಳ ದೊಂಬರಾಟ ಸಾಗೇ ಇದೆ.

ಮರುದಿನ ಬೆಳಗ್ಗೆ ಎಂಟು ಗಂಟೆಗೆ ಸ್ಪೇಸ್ ಕಾಲೋನಿ ಕಡೆಗೆ ಹೋಗಬೇಕಾಗಿದ್ದರಿಂದ ಅವರೆಲ್ಲರೂ ಹಿಂದಿರುಗಿ ತಮ್ಮ ಗುಡಾರಗಳನ್ನು ಸೇರಿಕೊಂಡರು.



ಐಯಾನ್ ಎಂದಿನಂತೆ ಜಿಗ್ಮಾ ಕಟ್ಟಡದ ತನ್ನ ಕಛೇರಿಯಲ್ಲಿ ಕುಳಿತು ಕಾರ್ಯ ನಿರ್ವಹಿಸುತ್ತಿದ್ದಾನೆ. ಆಗ ಪ್ಲಾಸ್ಮ ಪರದೆಯ ಮೇಲೆ ಲವ್‌ಲೀನಾ ಕಾಣಿಸಿಕೊಂಡು "ಹಲೊ... ಹಲೊ...?" ಎಂದಳು.

ಅದೇ ಧ್ವನಿ... ಅದೇ ಮೋಹ... ಅದೇ ಮಾದಕ ಕಣ್ಣುಗಳು.

ಬೆಚ್ಚಿಬಿದ್ದ ಐಯಾನ್ ಅವಳ ಕಡೆಗೆ ಕಣ್ಣುಗಳನ್ನು ನೆಟ್ಟು ಕಾತುರದ ಧ್ವನಿಯಲ್ಲಿ,

"ಎಲ್ಲಿದ್ದೀಯಾ?" ಪ್ರಶ್ನಿಸಿದ.

"ಬೆನ್ ನಗರದಿಂದ 12 ಸಾವಿರ ಕಿಲೋಮೀಟರುಗಳು ದೂರದಲ್ಲಿ" ಗಲಗಲನೆ ನಕ್ಕಳು.

"ಮೊನ್ನೆ ನಾನೂರು ಕಿಲೋಮೀಟರುಗಳೆಂದೆ. ಈಗ ಹನ್ನೆರಡು ಸಾವಿರ ಕಿಲೋ ಮೀಟರುಗಳೆನ್ನುತ್ತಿದ್ದೀಯಲ್ಲ? ಎಲ್ಲಿದ್ದೀಯಾ?" ಪರದೆಯ ಮೇಲೆ ಬರುತ್ತಿದ್ದ ಸಂಖ್ಯೆಗಳನ್ನು ಗಮನಿಸಿತೊಡಗಿದ. ಹೌದು! ಆ ಸಂಖ್ಯೆಗಳು ದಕ್ಷಿಣ ಧ್ರುವ ಅಂಟಾರ್ಕ್‌ಟಿಕದ ಫೋನ್ ಸಂಖ್ಯೆಗಳು.

ತುಸು ಹೌಹಾರಿದ ಐಯಾನ್ "ಅಲ್ಲಿ ಏನ್ ಮಾಡ್ತಾಯಿದ್ದೀಯ ಹನಿ..."

"ಹನಿ... ಓ ನೊ. ನನ್ನೆಸರು ಲವ್‌ಲೀನಾ..." ಎಂದಳು.

"ಹೌದು! ಹನೀಗಿಂತ ಲವ್‌ಲೀನಾನೆ ಚೆನ್ನಾಗಿದೆ. ಹನಿ ಹಂತ ಕರೆದರೆ ಏನಾದರೂ ಅಭ್ಯಂತರ ಇದೆಯಾ..." ಐಯಾನ್ ಪ್ರಶ್ನಿಸಿದ.

"ಓಕೆ, ನಿನಗಾಗಿ ಸ್ಯಾಂಕ್ಷನ್..." ಎಂದಳು ಲವ್‌ಲೀನಾ.

"ಅಲ್ಲಿ ಏನ್ ಮಾಡ್ತಾ ಇದ್ದೀಯ...?"

"ನಾನ್ ಸ್ಪೇಸ್ ಕಾಲೋನಿಗೆ ಹೋಗ್ತಾ ಇದ್ದೀನಿ"

"ಯಾವ ಕಂಪನಿಯಲ್ಲಿದ್ದೀಯಾ?"

''ಯಾವ ಕಂಪನಿಯಲ್ಲೂ ಇಲ್ಲ. ಸುತ್ತಾಡಿ ಬರೋದಕ್ಕೆ ಹೋಗ್ತಾ ಇದ್ದೀನಿ''

''ನನಗೆ ಮೊದಲೆ ತಿಳಿಸಿದ್ದರೆ ನಾನೂ ಬರ್ತಾ ಇದ್ದನಲ್ಲ...''

''ಈಗಲೂ ಬರಬಹುದಲ್ಲ...''

''ನಿಜವಾಗಿ? ಅಲ್ಲೇ ಇರು, ನಾಳೆ ಬೆಳಗ್ಗೇನೆ ಅಲ್ಲಿರ್ತೀನಿ. ನಿನ್ನನ್ನ ಹತ್ತಿರದಿಂದ ನೋಡ್ಬೇಕು'' ಐಯಾನ್ ಮಾತುಗಳಿಂದ ಎಕ್ಸೈಟ್ ಆದ ಲವ್‌ಲೀನಾ ''ತುಂಬಾ ಆತುರ ಒಳ್ಳೆಯದಲ್ಲಾ'' ನಕ್ಕಳು. ಮತ್ತೆ ''ನಿನ್ನನ್ನ ಯಾವಾಗ ಸಂಧಿಸೋದು? ಎಲ್ಲಿ ಸಂಧಿಸೋದು? ಮದುವೆ ಆಗಿದೀಯಾ? ಬಾಯ್ ಫ್ರೆಂಡ್ ಇದ್ದಾನಾ?'' ಐಯಾನ್ ಪ್ರಶ್ನೆಗಳ ಮಳೆಯನ್ನೇ ಸುರಿಯತೊಡಗಿದ.

ಲವ್‌ಲೀನಾ, ಐಯಾನ್ ಮುಖವನ್ನೇ ದಿಟ್ಟಿಸಿ ನೋಡುತ್ತಾ ಎಲ್ಲಾ ಪ್ರಶ್ನೆಗಳಿಗೂ ಒಂದೇ ಉತ್ತರ ಎನ್ನುವಂತೆ ''ನಿನಗೆ ಸುಂದರವಾದ ಪತ್ನಿ ಇದ್ದಾಳೆ'' ಎಂದಳು. ಐಯಾನ್ ಮುಖ ಚಿಕ್ಕದಾಗುತ್ತಿರುವಂತೆ ಕಂಡ ಲವ್‌ಲೀನಾ ''ಸಾರಿ... ನಾನು ಎಲ್ಲೂ ಕೆಲಸ ಮಾಡೋದಿಲ್ಲ. ಇಷ್ಟ ಬಂದಾಗ ಕ್ಲಬ್ಬುಗಳಲ್ಲಿ ಹಾಡ್ತೀನಿ. ಒಳ್ಳೆ ರೋಲ್ ಸಿಕ್ಕಿದರೆ ನಟಿಸ್ತೀನಿ. ಕೈಯಲ್ಲಿ ಹಣ ಇರುವವರೆಗೂ ಸುತ್ತಾಡ್ತೀನಿ. ಲಂಡನ್‌ನ ಸೀಕೊ ಕಟ್ಟಡದಲ್ಲಿ ಒಂದು ಸಣ್ಣ ಫ್ಲಾಟ್ ಇದೆ'' ಎನ್ನುತ್ತಿದ್ದಂತೆ.

''ಪ್ಲೀಸ್... ನಾನು ಆದಷ್ಟು ಬೇಗ ನಿನ್ನನ್ನ ಸಂಧಿಸ್ಬೇಕು. ಇಲ್ಲ ಅಂದರೆ ನಾನ್ ಹುಚ್ಚನಾಗ್ಬಿಡ್ತೀನಿ'' ಐಯಾನ್ ಹೇಳಿದ. ಅವನ ಆತುರತೆ ಕಂಡ ಲವ್‌ಲೀನಾಗೆ ತುಸು ಕನಿಕರ ಹುಟ್ಟಿತು. ಜೊತೆಗೆ ಒಂದೆರಡು ಕ್ಷಣ ಶಾಕ್ ಹೊಡೆಸಿಕೊಂಡಂತೆ ಗಂಭೀರಳಾದಳು. ಅನಂತರ ''ಒಕೆ ನಾನು ಬೆನ್ ನಗರಕ್ಕೆ ಬಂದಾಗ ಭೇಟಿಯಾಗ್ತೀನಿ ಆದರೆ...''

''ಆದರೆ ಏನು'' ಐಯಾನ್ ಪ್ರಶ್ನಿಸಿದ.

''ನನಗೆ ಒಂದು ದಿನಕ್ಕೆ ಇಪ್ಪತ್ತೈದು ಲಕ್ಷ ರೂಪ್ಯೆಯ ಕೊಡಬೇಕು'' ಲವ್‌ಲೀನಾ ಮಾತಿಗೆ ಸೆಳೆತಗೊಂಡ ಐಯಾನ್ ಮಿದುಳಿನಲ್ಲಿ ಹಲವು ಯೋಚನೆಗಳು, ನಕ್ಷತ್ರಗಳಂತೆ ಮಿನುಗತೊಡಗಿದವು. ಒಂದು ಸುಂದರವಾರದ ಹೆಣ್ಣಿನ ಜೊತೆ ಕಾಲ ಕಳೆಯಲು ಇಪ್ಪತ್ತೈದು ಲಕ್ಷ ಏನು ನೂರು ಲಕ್ಷ ಖರ್ಚು ಮಾಡುವುದು ಅವನಿಗೆ ಪ್ರಶ್ನೆಯಲ್ಲ, ಇವಳು ಪೂರ್ಣವಾಗಿಯೆ ಕಾಲ್‌ಗರ್ಲ್ ಎನ್ನುವ ಸಂದೇಹ ಅವನ ಕಣ್ಣುಗಳಲ್ಲಿ ಮೂಡಿತು.

ಐಯಾನ್ ಮುಖ ವಿವರ್ಣವಾದುದನ್ನು ಗಮನಿಸಿ ಲವ್‌ಲೀನಾ ಮುಖದಲ್ಲಿ ವ್ಯಂಗ್ಯತನ ಕಾಣಿಸಿಕೊಂಡು,

''ಏನಾಯಿತು?'' ಪ್ರಶ್ನಿಸಿದಳು.

''ಏನೂ ಇಲ್ಲ, ನಿನ್ಗೆ ಎಷ್ಟು ಲಕ್ಷ ಬೇಕೋ ಕೊಡ್ತೀನಿ. ಆದರೆ ಇವೊತ್ತೆ ನೀನು ನನ್ಗೆ ಬೇಕು'' ಐಯಾನ್ ಮೊಂಡನಂತೆ ಕೇಳಿದ.

"ಇಲ್ಲ! ನಾನು ಬಹಳ ಕಷ್ಟಪಟ್ಟು ಸ್ಪೇಸ್ ಕಾಲೋನಿಗೋಗಲು ಅಪ್ಪಣೆ ಪಡೆದಿದ್ದೀನಿ. ಈ ಸಲ ನಾನ್ ಹೋಗ್ಲೇಬೇಕು. ನಾಳೆ ಬೆಳಗ್ಗೆ ಎಂಟು ಗಂಟೆಗೆ ಅಂಟಾರ್ಕ್‌ಟಿಕಾದಿಂದ ಸ್ಪೇಸ್ಗೆ ಹೋಗ್ತಾ ಇದ್ದೀನಿ. ಅಲ್ಲಿಂದ ನೇರವಾಗಿ ನಿನ್ನತ್ತಿರಾನೆ ಬರ್ತೀನಿ. ಸಾರಿ ಗುಡ್‌ಬೈ" ಎಂದು ಅವನ ಎದುರಿಗೆ ಬಟನ್ ಒತ್ತಿದಳು. ಅವಳ ಚಿತ್ರ ಪರದೆಯಿಂದ ಮಾಯವಾಯಿತು.

"ಛೀ ಇವಳ್ನ ನೋಡಿದ ಮೇಲೆ ನಾನೇಕೆ ಇಷ್ಟು ಮ್ಯಾಡ್ ಆಗ್ತಾ ಇದ್ದೀನಿ..." ಐಯಾನ್ ಕೈಕೈ ಹಿಸುಕಿಕೊಂಡ.



ವರ್ಲ್ಡ್ ಹೆರಿಟೇಜ್ ಎನ್ನುವುದು ಎ ವಲಯದಲ್ಲಿರುವ ಅತ್ಯಂತ ದುಬಾರಿ ಕ್ಲಬ್‌ನ ಹೆಸರು. ಅದರ ಒಳಗಿರುವ ಪ್ರಿಸಮ್ ಹಾಲ್‌ನಲ್ಲಿ ಏನಾದರೂ ಕಾರ್ಯಕ್ರಮಗಳು ನಡೆಯುತ್ತವೆ ಎಂದರೆ ಇನ್ನೂ ವಿಶೇಷ. ಸಾಯಂಕಾಲ ಮುಗಿಯುತ್ತಿದ್ದಂತೆ ಭೂಮಿಯ ಮೇಲೆ ಕತ್ತಲು ಆವರಿಸಿಕೊಳ್ಳುತ್ತಿದೆ. ಕತ್ತಲಲ್ಲಿ ಜೀವನ ನಡೆಸಲಾಗದ ಜನರು ಮನೆಗಳ ಒಳಗೆ ಹೊರಗೆ ಎಲ್ಲೆಲ್ಲೂ ಬೆಳಕಿನ ದೀಪಗಳನ್ನು ಅಚ್ಚಿಕೊಂಡು ಓಡಾಡುತ್ತಿದ್ದಾರೆ.

ವರ್ಲ್ಡ್ ಹೆರಿಟೇಜ್ ಕಟ್ಟಡ ಎ ವಲಯದ ಮಧ್ಯದಲ್ಲಿದ್ದು ನಗರದಲ್ಲಿಯೆ ಅತಿ ಎತ್ತರವಾದ ಕಟ್ಟಡವಾಗಿದೆ. ಆ ಕಟ್ಟಡದ ಮೇಲೆ ನಿಂತು ಸುತ್ತಲೂ ನೋಡಿದಾಗ ನೀರಿನ ಮೇಲೆ ಕಲ್ಲೆಸೆದಾಗ ಮೂಡುವ ಅಲೆಗಳಂತೆ ಕಟ್ಟಡಗಳು ಸುತ್ತಲೂ ಕಾಣಿಸುತ್ತವೆ. ಅದರಾಚೆ ಸುತ್ತಲು ಹಸಿರು ಪಟ್ಟೆಯನ್ನು ವೃತ್ತಾಕಾರವಾಗಿ ಬೆಳೆಸಲಾಗಿದೆ. ಕಟ್ಟಡದ ಮೂವತ್ತೊಂಬತ್ತನೆ ಅಂತಸ್ತಿನಲ್ಲಿರುವ ಪ್ರಿಸಮ್ ಹಾಲ್‌ನಲ್ಲಿ ಚಟುವಟಿಕೆಗಳು ಬಿರುಸಾಗಿ ನಡೆಯುತ್ತಿವೆ.

ಹೊರಗೆ ಕಟ್ಟಡದ ಕೆಳಕ್ಕೆ ಚಿತ್ರ ವಿಚಿತ್ರ ಆಕಾರದ ವಾಹನಗಳು ಒಂದೊಂದಾಗಿ ಬಂದು ನಿಲ್ಲುತ್ತವೆ. ಹಲವಾರು ಪ್ರಾಣಿಗಳ ಆಕಾರ ಮತ್ತು ರೂಪಗಳನ್ನು ಹೋಲುವ ವಾಹನಗಳು ಈಗ ನಗರವೆಲ್ಲ ಓಡಾಡುತ್ತಿವೆ. ಜೊತೆಗೆ ಚಿತ್ರ ವಿಚಿತ್ರ ಬಣ್ಣಗಳನ್ನು ಬಳಿದುಕೊಂಡಿವೆ.

ಬೆನ್ ನಗರದ ನಂಬರ್ ಒನ್ ಕುಳ ಶ್ರೀ ಯಗ್ನೇಶ್ ಮಲ್ಯ ತನ್ನ ದೊಡ್ಡ ಮಗನಾದ ತರುಣ್‌ಮಲ್ಯನಿಗೆ ಅಮೆರಿಕಾದ ಫ್ಲೋರಿಂಗ್‌ಟನ್‌ನ ಭಾರಿ ಕುಳ ಜಾರ್ಜ್ ಸ್ಟುವರ್ಟ್‌ನ ಒಬ್ಬಳೆ ಮಗಳಾದ ಕ್ರಿಸ್ಟೀ ಸ್ಟುವರ್ಟ್‌ಳನ್ನು ಮದುವೆ ಮಾಡಿಕೊಂಡಿದ್ದಾನೆ. ಇಬ್ಬರದು ಪ್ರಪಂಚದಾದ್ಯಂತ ಹಣ ಗುಡ್ಡೆಯಾಕುವ ಕಾರುಬಾರುಗಳಿವೆ. ಮದುವೆ ಈಗಾಗಲೇ ಲಂಡನ್‌ನಲ್ಲಿ ಮುಗಿದಿದ್ದು ಈಗ ಬೆನ್‌ನಗರದಲ್ಲಿನ ಗೆಳೆಯರಿಗಾಗಿ ಒಂದು ಔತಣಕೂಟವನ್ನು ಏರ್ಪಡಿಸಿದ್ದಾರೆ.

ಅದರಲ್ಲಿ ಬೆನ್ ನಗರದ ಎ ಮತ್ತು ಬಿ ವಲಯದಲ್ಲಿನ ಕೆಲವು ಐಶ್ವರ್ಯವಂತರು, ನಟರು, ಕ್ರೀಡಾಪಟುಗಳು, ವಿಜ್ಞಾನಿಗಳು, ಬೆನ್ ನಗರದ ಮೇಯರ್ ಮತ್ತು ಮಿನಿಸ್ಟ್ರುಗಳನ್ನು ಆಹ್ವಾನಿಸಿದ್ದಾರೆ. ಔತಣಕೂಟಕ್ಕೆ ವಿಶೇಷವಾದ ಆಹ್ವಾನ ಪತ್ರಿಕೆಗಳನ್ನು

ಕಂಪ್ಯೂಟರ್ ಮೂಲಕ ತಯಾರಿಸಲಾಗಿದೆ. ಆದರಂತೆ ಪ್ರತಿಯೊಂದು ಆಹ್ವಾನ ಪತ್ರಿಕೆಯ ಮೇಲೆ ಆಹ್ವಾನ ಪತ್ರಿಕೆಗಳೊಂದಿಗೆ ಬರುತ್ತಿರುವ ಆಹ್ವಾನಿತರು ಬಾಗಿಲಲ್ಲಿರುವ ಮಾಸ್ಟರ್ ರೋಬೋಟ್ ಮೌತ್‌ನಲ್ಲಿ ಆಹ್ವಾನ ಪತ್ರಿಕೆಯನ್ನು ಇಡುತ್ತಿದ್ದಾರೆ. ರೋಬೋಟ್ ತನಗೆ ಮೊದಲೆ ನೀಡಿರುವ ಮಾಹಿತಿಯನ್ನು ಪರಿಶೀಲಿಸಿ ಬಂದಿರುವವರನ್ನು ಒಳಗೆ ಹೋಗಲು ಸ್ಥಳ ಮಾಡಿಕೊಡುತ್ತಿದೆ. ಎಲ್ಲಕ್ಕಿಂತ ಮುಖ್ಯವಾಗಿ ಅಮೆರಿಕಾದ ಕಪ್ಪು ಮತ್ತು ಬಿಳಿಯರ ಒಂದು ಡ್ಯಾನ್ಸ್ ಟ್ರೂಪ್‌ನ ರಸಮಯ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ. ಕೋಟ್ಯಂತರ ಹಣವನ್ನು ಪಡೆದಿರುವ ಆ ಟ್ರೂಪ್ ಪ್ರಪಂಚದಲ್ಲಿಯೆ ಪ್ರಖ್ಯಾತ. ಆ ಟ್ರೂಪ್‌ನ್ನು ನೋಡುವುದಕ್ಕಾಗಿ ಪ್ರಪಂಚದಾದ್ಯಂತ ಯುವಕ ಯುವತಿಯರು ಪ್ರಾಣ ಬಿಡುತ್ತಾರೆ. ಅವರ ಸಂಗೀತ ರಾತ್ರಿಗಳನ್ನು ಇಂಟರ್‌ನೆಟ್‌ನಲ್ಲಿ ನೋಡಬೇಕಾದರೂ ಪ್ರತ್ಯೇಕವಾಗಿ ಸಾಕಷ್ಟು ಹಣವನ್ನು ಮುಂಗಡವಾಗಿ ಪಾವತಿಸಬೇಕಾಗುತ್ತದೆ.

ವಾಹನಗಳಿಂದ ಇಳಿಯುತ್ತಿರುವ ಗಣ್ಯರು ಜತೆಜತೆಯಾಗಿ ವಿಶೇಷ ಧಿರಿಸುಗಳಲ್ಲಿ ಪ್ರಿಸಮ್ ಹಾಲ್‌ನಲ್ಲಿ ಸೇರುತ್ತಿದ್ದಾರೆ. ಎಲ್ಲರನ್ನು ಯಗ್ನೇಶ್‌ಮಲ್ಯ ಮತ್ತು ಜಾರ್ಜ್ ಸ್ಟುವರ್ಟ್ ಕುಟುಂಬದವರು ಬಾಗಿಲಲ್ಲಿ ನಿಂತುಕೊಂಡು ಆಹ್ವಾನಿಸುತ್ತಿದ್ದಾರೆ. ವಿಶೇಷವಾಗಿ ಮಹಿಳೆಯರು ಮತ್ತು ಯುವತಿಯರು ಅರ್ಧಂಬರ್ಧ ದೇಹಗಳನ್ನು ಪ್ರದರ್ಶಿಸುವಂತಹ ಉಡುಪುಗಳನ್ನು ಧರಿಸಿ ಬರುತ್ತಿದ್ದಾರೆ.

ಹತ್ತು ವರ್ಷಗಳ ಹಿಂದೆ ಪ್ರಪಂಚದ ಎಲ್ಲಾ ಧರ್ಮಗುರುಗಳು, ಕಾನೂನು ತಜ್ಞರು ಸೇರಿ ಒಂದು ತೀರ್ಮಾನಕ್ಕೆ ಬಂದಿದ್ದರು. ಅದೇನೆಂದರೆ ಮದುವೆ ವಿಚಾರದಲ್ಲಿ ಪ್ರಪಂಚದಾದ್ಯಂತ ಒಂದು ಕಾನೂನನ್ನು ತರಲಾಗಿತ್ತು. ಆ ಕಾನೂನನ್ನು ಪ್ರಶ್ನಿಸುವ ಹಕ್ಕು ಯಾವ ದೇಶದ ಸರ್ಕಾರಕ್ಕೂ ಇರಲಿಲ್ಲ. ಯಾವುದೇ ದೇಶದ, ಯಾವ ಧರ್ಮಕ್ಕೆ ಸೇರಿದವರಾದರೂ ಸರಿ ಗಂಡು ಹೆಣ್ಣು ಒಬ್ಬರನ್ನೊಬ್ಬರು ಒಪ್ಪಿಕೊಂಡು ಮದುವೆ ಮಾಡಿಕೊಳ್ಳಬಹುದು. ಒಬ್ಬರನ್ನು ಇನ್ನೊಬ್ಬರು ಮದುವೆಯಾದ ತಕ್ಷಣ ಇಬ್ಬರೂ ಅವರವರ ದೇಶಗಳ ಸಿಟಿಜನ್‌ಷಿಪ್ ಪಡೆದುಕೊಂಡು ಬಿಡುತ್ತಿದ್ದರು. ಇದನ್ನು ಮದುವೆಯಾಗುವುದಕ್ಕಿಂತ ಮುಂಚೆ ಅಥವಾ ಅನಂತರ ಸರ್ಕಾರಕ್ಕೆ ತಿಳಿಸಿ ಪಾಸ್‌ಪೋರ್ಟ್ ಪಡೆದುಕೊಳ್ಳಬೇಕಾಗಿತ್ತು.

ಎಲ್ಲರೂ "ಹಾಯ್ ಹೌ ಆರ್ ಯು...? ಗ್ರೇಟ್... ಫೈನ್... ಬ್ಯೂಟಿಫುಲ್... ಫೆಂಟಾಸ್ಟಿಕ್... ವೆರಿಗುಡ್... ನೈಸ್... ಹೊಸ ಪ್ರಾಜೆಕ್ಟ್ ಹೇಗಿದೆ...? ಮಗ, ಮಗಳು ಎಲ್ಲಿದ್ದಾರೆ" ಎಂದು ಮಾತನಾಡಿಕೊಳ್ಳುತ್ತಿದ್ದಾರೆ. ಮಹಿಳೆಯರು ಮತ್ತು ಯುವತಿಯರು ಸುಂದರವಾದ ಹಕ್ಕಿಗಳೆಲ್ಲ ಸೇರಿ ಆಕಾಶಕ್ಕೆ ಹಾರಿ ಹೋಗುತ್ತಿರುವಂತೆ ಫೀಲ್ ಆಗುತ್ತಿದ್ದಾರೆ.

ಬಣ್ಣಗಳನ್ನು ಪ್ರದರ್ಶಿಸುತ್ತಿರುವ ತುಟಿಗಳು... ರೆಕ್ಕೆಗಳನ್ನು ಬಡಿದುಕೊಳ್ಳುತ್ತಿರುವ ಕಣ್ಣುಗಳು... ಸ್ಪರ್ಶಕ್ಕೆ ಕಾದು ಕುಳಿತಿರುವ ಆಪಲ್ ಕೆನ್ನೆಗಳು... ತಮಗೆ ಇಷ್ಟವಾದ ಗಂಡಸರ ಕೈಗಳಲ್ಲಿ ಹೂವುಗಳಾಗಿ ಹರಳಲು ಕಾಯುತ್ತಿರುವ ನುಣುಪಾದ ಸೊಂಟಗಳು, ಪ್ಲಾಟಿನಂ

ಮತ್ತು ಟಂಗ್‌ಸ್ಟನ್ ಖನಿಜಗಳಲ್ಲಿ ಅತಿಕಿಸಿರುವ ಕಪ್ಪು ವಜ್ರಗಳ ಒಡವೆಗಳು ಕೊರಳು, ಸೊಂಟ, ಕೈಗಳಲ್ಲಿ ಅಲಂಕಾರದಿಂದ ಬೆಳಕಿನಲ್ಲಿ ಇನ್ನಷ್ಟು ಹೊಳೆಯುತ್ತಿವೆ.

ಒಂದು ಕಾಲದಲ್ಲಿ ಚಿನ್ನವನ್ನು ಹೇರಳವಾಗಿ ಧರಿಸುತ್ತಿದ್ದ ಯುಎಸ್‌ಐನ ಐಶ್ವರ್ಯ ಕುಟುಂಬಗಳು ಈಗ ಚಿನ್ನವನ್ನು ತಮ್ಮ ಮನೆಗಳಲ್ಲಿ ಅಲಂಕಾರಿಕ ವಸ್ತುಗಳನ್ನಾಗಿ ಉಪಯೋಗಿಸುತ್ತಿದ್ದಾರೆ. ಪ್ಲಾಟಿನಂ ಕಪ್ಪು ಒಡವೆಗಳು ಇಂದು ಅಮೋಘ ಫ್ಯಾಷನ್ ಒಡವೆಗಳಾಗಿವೆ. ಆದರೆ ಯುಎಸ್‌ಐನ ಡಿ.ಇ. ವಲಯಗಳು ಮತ್ತು ಹಳ್ಳಿ ಪಟ್ಟಣಗಳಲ್ಲಿ ಇಂದಿಗೂ ಚಿನ್ನವೆ ಅಚ್ಚುಮೆಚ್ಚಿನ ಒಡವೆಗಳಾಗಿವೆ.



ಬಂದವರೆಲ್ಲ ಜೋಡಿ ಜೋಡಿಯಾಗಿ ಕುಳಿತುಕೊಳ್ಳುತ್ತಿದ್ದಾರೆ. ಕುಳಿತುಕೊಳ್ಳುತ್ತಲೆ ಸುತ್ತಲಿರುವವರನ್ನು ಕಣ್ಣುಗಳಲ್ಲಿ ಅಳತೆ ಮಾಡುತ್ತಿದ್ದಾರೆ. ಮಹಿಳೆಯರು ತಮ್ಮ ಗಂಡಸರ ಬಗ್ಗೆ ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಗಂಡಸರು ತಮ್ಮ ಪತ್ನಿಯರ ಕಣ್ಣುಗಳನ್ನು ತಪ್ಪಿಸಿ ಅಕ್ಕಪಕ್ಕ ನೋಡಿ ಗುಟುಕರಿಸುತ್ತಿದ್ದಾರೆ. ಡ್ಯಾನ್ಸ್ ಮಾಡುವಾಗ ಯಾರನ್ನು ಆಯ್ಕೆ ಮಾಡಿಕೊಳ್ಳಬೇಕು ಎನ್ನುವುದರ ಬಗ್ಗೆ ಒಳಗೊಳಗೆ ಲೆಕ್ಕ ಹಾಕುತ್ತಿದ್ದಾರೆ.

ಅಲ್ಲಿ ಇಲ್ಲಿ ತಿಳಿದವರು ಕಾಣಿಸುತ್ತಿದ್ದಂತೆ ಎದ್ದು ಹತ್ತಿರಕ್ಕೆ ಹೋಗಲು ಪ್ರಯತ್ನಿಸುತ್ತಿದ್ದಂತೆ ಪತ್ನಿಯರು ''ಸುಮ್ಮನೆ ಕುಳಿತುಕೊಳ್ಳಿ, ಅವರೇ ಹತ್ತಿರಕ್ಕೆ ಬರಲಿ'' ಎಂದು ಕಣ್ಣುಗಳಲ್ಲೆ ಆಜ್ಞಾಪಿಸುತ್ತಿದ್ದಾರೆ. ಎದುರಿಗೆ ಯಗ್ನೇಶ್ ಮಲ್ಯ, ಅವರ ಪುತ್ರ ತರುಣ್ ಮಲ್ಯ ಮತ್ತು ಕ್ರಿಸ್ಟಿ ಸ್ಟುವರ್ಟ್‌ರನ್ನು ವಿಶೇಷ ಕುರ್ಚಿಗಳ ಕಡೆಗೆ ಕರೆದುಕೊಂಡು ಬರುತ್ತಿದ್ದಾರೆ. ಎಲ್ಲರೂ ಹೊಸ ದಂಪತಿಗಳ ಕಡೆಗೆ ನೋಡುತ್ತಿದ್ದಾರೆ.

ವೇದಿಕೆ ಮೇಲೆ ಯಾವುದೇ ಹೂವುಗಳ ಅಲಂಕಾರವಿಲ್ಲ, ಇರುವುದೆಲ್ಲ ಚಿನ್ನದ ತೋರಣಗಳು. ಈ ತೋರಣಗಳನ್ನು ಕಂಪ್ಯೂಟರ್‌ನಲ್ಲಿ ಡಿಸೈನ್ ಮಾಡಿ ತಯಾರಿಸಲಾಗಿದೆ. ಈ ಚಿನ್ನ ಎಷ್ಟೊಂದು ಮೃದು, ಎಷ್ಟೊಂದು ಫ್ಲೆಕ್ಸಿಬಲ್ ಎಂದರೆ ಹೇಳಲಾಗದು. ಒಂದು ಗ್ರಾಂ ಚಿನ್ನದಲ್ಲಿ ಒಂದು ಕಿಲೋಮೀಟರಿಗಿಂತ ದೂರದ ಎಳೆಯನ್ನು ತೆಗೆಯಬಹುದು. ಅದೇ ಗಾತ್ರದ ರೇಷ್ಮೆಯನ್ನು ಅಷ್ಟು ದೂರ ಎಳೆಯಾಗದು. ಆಹ್ವಾನ ಪತ್ರಿಕೆಯಲ್ಲಿ ಉಡುಗೊರೆಗಳನ್ನು ಸ್ವೀಕರಿಸುವುದಿಲ್ಲ ಎಂದು ಮೊದಲೆ ತಿಳಿಸಲಾಗಿತ್ತು, ಅದರಿಂದ ಯಾರೂ ಯಾವುದೇ ರೀತಿಯ ಉಡುಗೊರೆಗಳನ್ನು ತರಲಿಲ್ಲ.

ಹೊಸ ದಂಪತಿಗಳು ಕುಳಿತುಕೊಳ್ಳುತ್ತಿದ್ದಂತೆ ಹಾಲ್‌ನ ಪ್ರತಿಯೊಂದು ತುದಿಯಲ್ಲೂ ಅಳವಡಿಸಿರುವ ವಿಡಿಯೊ ಕ್ಯಾಮರಾಗಳು ಕೋನ ಕೋನಗಳಿಂದ ಸೆರೆ ಹಿಡಿಯುತ್ತಿವೆ. ಹೊಸ ದಂಪತಿಗಳನ್ನು ವಿಷ್ ಮಾಡಲು ವೇದಿಕೆಗೆ ಒಬ್ಬೊಬ್ಬರೆ ಎದ್ದು ಬರುತ್ತಿದ್ದಾರೆ. ಪ್ರಿಸಮ್ ಹಾಲ್‌ನಲ್ಲೆಲ್ಲ ವಿಶೇಷವಾದ ಸೆಂಟು ಗಮಗಮಿಸುತ್ತಿದೆ. ಪ್ರತಿಯೊಬ್ಬರು ತಮ್ಮದೇ ಆದ

ವಿಶೇಷ ಉಡುಪಿನಲ್ಲಿ ಕಂಗೊಳಿಸುತ್ತಿದ್ದಾರೆ. ಎಲ್ಲರ ತುಟಿಗಳ ಮೇಲೂ ನಗು ಹೊರಹೊಮ್ಮುತ್ತಿದೆ. ವಿಶೇಷವೆಂದರೆ ಯಾರೂ ತಮ್ಮ ಜೊತೆಗೆ ಮಕ್ಕಳನ್ನು ಕರೆತರಲಿಲ್ಲ. ಇದು ಹೇಳಿಕೇಳಿ ವಯಸ್ಕರ ಸಮಾರಂಭ.

ಹೊಸ ದಂಪತಿಗಳ ಪಕ್ಕದಲ್ಲಿ ನಿಂತಿರುವ ಜಾರ್ಜ್ ಸ್ಟುವರ್ಟ್ ದಂಪತಿಗಳು ಯಗ್ನೇಶ್ ಮಲ್ಯ ದಂಪತಿಗಳು ಬರುತ್ತಿರುವ ಅತಿಥಿಗಳನ್ನು ಪರಿಚಯಿಸುತ್ತಿದ್ದಾರೆ. ಅತಿಥಿಗಳು ಹೊಸ ದಂಪತಿಗಳಿಗೆ ಶುಭಾಷಯಗಳನ್ನು ಕೋರುತ್ತಿದ್ದಂತೆ ಅವರನ್ನು ಇನ್ನೊಂದು ಹಾಲ್‌ಗೆ ಕರೆದೊಯ್ಯುತ್ತಿದ್ದಾರೆ. ಮೈಕ್ರೊ ಓವನ್‌ಗಳಲ್ಲಿ ಬಿಸಿಬಿಸಿ ಭಕ್ಷ್ಯಗಳು ಹಬೆಯಾಡುತ್ತಿವೆ. ಸುಮಾರು ಮೂವತ್ತು ವರ್ಷಗಳ ಹಿಂದೆ ಭಾರತದಲ್ಲಿ ಹೆಚ್ಚಾಗಿ ತಿನ್ನುತ್ತಿದ್ದ ತಿಂಡಿಗಳನ್ನು ತಯಾರಿಸಲಾಗಿದೆ.

ವಿಧ ವಿಧ ಡ್ರಿಂಕ್ಸ್ ತುಂಬಿಕೊಂಡಿರುವ ಕಂಪ್ಯೂಟರ್ ನಲ್ಲಿಗಳು ತಮ್ಮ ಹೆಸರುಗಳನ್ನು ತೋರಿಸುತ್ತ ಎಲ್ಲರನ್ನು ಬರಮಾಡಿಕೊಳ್ಳುತ್ತಿವೆ. ಸಾಲಾಗಿ ಕಾಯುತ್ತಿರುವ ಡಿಜಿಟಲ್ ಬೋರ್ಡಿನ ತಲೆಗಳಲ್ಲಿ ತಮಗೆ ಬೇಕಾದ ಪಾನೀಯ ಹೆಸರು ಮತ್ತು ಅಳತೆಯನ್ನು ಒತ್ತಿದ್ದೆ ಗ್ಲಾಸುಗಳನ್ನು ತೆಗೆದುಕೊಳ್ಳುವ ಯಂತ್ರ ತಿಳಿಸಿದ ಅಳತೆಯನ್ನು ನಿಖರವಾಗಿ ತುಂಬಿ ನಿಂತಿರುವವರ ಕೈಗೆ ಕೊಡುತ್ತ ಡ್ರಿಂಕ್ಸ್ ಹೆಸರು ಮತ್ತು ಅಳತೆಯನ್ನು ಹೇಳಿ ಎಂಜಾಯ್ ಎಂದು ನುಲಿಯುತ್ತಿದೆ.

ಹೆಣ್ಣು ಗಂಡಿನ ಬೇಧವಿಲ್ಲದೆ ಎಲ್ಲರೂ ಸಾಲಾಗಿ ಹಳೆ ಕಾಲದ ಮದುವೆಗಳಲ್ಲಿ ಊಟ ಮಾಡಿ ಕೈತೊಳೆಯುವಂತೆ ಡಿಜಿಟಲ್ ಕೊಳಾಯಿಗಳ ಮುಂದೆ ನಿಂತುಕೊಂಡು ತುಂಬಿಸಿಕೊಂಡು ಕುಡಿಯುತ್ತಿದ್ದಾರೆ. ಹತ್ತಾರು ಮೈಕ್ರೊ ಓವನ್‌ಗಳ ಪಕ್ಕದಲ್ಲಿ ನಿಂತಿರುವ ರೋಬೋಟ್‌ಗಳು ಬೇಕಾದವರಿಗೆ ಬೇಕಾದ ಬಿಸಿಬಿಸಿ ಮಾಂಸದ ತುಣುಕುಗಳನ್ನು ಎತ್ತಿಕೊಡುತ್ತಿವೆ. ಅವರು ಮಾಡಬೇಕಾದದ್ದು ಇಷ್ಟೇ. ರೋಬೋಟಗಳ ಪಕ್ಕದಲ್ಲಿ ನಿಂತುಕೊಂಡು ಅದರ ಬೆನ್ನಿನಲ್ಲಿರುವ ಬಟನ್‌ಗಳ ಮುಖಾಂತರ ಯಾವ ಮಾಂಸದ ತುಂಡು ಎಷ್ಟು ತೂಕ ಬೇಕೊ ಅಷ್ಟನ್ನು ಸೂಚಿಸಿದರೆ ಸಾಕು. ರೋಬೋಟ್‌ಗಳು ಬಿಸಿಯಾದ ಓವನ್ ಒಳಕ್ಕೆ ಕೈ ಹಾಕಿ ತೆಳುವಾದ ತಟ್ಟೆಗೆ ಹಾಕಿಕೊಡುತ್ತವೆ. ಆ ತಟ್ಟೆಗೆ ಒಂದು ಪ್ಲಾಸ್ಟಿಕ್ ಹಿಡಿ ಇರುತ್ತದೆ.

ಇಲ್ಲಿರುವ ರೋಬೋಟ್‌ಗಳನ್ನು ಮನುಷೀಕರಣ ಮಾಡಲಾಗಿದೆ. ಅವು ಮನುಷ್ಯರಂತೆ ಎಲ್ಲಾ ಕೆಲಸಗಳನ್ನು ಮಾಡಬಲ್ಲವು. ಎಲ್ಲಾ ರೀತಿಯಲ್ಲೂ ಯೋಚಿಸಬಲ್ಲವು. ಹೇಳಿದ್ದನ್ನು ಗ್ರಹಿಸಬಲ್ಲವು... ಸ್ಪರ್ಶಿಬಲ್ಲವು, ಸುಖ ದುಃಖಗಳನ್ನು ಹಂಚಿಕೊಳ್ಳಬಲ್ಲವು. ಸುಸ್ತಾದಾಗ ತಮ್ಮ ಒಡೆಯರಿಗೆ ತಿಳಿಸಿ ವಿಶ್ರಾಂತಿಯನ್ನು ಪಡೆಯುತ್ತವೆ. ವಿಶೇಷವಾಗಿ ಶ್ವಾಸ ನಿಶ್ವಾಸವನ್ನು ಮಾಡುತ್ತವೆ. ಆದರೆ ಆಹಾರ ಮಾತ್ರ ಕೇಳುವುದಿಲ್ಲ. ಸಾವಿರ ಗಂಟೆಗಳಿಗೊಮ್ಮೆ ಒಂದು ಇಂಟಿಗ್ರೇಟೆಡ್ ಸಿಲಿಕಾ ಚಿಪ್ ಇಂಜಕ್ಷನ್ ಕೊಟ್ಟರೆ ಸಾಕು.

ಸರಿ ಎಲ್ಲರೂ ಒಂದು ಎರಡು ಮೂರು ಪೆಗ್ಗುಗಳನ್ನು ಏರಿಸುತ್ತಲೆ ಸುಂದರವಾದ ಗೆಷ್ಚರ್ಸ್ ಜೊತೆಗೆ ಕಣ್ಣುಗಳನ್ನು ಹಾರಿಸುತ್ತ ಹುಷಾರಾಗಿ ಮಾತನಾಡುತ್ತಿದ್ದಾರೆ. ಹಾಗೆ ನಿಧಾನವಾಗಿ ತಮ್ಮ ಎಲ್ಲೆಗಳನ್ನು ಮೀರುತ್ತಿದ್ದಾರೆ. ಮಹಿಳೆಯರು ಮತ್ತು ಮಹನಿಯರ ಮಿದುಳು ಕಣಗಳಲ್ಲಿ ಹಾಲ್ಕೋಹಾಲಿಕ್ ಅಂಶ ಏರುತ್ತಿದೆ. ಈಗ ಒಬ್ಬೊಬ್ಬರಾಗಿ ಅರ್ಧ ಮನುಷ್ಯ ಅರ್ಧ ಪ್ರಾಣಿಗಳಾಗುತ್ತಿದ್ದಾರೆ. ಪ್ರಪಂಚದಲ್ಲಿ ಎಲ್ಲವೂ ಬದಲಾಗುತ್ತಿದೆ. ಆದರೆ ಡ್ರಿಂಕ್ಸ್ ತೆಗೆದುಕೊಳ್ಳುವ ರೀತಿ ಮಾತ್ರ ಬದಲಾಗಲಿಲ್ಲ. ಅದೇ ಪೆಗ್ಗುಗಳು ಅದೇ ರೀತಿಯ ಕಿಕ್ಕು... ಅದೇ ರೀತಿಯ ಓಲಾಟ...!

ಹೆಣ್ಣಿಗೆ ಗಂಡು ಗಂಡಿಗೆ ಹೆಣ್ಣು ಬೇಕೆ ಬೇಕು. ಕಣ್ಣೋಟಗಳ ಮುಖಾಂತರ ಆಯ್ಕೆ ಆಗಲೆ ನಡೆದುಹೋಗಿದೆ. ಅಲ್ಲಿದ್ದವರಿಗೆ ವಯಸ್ಸಿನ ಯಾವ ಬೇದಭಾವಗಳು ಇಲ್ಲ. ಎಲ್ಲರೂ ಸೆಕ್ಸ್ ವಿಷಯದಲ್ಲಿ ಪ್ರಚಂಡರಾಗಿ ವರ್ತಿಸಬಲ್ಲರು.

ಹಾಲ್‌ನಲ್ಲಿ ಸಣ್ಣದಾಗಿ ಕಾಣಿಸಿಕೊಂಡ ಸಂಗೀತ ಹಿತವಾಗಿ ಮಿತವಾಗಿ ಓಲಾಡುತ್ತ ಎಲ್ಲರನ್ನು ಎದ್ದು ನಿಲ್ಲಿಸುತ್ತದೆ. ಮಹಿಳೆಯರು ತಮ್ಮ ಮೈಮೇಲಿರುವ ಉಡುಪುಗಳನ್ನು ಸಡಿಲಿಸಿಕೊಂಡು ತಯಾರಾಗುತ್ತಿದ್ದಾರೆ. ತುಟಿಗಳನ್ನು ನಾಲಿಗೆಗಳು ಸವರಿಕೊಳ್ಳುತ್ತಿದ್ದರೆ ಎದೆಗಳು ಸೆಟೆದು ನಿಂತುಕೊಳ್ಳುತ್ತಿವೆ... ಬಾಹುಗಳು ಖಾಲಿಯಾಗಿರುವ ಕೊಳದಂತೆ ನೀರು ತುಂಬಿಕೊಳ್ಳಲು ತವಕಿಸುವಂತೆ ತೋರುತ್ತಿವೆ. ಎಲ್ಲರ ದೇಹಗಳು ಸ್ಪರ್ಶಕ್ಕೆ ಹಾತೊರೆಯುತ್ತಿವೆ. ಎದ್ದು ನಿಂತ ಹೆಣ್ಣು - ಗಂಡು ಸಂಗೀತಕ್ಕೆ ತಕ್ಕಂತೆ ಜೋಡಿ ಜೋಡಿಯಾಗಿ ಸೊಂಟ, ಭುಜಗಳ ಮೇಲೆ ಕೈಗಳನ್ನು ಹಾಕಿಕೊಳ್ಳುತ್ತ ನಾಟ್ಯವಾಡಲು ತಯಾರಾಗುತ್ತಿದ್ದಾರೆ.

ಸ್ಪರ್ಶ ಅದ್ಭುತವಾದುದು. ಭೂಮಿ ಆಕಾಶವನ್ನು... ನದಿ ಸಮುದ್ರವನ್ನು ಗಾಳಿ ಬೆಟ್ಟ ಗುಡ್ಡಗಳನ್ನು... ಸ್ಪರ್ಶಿಸಿದಂತೆ ಹೆಣ್ಣು ಗಂಡಿನ ಸ್ಪರ್ಶ ನೈಸರ್ಗಿಕ. ಕಣ್ಣೋಟ ಕೈಗಳ ಮುಖಾಂತರ ಕಾಮ, ತುಟಿಗಳ ಮುಖಾಂತರ ಸಾಗುತ್ತದೆ. ಇಲ್ಲಿ ಇನ್ನೊಂದು ವಿಶೇಷವಿದೆ. ಇಲ್ಲಿಗೆ ಬಂದಿರುವ ಎಲ್ಲರೂ ಮೆಡಿಕಲ್ ಸರ್ಟಿಫಿಕೇಟ್ ಹೊಂದಿರುವವರು.

ಯಾವುದೇ ರೋಗವಿದ್ದರು ಅದನ್ನು ಪ್ರಸ್ತುತ ಡಿಎನ್‌ಎ ಮುಖಾಂತರ ತಿಳಿದುಕೊಳ್ಳಲಾಗುತ್ತದೆ. ಹಾಗಾಗಿ ಯಾವುದೇ ಅಳುಕಿಲ್ಲದೆ ಯಾರು ಯಾರಿಗಾದರೂ ಚುಂಬನ ನೀಡಬಹುದಾಗಿದೆ. ಕಾಮ ಕೇಳಿಯಲ್ಲಿ ಪಾಲ್ಗೊಳ್ಳಬಹುದಾಗಿದೆ. ಆಗಲೆ ಮುತ್ತುಗಳ ವಿನಿಮಯ ನಡೆಯುತ್ತಿದೆ.

ಒಂದು ಕಾಲದಲ್ಲಿ ಲಕ್ಷಾಂತರ ಜನರನ್ನು ಬಲಿ ತೆಗೆದುಕೊಳ್ಳುತ್ತಿದ್ದ ಮಾರಕ ರೋಗ ಏಡ್ಸ್‌ಗೆ ಔಷಧಿ ಕಂಡಿಡಿದು ಮೂವತ್ತು ವರ್ಷಗಳ ಕಳೆದು ಹೋಗಿವೆ. ಅದೇ ರೀತಿ ಸರಸ್ ರೋಗಕ್ಕೂ ಔಷಧಿಯನ್ನು ಕಂಡು ಹಿಡಿಯಲಾಯಿತು. ಆದರೆ ಈಗ ಮಾರಕವಾಗಿ ಕಾಣಿಸಿಕೊಂಡಿರುವ ಜೀನ್ಸ್ ಡಿಗ್ರಿಡೇಶನ್ ರೋಗ ಎಲ್ಲೆಲ್ಲೂ ಕಾಣಿಸಿಕೊಂಡಿವೆ. ಇದು

ಸಾಂಕ್ರಮಿಕ ರೋಗವಲ್ಲದಿದ್ದರೂ ಜನರು ಈ ರೋಗ ಇರುವವರಿಂದ ದೂರ ಇರುತ್ತಾರೆ. ಏಡ್ಸ್ ರೋಗ ಡಿ ಮತ್ತು ಇ ಇನ್ನಿತರ ವಲಯಗಳಲ್ಲಿ ಇನ್ನೂ ಹಾಗೆ ಇದೆ. ಏಡ್ಸ್ ರೋಗಕ್ಕೆ ನಿವಾರಣೆ ಇದ್ದರೂ ಅದಕ್ಕೆ ತಗಲುವ ಔಷಧಿ ಭಾರಿ ದುಬಾರಿ. ಎ.ಬಿ ಮತ್ತು ಸಿ ವಲಯಗಳಲ್ಲಿ ಇರುವ ಕೋಟ್ಯಾಧಿಪತಿಗಳು ಮಾತ್ರ ಈ ಔಷಧಿಯನ್ನು ಕೊಂಡುಕೊಳ್ಳು ಶಕ್ತರು.

ಐಯಾನ್ ಒಂದು ಸುಂದರವಾದ ಹೆಣ್ಣಿನ ತೆಕ್ಕೆಯಲ್ಲಿ ಓಲಾಡುತ್ತಿದ್ದಾನೆ. ಅದೇ ರೀತಿಯಾಗಿ ಅಶ್ವಿನಿ ಇನ್ನೊಂದು ಮೂಲೆಯಲ್ಲಿ ಒಬ್ಬ ಸುಂದರ ಧೃಢ ದೇಹದ ಯುವಕನ ತೋಳಿನಲ್ಲಿ ಓಲಾಡುತ್ತಿದ್ದಾಳೆ. ಇಲ್ಲಿನ ಇನ್ನೊಂದು ವಿಶೇಷವೆಂದರೆ ಪತಿ ಪತ್ನಿಯರು ಸಮಾರಂಭ ಮುಗಿಯುವವರೆಗೂ ಒಂದಾಗಿ ಡ್ಯಾನ್ಸ್ ಆಡಬಾರದು ಎನ್ನುವುದು. ಯಾರು ಯಾರ ಜೊತೆಗೆ ಡ್ಯಾನ್ಸ್ ಮಾಡುತ್ತಿದ್ದಾರೊ ಗೊತ್ತಾಗುವುದಿಲ್ಲ.

ತಮಗೆ ಇಷ್ಟವಾದವರ ವಿಳಾಸಗಳನ್ನು ತಮ್ಮ ಪುಟ್ಟ ಯಂತ್ರಗಳಲ್ಲಿ ತುಂಬಿಕೊಂಡು ಡೇಟಿಂಗ್‌ಗೆ ಫಿಕ್ಸ್ ಮಾಡಿಕೊಳ್ಳುತ್ತಿದ್ದಾರೆ. ಆ ವಿವರಗಳನ್ನು ಅಲ್ಲಿಂದ ಸೀಕ್ರೇಟ್ ಕೋಡುಗಳ ಮುಖಾಂತರ ಸ್ಟೋರ್ ಮಾಡಿಕೊಳ್ಳುತ್ತಿದ್ದಾರೆ. ಪತ್ನಿಯರು ಸಂಗ್ರಹಿಸುವ ವಿವರಗಳು ಪತಿರಾಯರಿಗೆ, ಪತಿರಾಯರು ಸಂಗ್ರಹಿಸುವ ವಿವರಗಳು ಪತ್ನಿಯರಿಗೆ ತಿಳಿಯದಂತೆ ಇಟ್ಟುಕೊಳ್ಳುವುದು ಅವರ ಹಕ್ಕಾಗಿದೆ. ಇದರ ಬಗ್ಗೆ ಪತಿ ಪತ್ನಿಯನ್ನು, ಪತ್ನಿ ಪತಿಯನ್ನು ಪ್ರಶ್ನಿಸುವುದು ಆಧುನಿಕ ಪ್ರಪಂಚದಲ್ಲಿ ನಾಗರಿಕತೆಯಲ್ಲ.

ರಾತ್ರಿ ಒಂದು ಗಂಟೆಯಾಗಿದೆ. ತಮಗೆ ಇಷ್ಟವಾದವರ ಜೊತೆಗೆ ಎಲ್ಲವನ್ನು ಹಂಚಿಕೊಳ್ಳುತ್ತಿದ್ದಾರೆ. ಈಗಾಗಲೇ ಈ ನಾಗರಿಕರು ಸಾವಿರಾರು ಶೃಂಗಾರ, ಅಶ್ಲೀಲ, ಮನೋಹರ ಮಾತುಗಳನ್ನು ಆಡಿಕೊಂಡಿದ್ದಾರೆ. ತಮಗೆ ಇಷ್ಟವಾದವರ ತೆಕ್ಕೆಗಳಿಂದ ಬೇರ್ಪಟ್ಟು ಪತಿ ಪತ್ನಿಯರು ಜೊತೆ ಜೊತೆಗೆ ಹೋಗಬೇಕಾಗಿದೆ ಎನ್ನುವುದನ್ನು ತಿಳಿದುಕೊಂಡರೆ ಅವರಿಗೆ ಮೈಯೆಲ್ಲಾ ಪರಿಚಿಕೊಂಡಂತಾಗುತ್ತಿದೆ. ಕೊನೆ ಚಾನ್ಸ್ ಎನ್ನುವಂತೆ ಕೇವಲ ಐದು ನಿಮಿಷಗಳು ಮಾತ್ರ ಬೆಳಕನ್ನು ತೆಗೆಯುವ ಸೂಚನೆಯನ್ನು ನೀಡಿದ್ದೆ ತಮಗೆ ಇಷ್ಟವಾದವರ ತೆಕ್ಕೆಗೆ ಸೇರಿಕೊಳ್ಳಲು ಎಲ್ಲರೂ ಹಾತೊರೆಯುತ್ತಿದ್ದಾರೆ.

ಬೆಳಕು ಮಾಯವಾಯಿತು. Everything is fair in love and war ಎನ್ನುವುದಕ್ಕಿಂತ ಪ್ರಸ್ತುತ Everything is fair in love and sex ಎನ್ನುವುದು ಈಗ ಹೆಚ್ಚು ಪ್ರಸ್ತುತ. ಐದು ನಿಮಿಷಗಳಾಯಿತು... ಹತ್ತು ನಿಮಿಷಗಳಾಯಿತು... ಕೊನೆಗೆ ಹದಿನೈದು ನಿಮಿಷಗಳಾದ ಮೇಲೆ ಒಂದು ಎಚ್ಚರಿಕೆಯ ಗಂಟೆ ಹೊಡೆಯಿತು. ಅನಂತರ ಕೆಲವು ನಿಮಿಷಗಳಲ್ಲಿ ಬೆಳಕು ನಾಚಿಕೊಳ್ಳುತ್ತ ಖೈದಿಯಂತೆ ಕಾಣಿಸಿಕೊಂಡಿತು.

ಎಲ್ಲರೂ ತಮ್ಮ ಪತಿ ಎಲ್ಲಿ... ತಮ್ಮ ಪತ್ನಿ ಎಲ್ಲಿ ಎಂದು ನಕ್ಷತ್ರಗಳನ್ನು ಹುಡುಕುವಂತೆ

ಹುಡುಕುತ್ತಿದ್ದಾರೆ. ಅಂತು ಎಲ್ಲರೂ ತಮ್ಮ ತಮ್ಮ ಪತಿ, ಪತ್ನಿಯರನ್ನು ಎಳೆದುಕೊಂಡು ಮನೆಗಳ ಕಡೆಗೆ ಹೊರಟರು.



ಕ್ರಿ.ಶ. ಒಂಬತ್ತನೆಯ ಶತಮಾನದಲ್ಲಿ ಗಂಗರಾಜರ ಶಿಲಾಶಾಸನಗಳಲ್ಲಿ ಮೊದಲಿಗೆ ಬೇಗೂರು ಎಂಬ ಹೆಸರು ಕಾಣಿಸಿಕೊಳ್ಳುತ್ತದೆ. ಹೊಯ್ಸಳ ರಾಜನಾದ ವೀರ ಬಲ್ಲಾಳ ಒಂದು ದಿನ ಬೇಟೆಯಾಡುವಾಗ ಕಾಡಿನಲ್ಲಿ ದಾರಿ ತಪ್ಪಿ ಒಂದು ಗುಡಿಸಲಿಗೆ ಬರುತ್ತಾನೆ. ಗುಡಿಸಲಲ್ಲಿ ವಾಸಿಸುತ್ತಿರುವ ಮುದುಕಿ ಹಸಿವಿನಿಂದ ಬಳಲಿರುವ ರಾಜನಿಗೆ ಹುರುಳಿ ಕಾಳನ್ನು ಬೇಯಿಸಿ ಕೊಡುತ್ತಾಳೆ. ಚೆನ್ನಾಗಿ ಬೇಯಿಸಿರುವ ಹುರಳಿ ಕಾಳುಗಳನ್ನು ತಿಂದ ರಾಜನು ಆ ಸ್ಥಳಕ್ಕೆ ಬೆಂದಕಾಳೂರು ಎಂದು ಹೆಸರಿಡುತ್ತಾನೆ.

ಇನ್ನೊಂದು ಕಥೆಯಂತೆ ಹೊಯ್ಸಳ ರಾಜನಿಗಿಂತ ಮುಂಚೆ ಈ ಪ್ರದೇಶದಲ್ಲಿ ಬೆಂಗ ಅಥವಾ ರಕ್ತ ಹೊನ್ನೆ ಹೂವು ಬಿಡುವ ಮರಗಳು ಹೇರಳವಾಗಿದ್ದು ಬೆಂಗ... ಬೇಗೂರು ಎಂಬ ಹೆಸರು ಪಡೆದಿದೆ ಎನ್ನಲಾಗಿದೆ. ಅನಂತರ ಕ್ರಿ.ಶ. 1537ರಲ್ಲಿ ಯಲಹಂಕದಲ್ಲಿದ್ದ ಕೆಂಪೇಗೌಡ ನಾಲ್ಕು ದಿಕ್ಕುಗಳಲ್ಲಿ ಗೋಪುರಗಳನ್ನು ಸ್ಥಾಪಿಸಿ ಬೆಂಗಳೂರನ್ನು ಸ್ಥಾಪಿಸಿದ. ಇದೇ ಕಾಲದಲ್ಲಿ ವಿಜಯನಗರದ ಅಚ್ಚುತರಾಯನ ಸಹಾಯದಿಂದ ಒಂದು ಕೋಟೆಯನ್ನು ಕಟ್ಟಿಸಿದರು. ಕೊನೆಗೆ ಬ್ರಿಟಿಷರು ಬಂದ ಮೇಲೆ ಅವರ ಇಂಗ್ಲಿಷ್ ಉಚ್ಚಾರಣೆಯಿಂದ ಬೇಗೂರು... ಬೆಂದಕಾಳೂರು... ಕೊನೆಗೆ ಬೆಂಗಳೂರು ಆಗಿ ಪರಿವರ್ತನೆಗೊಂಡಿತು. ತೀರ ಇತ್ತೀಚೆಗೆ ಪ್ರಪಂಚದಾದ್ಯಂತ ದೊಡ್ಡ ದೊಡ್ಡ ನಗರಗಳ ಹೆಸರುಗಳನ್ನು ಮೂರು ಅಕ್ಷರಗಳಲ್ಲಿ ಪರಿವರ್ತಿಸುವಂತೆ ಒತ್ತಾಯ ತರಲಾಯಿತು. ಇದರ ಪರಿಣಾಮ ಬೆಂಗಳೂರು ಬೆನ್ ನಗರವಾಯಿತು.

ಕ್ರಿ.ಶ. 2010 ರಿಂದ ಇಂಡಿಯಾ ದೇಶ ಛಿದ್ರ ಛಿದ್ರವಾಗಿ ಹೋಯಿತು. ಒಂದು ಕಾಲದಲ್ಲಿ ಭಾಷೆಗಳ ಆಧಾರದಿಂದ ರಾಜ್ಯಗಳಾಗಿದ್ದ ಪ್ರದೇಶಗಳು ಹಲವು ಸ್ವಯಂ ಆಡಳಿತ ರಾಜ್ಯಗಳಾಗಿ ಸ್ಥಾಪನೆಯಾದವು. ಅಂತಿಮವಾಗಿ ಯುನೈಟೆಡ್ ಸ್ಟೇಟ್ಸ್ ಆಫ್ ಇಂಡಿಯಾ ಎಂಬ ಹೆಸರನ್ನು ಪಡೆದುಕೊಂಡಿತು. ಉತ್ತರಕ್ಕೆ ಧೆಲ್ ನಗರ, ದಕ್ಷಿಣಕ್ಕೆ ಬೆನ್ ನಗರಗಳು ಮುಖ್ಯ ಕೇಂದ್ರ ನಗರಗಳಾದವು.

ಕಳೆದ ನಾಲ್ಕೈದು ಸಾವಿರ ವರ್ಷಗಳಿಂದ ತಮ್ಮದೇ ಆದ ಸಂಸ್ಕೃತಿ ಬೆಳೆಸಿಕೊಂಡು ಬಂದಿರುವ ಭಾರತ ದೇಶದಲ್ಲಿ ಇಂದು ಆರ್ಥಿಕ ಆಧಾರದ ಮೇಲೆ ವಿಭಿನ್ನವಾದ ವಲಯ ಸಂಸ್ಕೃತಿ ಹುಟ್ಟಿಕೊಂಡಿದೆ. ದೇಶದಾದ್ಯಂತ ಹರಡಿಕೊಂಡಿರುವ ಲಕ್ಷಾಂತರ ದೇವಾಲಯಗಳು, ಮಸೀದಿಗಳು ಮತ್ತು ಚರ್ಚ್‌ಗಳ ಮೂಲಕ ಮೂಢ ನಂಬಿಕೆಗಳ ಜೊತೆಗೆ ಜನರನ್ನು ದೋಚುವುದು ಹಲವು ರೀತಿಯಲ್ಲಿ ಸಾಗೆ ಇದೆ. ಅದು ಕಾಲ ಕಾಲಕ್ಕೆ ಅನೇಕ ರೀತಿಯಲ್ಲಿ ಮಾರ್ಪಾಟುಗಳನ್ನು ಪಡೆಯುತ್ತಿದೆ. ಬೆರಳುಗಳನ್ನು ಎಣಿಸಿ ಜ್ಯೋತಿಷ್ಯ

ಹೇಳುತ್ತಿದ್ದವರು ಕಂಪ್ಯೂಟರ್ ಬಳಸಿ ಹೇಳತೊಡಗಿದರು. ಮನುಷ್ಯನನ್ನೇ ದೇವರುಗಳಾಗಿಸುವ ವಿಭಿನ್ನ ಪುರಾಣಗಳು, ಕಟ್ಟುಕಥೆಗಳನ್ನು ಸೃಷ್ಟಿಸಿದರು. ವಾಸ್ತು, ಜ್ಯೋತಿಷ್ಯಶಾಸ್ತ್ರ ಇತ್ಯಾದಿಗಳನ್ನು ಜನರ ಮೇಲೆ ಹೇರಿದರು. ಗಂಡು ಸಮಾಜ ಮಹಿಳೆಯರನ್ನಂತೂ ಕಾಲಿನ ಕಸದಂತೆ ಮಾಡಿಕೊಂಡಿತು.

ಒಂದು ಕಾಲದಲ್ಲಿ ಪ್ರಪಂಚದ ಮೂರನೆ ಜಗತ್ತು ಮತ್ತು ಮುಂದುವರಿದ ದೇಶಗಳ ನಡುವೆ ಬಾರಿ ಸಂಘರ್ಷ ಕಾಣಿಸಿಕೊಂಡಿತ್ತು. ಅಭಿವೃದ್ಧಿ ಹೊಂದಿದ ದೇಶಗಳು ಎಲ್ಲಾ ರೀತಿಯಲ್ಲೂ ಮೂರನೆ ಜಗತ್ತಿನ ದೇಶಗಳನ್ನು ಮತ್ತು ಅವುಗಳ ಮೂಲ ಸಂಸ್ಕೃತಿಯನ್ನು ನಾಶಮಾಡಿಬಿಟ್ಟವು. ಆದರಲ್ಲೂ ಆರ್ಥಿಕವಾಗಿ ಉಳಿದುಕೊಂಡ ಎಲ್ಲಾ ದೇಶಗಳ ಜನರು ಪ್ರಪಂಚದಾದ್ಯಂತ ಒಂದಾಗಿ ಹೋಗಿದ್ದರು. ಹೀಗೆ ಒಂದಾದ ಜನರಿಂದ ಆರ್ಥಿಕ ಆಧಾರದ ಮೇಲೆ ಎ ಇಂದ ಇ ವಲಯಗಳವರೆಗೆ ಸೃಷ್ಟಿಯಾದವು.

ದೇಶದಾದ್ಯಂತ ಜನರನ್ನು ಮೂಢನಂಬಿಕೆಗಳಲ್ಲಿ ಮುಳುಗಿಸಿ ದೋಚುತ್ತಿದ್ದ ಅರ್ಚಕರು, ಜ್ಯೋತಿಷ್ಯರು, ವಾಸ್ತುತಜ್ಞರನ್ನು ಮೊದಲಿಗೆ ಎ ವಲಯದಿಂದ ಓಡಿಸಲಾಯಿತು. ಅನಂತರ ಬಿ ವಲಯದಿಂದ ಓಡಿಸಲಾಯಿತು. ಈಗ ಸಿ ವಲಯಗಳಿಂದ ಹಳ್ಳಿಗಳವರೆಗೆ ಅವರ ಚಟುವಟಿಕೆಗಳು ಹರಡಿಕೊಂಡಿವೆ. ಬಡತನ ಮತ್ತು ಮೂಢನಂಬಿಕೆಗಳಲ್ಲಿ ಮುಳುಗಿ ಹೋಗಿರುವ ಪಟ್ಟಣ ಮತ್ತು ಹಳ್ಳಿ ಪ್ರದೇಶಗಳಲ್ಲಿ ಪಂಚಾಂಗ ನೋಡುವ ಪಂಡಿತರು, ಜೋತಿಷ್ಯರು, ವಾಸ್ತುತಜ್ಞರು ಇಂದಿಗೂ ಚಲಾವಣೆಯಲ್ಲಿದ್ದಾರೆ.

ಈಗ ಸಿ ಮತ್ತು ಡಿ ಪ್ರದೇಶಗಳಲ್ಲಿ ಜನ ಹೋಲ್‌ಹೌಸ್ ವಾಸ್ತು ಮನೆಗಳನ್ನು ಕಟ್ಟಿಸಿಕೊಳ್ಳುತ್ತಿದ್ದಾರೆ. ಅಂದರೆ ಮನೆಯಲ್ಲಿ ಪ್ರತಿಯೊಂದು ವಾಸ್ತು ಪ್ರಕಾರವೇ ನಡೆಯುತ್ತದೆ. ಬಟ್ಟೆ ಧರಿಸುವುದು... ಊಟ ಮಾಡುವುದು... ಮಲಗುವುದು... ಮನೆಯಲ್ಲಿ ಯಾವ ಸಮಯದಲ್ಲಿ ಯಾವ ವಿಷಯ ಮಾತಾಡಬೇಕು... ಗಂಡ ಹೆಂಡತಿ ಯಾವ ಸಮಯದಲ್ಲಿ ಕೂಡಬೇಕು... ಯಾವ ದಿಕ್ಕಿಗೆ ತಲೆ ಇಡಬೇಕು... ಯಾವ ದಿಕ್ಕಿಗೆ ಕಾಲು ಚಾಚಬೇಕು ಎನ್ನುವ ವಿಧಾನ... ಸ್ನಾನ ಮಾಡುವ ವಿಧಾನ... ಯಾರು ಯಾವ ರೀತಿಯ ಒಡವೆಗಳನ್ನು ಧರಿಸಬೇಕು ಕೊನೆಗೆ ಟಾಯ್‌ಲೆಟ್‌ನಲ್ಲಿ ಕುಳಿತುಕೊಳ್ಳುವ ವಿಧಾನವು ವಾಸ್ತು ಪ್ರಕಾರವೆ ನಡೆಯುತ್ತಿದೆ. ಆದರೆ ಹುಟ್ಟು ಸಾವು ಮಾತ್ರ ಯಾವ ವಿಜ್ಞಾನಿಯ ಕೈಯಿಗೂ ದೊರಕದೆ ಹಾಗೆ ಇದೆ.



ಮನುಷ್ಯನ ಮುದಿತನಕ್ಕೆ ಕಾರಣವಾಗಿರುವ ಜೀನ್ಸ್‌ಗಳನ್ನು ಹದಿನೈದು ವರ್ಷಗಳ ಹಿಂದೆ ಕಂಡಿಡಿದಿದ್ದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆಗ ಅವುಗಳನ್ನು ಯುವಕ, ಯುವತಿಯರಿಂದ ಬೇರ್ಪಡಿಸಿ ವಯಸ್ಸಾದವರಿಗೆ ಚುಚ್ಚುಮದ್ದಾಗಿ ನೀಡಬಹುದೆಂದು

ಅಂತರಾಷ್ಟ್ರೀಯ ಮೆಡಿಕಲ್ ಕೌನ್ಸಿಲ್ ಔಷಧಿ ಕಂಪನಿಯೊಂದಕ್ಕೆ ಪರವಾನಿಗೆ ನೀಡಿತ್ತು.

ಇದರಿಂದ ವಯಸ್ಸಾದವರು ಕನಿಷ್ಠ 10-15 ವರ್ಷಗಳ ಕಾಲ ಹೆಚ್ಚಾಗಿ ಜೀವಿಸ ಬಹುದಾಗಿದೆ. ಹಳ್ಳಿ ಪಟ್ಟಣ ಪ್ರದೇಶಗಳಲ್ಲಿ ಯುವಕ ಯುವತಿಯರು ತಮ್ಮ ಜೀನ್ಸ್‌ಗಳನ್ನು ಮಾರಿಕೊಳ್ಳಲು ಸಾಲುಗಟ್ಟಿ ನಿಲ್ಲುತ್ತಿದ್ದಾರೆ.

ಕ್ರಿ.ಶ. 2025ಕ್ಕೆ ಭೂಮಂಡದಲ್ಲಿ ದೊರಕುತ್ತಿದ್ದ ಇಂಧನವನ್ನೆಲ್ಲ ಮುಗಿಸಿದ ಕಾರಣ, ಭೂಮಿಯ ತಾಪಮಾನ ಅಗಾಧವಾಗಿ ಹೆಚ್ಚಿ ಉತ್ತರ ಮತ್ತು ದಕ್ಷಿಣ ಧ್ರುವಗಳ ಐಸ್ ಗುಡ್ಡೆಗಳು ಕರಗಿ ಸಾಕಷ್ಟು ಕಡಲ ದಂಡೆಗಳಲ್ಲಿದ್ದ ನಗರಗಳು ಮುಳುಗಿಹೋಗಿದ್ದವು. ಅನಂತರ ಭೂಮಿ ನಿಧಾನವಾಗಿ ತಣ್ಣಗಾಗುತ್ತ ಹೋಗಿ ಈಗ ಮತ್ತೆ ಎರಡೂ ಧ್ರುವಗಳಲ್ಲಿ ಐಸ್‌ಗುಡ್ಡೆಗಳು ಗಟ್ಟಿಗೊಳ್ಳುತ್ತಿವೆ. ಯುಎಸ್‌ಐನ ಮುಂಬಯಿ, ಕೊಲ್ಕತ್ತ ಚೆನ್ನೈ ಮತ್ತು ನಗರಗಳು ಅರ್ಧಂಬರ್ಧ ಮುಳುಗಿ ಹೋಗಿದ್ದವು. ಪ್ರಪಂಚದಾದ್ಯಂತ ಕಡಲ ಪಕ್ಕದಲ್ಲಿದ್ದ ನಗರಗಳು ತೊಂದರೆಗೆ ಸಿಲುಕಿಕೊಂಡಿದ್ದವು.

ಬಿಸಿಲಿನ ಝಳದಿಂದ ಪ್ರಪಂಚದಾದ್ಯಂತ ಸಾವಿರಾರು ಜನರು ಪ್ರಾಣ ಕಳೆದುಕೊಂಡರು, ಮುಖ್ಯವಾಗಿ ಬಯಲು ಪ್ರದೇಶಗಳು ಮತ್ತು ಸಮಭಾಜಕ ವೃತ್ತದ ಅಕ್ಕಪಕ್ಕ. ಅಪಾರ ಜನಸಂಖ್ಯೆ ಪರ್ವತಗಳು ಕಡೆಗೆ ಮತ್ತು ಉತ್ತರ ದಕ್ಷಿಣ ಧ್ರುವಗಳು ಕಡೆಗೆ ವಲಸೆ ಹೋಯಿತು. ಇಂಧನ ಮುಗಿದ ಮೇಲೆ ನಿಧಾನವಾಗಿ ಭೂಮಿ ತಣ್ಣಗಾಗುತ್ತ ಹೋಯಿತು.

ಕ್ರಿ.ಶ. 2075ರ ಜನವರಿ ತಿಂಗಳಲ್ಲಿ ಬೆನ್ ನಗರದಲ್ಲಿ ಭಾರಿ ಭೂಕಂಪ ಎನ್ನುವ ಅಂದಿನ ಸುದ್ದಿಯಲ್ಲಿ ಕೇಳಿದ ಐಯಾನ್ ಕಿವಿಗಳು ನೆಟ್ಟಗಾದವು. ಈ ದಿನ ಎಷ್ಟು ತಾರೀಖು... ಕ್ಯಾಲೆಂಡರ್ ಕಡೆಗೆ ನೋಡಿದ. ದಿನಾಂಕ Y2K 55 01 01 ಇಂದಿಗೆ ಸರಿಯಾಗಿ ಇಪ್ಪತ್ತು ವರ್ಷಗಳಿಗೆ, ಆಗ ನನಗೆ 53 ವರ್ಷ ವಯಸ್ಸು, ನಿಜವಾಗಿಯೆ ಬೆನ್ ನಗರದಲ್ಲಿ ಭೂಕಂಪ ಘಟಿಸಲಿದೆಯೇ? ಬೆನ್ ನಗರ ಆಗ ಏನಾಗುತ್ತದೆ? ಈಗಾಗಲೆ ಪ್ರಪಂಚದಲ್ಲಿ ಬಹಳಷ್ಟು ಭೂಕಂಪಗಳನ್ನು ಅದರಲ್ಲೂ ಅಮೆರಿಕನ್ನರು, ಚೀನಿಯರು ಮತ್ತು ಜಪಾನಿಯರು ನಿಖರವಾಗಿ ಭೂಕಂಪನ ಸಂಭವಿಸುವ ದಿನವನ್ನು ಮೊದಲೆ ತಿಳಿಸಿರುವ ಉದಾಹರಣೆಗಳಿವೆ. ಇದು ಕೂಡ ನಿಜವಾಗಿ ಸಂಭವಿಸಬಹುದು. ಆದರೆ ಈ ಭೂಕಂಪ ಎಷ್ಟು ಭೀಕರವಾಗಿ ಸಂಭವಿಸಬಹುದು. ಎ ವಲಯದಲ್ಲಿರುವ ಮನೆಗಳೆಲ್ಲವು ಭೂಕಂಪರಹಿತ ಕಟ್ಟಡಗಳೆ. ಆದರೂ ಭೂಕಂಪಗಳು ಎಷ್ಟು ಭೀಕರವಾಗಿ ಸಂಭವಿಸುತ್ತವೆಂದರೆ ನೂರಾರು ಕಿಲೋಮೀಟರುಗಳು ದೂರ ಭೂಮಿ ಬಿರುಕುಗಳನ್ನು ಬಿಟ್ಟುಬಿಡುತ್ತದೆ. ಇನ್ನು ಮಾನವ ನಿರ್ಮಿತ ಕಟ್ಟಡಗಳು ಯಾವ ಲೆಕ್ಕ ?

ಐಯಾನ್ ಒಂದು ಕ್ಷಣ ತಣ್ಣಗಾದ. ಐಯಾನ್ ಇಂಟರ್‌ನೆಟ್‌ನಲ್ಲಿ ಬೆಂಗಳೂರು ಭೂಕಂಪನಗಳು ಎಂಬ ವಿಷಯದ ಬಗ್ಗೆ ಮಾಹಿತಿ ಕೇಳಿದ. ಬೆಂಗಳೂರು ಭೂಕಂಪ ಕ್ರಿ.ಶ.

1824, ಕ್ರಿ.ಶ. 1916, ಕ್ರಿ.ಶ. 2001 ಮುಂದಿನ ಭೂಕಂಪ ಕ್ರಿ.ಶ. 2075 ಎಂಬ ಶೀರ್ಷಿಕೆ ಕಾಣಿಸಿಕೊಂಡಿತು. ನೂರು ಭೂಕಂಪಗಳ ಬಗ್ಗೆ ವಿವರವಾಗಿ ಓದಿದ. ಯಾವ ಭೂಕಂಪನದಲ್ಲೂ ಹೆಚ್ಚಾಗಿ ಸಾವು ನೋವುಗಳು ಕಾಣಿಸಲಿಲ್ಲ. ಆದರೆ ಮುಂದೆ ಕ್ರಿ.ಶ. 2075ಕ್ಕೆ ಬರುವ ಭೂಕಂಪ ನಿಜವಾಗಿ ಸಂಭವಿಸುವುದೊ, ಸಂಭವಿಸಿದರೆ ಎಷ್ಟು ಭೀಕರವಾಗಿರಬಹುದು, ಹಿಂದಿನ ಭೂಕಂಪನಗಳು ರಿಕ್ಟರ್ ಮಾಪನದಲ್ಲಿ ಕೇವಲ 4.9 - 5.2 ರಷ್ಟಿವೆ. ಹಿಮಾಲಯ ಪರ್ವತ ಶ್ರೇಣಿಗಳ ವಲಯದಲ್ಲಿ ಮಾತ್ರ ಭೀಕರ ಭೂಕಂಪನಗಳು ಘಟಿಸುತ್ತಿದ್ದು ಅನಂತರ ನಿಧಾನವಾಗಿ ಬಿಹಾರ ನೇಪಾಳ ವಲಯದಲ್ಲಿ ಕಾಣಿಸಿಕೊಂಡವು. ಮುಂದೆ ಮಹಾರಾಷ್ಟ್ರದ ಕೊಯ್ನ , ಗುಜರಾತಿನ ಭುಜ್, ಅಹ್ಮದಾಬಾದ್... ಈಗ ದಕ್ಷಿಣದಲ್ಲೂ ಭೂಕಂಪನಗಳು ಕಾಣಿಸಿಕೊಂಡಿರುವ ಸೂಚನೆಗಳು ಕಾಣಿಸುತ್ತವೆ. ಈಗಾಗಲೇ ಬೆಂಗಳೂರು ಮತ್ತು ಸುತ್ತಮುತ್ತಲ ಪ್ರದೇಶ ಹತ್ತಾರು ಸಲ ಸಣ್ಣದಾಗಿ ನಡುಗಿ ಎಚ್ಚರಿಕೆಗಳನ್ನು ಕೊಟ್ಟಿದೆ. ಮುಂದೆ ಹೇಗೊ... ಏನೊ... ಐಯಾನ್ ಈ ವಿಷಯವನ್ನು ಅಶ್ವಿನಿಗೆ ತಿಳಿಸಿದ.

ಅಶ್ವಿನಿ ''ಅಯ್ಯೊ ಬಿಡಿ. ಅಷ್ಟು ವರ್ಷ ಯಾರಿರ್ತಾರೆ?'' ಎಂದಳು. ಬಟನ್ ಒತ್ತಿದ ಐಯಾನ್ ''ಅಶ್ವಿನಿ ಇವೊತ್ತು ಏನ್ ಕಾರ್ಯಕ್ರಮ?'' ಪ್ರಶ್ನಿಸಿದ.

''ಇವೊತ್ತು ನಾನ್ ಎಲ್ಲಿಗೂ ಬರೋದಿಲ್ಲ. ಮನೆಯಲ್ಲೇ ಇದ್ದು ಬಿಡ್ತೀನಿ. ಸಾಯಂಕಾಲ ಬೇಕಾದರೆ ಯೋಚಿಸೋಣ'' ಎಂದಳು.

''ತೇಜಸ್, ಶಮ್ಮೀನಾ ಆಹ್ವಾನ ಮಾಡಿದರೆ ಹೇಗೆ...''

''ಯಾಕೆ ಅವಳನ್ನ ನೋಡ್ಬೇಕಾ?''

''ಹೌದು ನೀನು ತೇಜಸ್ನ ನೋಡು ನಾನು ಶಮೀನ ನೋಡ್ತೀನಿ'' ಎಂದ ಐಯಾನ್.

ಇಬ್ಬರೂ ನಕ್ಕರು.

''ಹೋಗ್ಲಿ ಕರಿ, ನಿನ್ಗೆ ನಿರಾಶೆ ಆಗಬಾರ್ದಲ್ಲ''

''ಅದೆ ಮಧ್ಯಾಹ್ನಕ್ಕೆ ಕರಿಯೋಣವ ''ಇಲ್ಲ ಸಾಯಂಕಾಲಕ್ಕೆ ಕರಿಯೋಣವ?''

''ಬೆಟರ್ ಸಾಯಂಕಾಲಕ್ಕೆ'' ಎಂದಳು ಅಶ್ವಿನಿ.

ಕೂಡಲೆ ಪ್ಲ್ಯಾಸ್ಮ ಪರದೆ ತೆರೆದುಕೊಂಡಿತು.

''ಹಲೋ ತೇಜಸ್...''

''ಹಲೋ ಶಮಿ ಗುಡ್ ಮಾರ್ನಿಂಗ್...''

''ಓ ವೆರಿ ಗುಡ್ ಮಾರ್ನಿಂಗ್ ಹೇಗಿದ್ದೀರಿ?''

''ಫೈನ್ ಚೆನ್ನಾಗಿದ್ದೀವಿ''

''ಹಲೊ ಅಶ್ವಿನಿ''

''ಹಲೊ ಶಮಿ... ಏನ್ ಇವತ್ತಿನ ಕಾರ್ಯಕ್ರಮ?''

''ಏನು ಇಲ್ಲ, ಹಾಗಾದರೆ ಸಾಯಂಕಾಲ ನಮ್ಮನೇಗೆ ಡಿನ್ನರ್‌ಗೆ ಬನ್ನಿ''

''ಏನು ವಿಶೇಷ?''

''ನಿಮ್ಮ ಜೊತೆ ಸಮಯ ಕಳೆಯೂದೇ ವಿಶೇಷ..''

''ಗ್ರೇಟ್ ಆಯಿತು ಬರ್ತೀವಿ...'' ಶಮಿ ಕಡೆಗೆ ನೋಡುತ್ತ ತೇಜಸ್ ಹೇಳಿದ. ಎಲ್ಲರೂ ಒಬ್ಬರನ್ನೊಬ್ಬರು ನೋಡಿಕೊಳ್ಳುತ್ತ ಮುಗುಳು ನಕ್ಕರು. ಆಯಿತು ಸಾಯಂಕಾಲ ಭೇಟಿಯಾಗೋಣ ಪರದೆಯ ಮೇಲೆ ಮಾಯವಾದರು.



ಬೆನ್ ನಗರಕ್ಕೆ ಅರವತ್ತು ಎಪ್ಪತ್ತು ಕಿಲೋಮೀಟರುಗಳ ಸುತ್ತಲು ಹಲವಾರು ಸ್ಲಮ್‌ಗಳು ಹರಡಿಕೊಂಡಿವೆ. ಐವತ್ತು ವರ್ಷಗಳ ಹಿಂದೆ ಬೆನ್ ನಗರದ ಅಂತರಾಳದಲ್ಲಿ ಹರಿದು ಬಿಸಾಕಿದ ಊಟದ ಎಲೆಗಳಂತೆ ಹರಡಿಕೊಂಡಿದ್ದ ಸ್ಲಮ್‌ಗಳನ್ನು ಪೂರ್ಣವಾಗಿ ನಗರದಿಂದ ಹೊರಹಾಕಲಾಯಿತು. ಬೆನ್ ನಗರದ ಸುತ್ತಮುತ್ತಲ ಸ್ಲಮ್‌ಗಳು ತಲೆ ಎತ್ತುತ್ತಿದ್ದಂತೆ ಅಲ್ಲಲ್ಲಿ ಸಾರಾಯಿ, ಬೀರು, ಬ್ರಾಂದಿ ಇನ್ನಿತರ ಅಂಗಡಿಗಳ ಜೊತೆಗೆ ರಾಜಕೀಯ ಪುಡಾರಿಗಳು, ತಲೆಹಿಡುಕರು ಕಾಣಿಸಿಕೊಂಡರು. ಯುಎಸ್‌ಐ ಸರ್ಕಾರ ಎಂದಿನಂತೆ ಈ ಪ್ರದೇಶಗಳ ಅಭಿವೃದ್ಧಿಗೆಂದು ಒಂದಿಷ್ಟು ಹಣವನ್ನು ಬಿಡುಗಡೆ ಮಾಡುತ್ತಿತ್ತು.

ಆ ಹಣವನ್ನು ಅಧಿಕಾರಿಗಳು, ರಾಜಕೀಯ ಪುಡಾರಿಗಳು ತಿಂದು ತೇಗಿ ಹಾಕುತ್ತಿದ್ದರು. ಈ ರೀತಿಯ ದುರಾಡಳಿದ ಪ್ರಪಂಚದ ಯಾವುದೇ ಮೂಲೆಯಲ್ಲಿಯೂ ಪ್ರಸ್ತುತ ನಡೆಯದಿದ್ದರೂ ಯುಎಸ್‌ಐನ ಈ ಪ್ರದೇಶಗಳಲ್ಲಿ ಮಾತ್ರ ಎಂದಿನಂತೆ ಮುಂದುವರಿಯುತ್ತಿತ್ತು. ಇಲ್ಲಿನ ಹಣ ಮಾಮೂಲಿಯಂತೆ ವ್ಯವಸ್ಥಿತವಾಗಿ ಕೆಳಗಿಂದ ಅತ್ಯಂತ ಉನ್ನತ ಅಧಿಕಾರಿಗಳು ಮತ್ತು ರಾಜಕಾರಣಿಗಳವರೆಗೂ ತಲುಪುತ್ತಿತ್ತು.

ಒಂದು ವಿಶೇಷವೆಂದರೆ ಕೆಳಗಿನ ವಲಯಗಳ ಜನ ಮೇಲಿನ ವಲಯಗಳಿಗೆ ಹೋಗಬೇಕಾದರೆ ಅಪ್ಪಣೆ ಪಡೆಯಬೇಕಾಗಿತ್ತು. ಇದು ಮುಖ್ಯವಾಗಿ ಕಳ್ಳತನವನ್ನು ತಡೆಗಟ್ಟುವುದು ಮತ್ತು ಭದ್ರತೆಯ ಕಾರಣದಿಂದ ಆಯೋಜಿಸಲಾಗಿತು. ಆದರೆ ಮೇಲಿನ ವರ್ಗಗಳ ಜನ ಕೆಳಗಿನ ವಲಯಗಳಿಗೆ ಹೋಗಲು ಅಪ್ಪಣೆ ಬೇಕಾಗಿರಲಿಲ್ಲ. ಕೆಳಗಿನ ವಲಯಗಳ ಜನ ಮೇಲಿನ ವಲಯಗಳಲ್ಲಿ ಕೆಲಸಕ್ಕೆ ಸೇರಿಕೊಳ್ಳುವುದೆಂದರೆ ಕನಸಿನ ವಿಷಯವಾಗಿತ್ತು. ಈ ವಲಯಗಳಲ್ಲಿ ಅತಿ ಬುದ್ಧಿವಂತ ರೋಬೋಟ್‌ಗಳಿದ್ದವು. ಅವು ಎಲ್ಲಾ

ಕೆಲಸಗಳನ್ನು ಮಾಡಲು ಆಗುತ್ತಿರಲಿಲ್ಲ. ಹಾಗಾಗಿ ಮೇಲಿನ ವಲಯಗಳಲ್ಲಿ ಕಡಿಮೆ ಸಂಬಳಕ್ಕೆ ಕೆಳಗಿನ ವಲಯಗಳ ಜನರನ್ನು ನೇಮಕ ಮಾಡಿಕೊಳ್ಳಲಾಗುತ್ತಿತ್ತು.

ಉನ್ನತ ವಲಯಗಳಲ್ಲಿರುವ ಐಶ್ವರ್ಯವಂತರು, ಅಧಿಕಾರಗಳು ಮತ್ತು ರಾಜಕಾರಣಿಗಳು ತಮಗೆ ಇಷ್ಟವಾದವರನ್ನು ಕೆಳಗಿನ ವಲಯಗಳಿಂದ ಹಳ್ಳಿ ಪಟ್ಟಣಗಳಿಂದ ನೇಮಕ ಮಾಡಿಕೊಳ್ಳುವ ಸೌಲಭ್ಯವನ್ನು ಹೊಂದಿದ್ದರು. ಆದರೆ ಯಾರೇ ಆಗಲಿ ಕೆಲಸ ಮುಗಿದ ಮೇಲೆ ರಾತ್ರಿ ಆ ವಲಯದ ಪರಿಧಿಯಲ್ಲಿ ಇರುವಂತಿರಲಿಲ್ಲ.

ಸ್ಲಮ್ಮುಗಳಲ್ಲಿ ವಾಸಿಸುವವರ ಜೀವನ ಬಹಳ ಬರ್ಬರವಾಗಿತ್ತು. ಅವರಿಗೆ ದಿನಕ್ಕೆ ಒಂದೊತ್ತು ಊಟವು ಸರಿಯಾಗಿ ದೊರಕುತ್ತಿರಲಿಲ್ಲ. ಇವರು ಮಾಡದ ಕೆಲಸಗಳೇ ಇಲ್ಲ. ಪಡಬಾರದ ಕಷ್ಟಗಳೇ ಇಲ್ಲ. ಪ್ಲಾಸ್ಟಿಕ್ ಪೇಪರ್ ಆಯುವುದು... ಮೂಟೆ ಹೊರುವುದು... ಅಗರಬತ್ತಿ... ಬೆಂಕಿ ಪೊಟ್ಟಣ... ಬೀಡಿ ಮಾಡುವುದು. ಆಟೊ ಓಡಿಸುವುದು, ಸಾರಾಯಿ ಮಾರುವುದು, ಕಳ್ಳತನ ಮಾಡುವುದು ಒಟ್ಟಿನಲ್ಲಿ ಹೊಟ್ಟೆ ಪಾಡಿಗಾಗಿ ಏನಾದರೂ ಮಾಡಲೇಬೇಕಿತ್ತು. ಕುಡಿತ, ಜೂಜಾಟ, ಹೊಡೆದಾಟ, ಚೀರಾಟಗಳಿಂದ, ಅಲ್ಲಿರುವವರಿಗೆ ಹಗಲು ರಾತ್ರಿಗಳ ವ್ಯತ್ಯಾಸವೆ ಗೊತ್ತಾಗುತ್ತಿರಲಿಲ್ಲ.

ರಾಜಕಾರಣಿಗಳು, ಅಧಿಕಾರಿಗಳು, ರೌಡಿಗಳು ಅಲ್ಲಿನ ಜರನ್ನು ಪ್ರತಿಕ್ಷಣವು ಪೀಡಿಸುತ್ತಿದ್ದರು. ಅವರಿರುವ ನೆಲಕ್ಕೆ ಪ್ರತಿ ತಿಂಗಳು ನಾಲ್ಕಾರು ಗುಂಪುಗಳು ಬಾಡಿಗೆ ಪಡೆಯುತ್ತಿದ್ದವು. ವಿದ್ಯುತ್ ಮತ್ತು ನೀರಿನ ಸರಬರಾಜನ್ನು ಒಂದು ಗುಂಪು ಹಣ ಪಡೆದು ಸರಬರಾಜು ಮಾಡಿದರೆ ಇನ್ನೊಂದು ಗುಂಪು ನಿಲ್ಲಿಸಿಬಿಡುತ್ತಿತ್ತು. ಮತ್ತೆ ಆ ಗುಂಪಿಗೆ ಹಣ ಸಂಗ್ರಹಿಸಿಕೊಡಬೇಕು. ಯಾವುದೇ ರಾಜಕೀಯ ಸಭೆಗಳು ನಡೆದರೂ ಎಲ್ಲರನ್ನೂ ಟ್ರಕ್ಕು ಲಾರಿಗಳಲ್ಲಿ ಬೆಳಗ್ಗೆ ತುಂಬಿಸಿಕೊಂಡು ಹೋದರೆ ಸಾಯಂಕಾಲಕ್ಕೊ ರಾತ್ರಿಗೊ ತಂದು ಬಿಟ್ಟು ಹೋಗುತ್ತಿದ್ದರು. ಆ ದಿನ ಅವರಿಗೆ ಒಂದಿಷ್ಟು ಹಣ ಇಲ್ಲ ಊಟದ ಪೊಟ್ಟ ದೊರಕುತ್ತಿತ್ತು.

ಸಾಯಂಕಾಲ ಹೆಣ್ಣು ಗಂಡೆನ್ನದೆ ಎಲ್ಲರೂ ಕುಡಿದು ಓಲಾಡುತ್ತಿದ್ದರು. ಊಟವಿಲ್ಲದೆ ಇದ್ದರೂ ಸರಿ ಕುಡಿಯುವುದು ಮಾತ್ರ ಇರಲೇಬೇಕು. ಇದಕ್ಕಾಗಿಯೇ ಎಷ್ಟೋ ಕೊಲೆಗಳು ನಡೆದುಬಿಡುತ್ತಿದ್ದವು. ಒಟ್ಟಿನಲ್ಲಿ ಆ ಸ್ಲಮ್ಮು ಎನ್ನುವ ಸ್ಥಳಗಳು ಭೂಲೋಕದಲ್ಲಿನ ನರಕ ಸದೃಶವಾದ ಸ್ಥಳಗಳಾಗಿದ್ದವು. ಇವರ ನಡುವೆ ಹಲವು ಕಲೆಗಾರರು, ಹಾಡುಗಾರರು, ನಟರು, ಚಾಕಚಕ್ಯತೆಯ ಕಳ್ಳರು, ಪೆದ್ದರು ಎಲ್ಲರೂ ಇರುವರು. ಜೊತೆಗೆ ಎಲ್ಲಾ ರೀತಿಯ ಮಾರಕ ರೋಗಗಳು ಅಲ್ಲಿದ್ದವು. ಕುಡಿದು ಕುಡಿದು ಕೃಷವಾದ ರೋಗಿಗಳು, ಮಾದಕ ವಸ್ತುಗಳ ಚಟ ಅಂಟಿಸಿಕೊಂಡವರು ಇದ್ದರು. ಇವರ ನಡುವೆ ಸುಂದರವಾದ ಹೆಣ್ಣುಗಳು ಇಲ್ಲದಿಲ್ಲ. ಸುಂದರವಾದ ಹೆಣ್ಣುಗಳು, ಬುದ್ಧಿವಂತ ಹುಡುಗರು, ಯಾವುದಾದರೂ ಕೆಲಸಗಳನ್ನು ಹುಡುಕಿಕೊಂಡು ಸ್ಲಮ್ಮುಗಳಿಂದ ದೂರ ಹೋಗಿ ಬಿಡುತ್ತಿದ್ದರು.

▲▲▲

ಪೂರ್ಣ ಸ್ಮಾರ್ಟ್ ಮನೆ. ಐಯಾನ್ ಪತ್ನಿ ಅಶ್ವಿನಿ, ತೇಜಸ್ ಪತ್ನಿ ಶಮಿ ಇಬ್ಬರೂ ವಿಶೇಷವಾದ ಉಡುಗೆಯಲ್ಲಿ ಕಂಗೊಳಿಸುತ್ತಿದ್ದಾರೆ. ಅವರು ಉಪಯೋಗಿಸಿರುವ ಸೆಂಟಿನ ಸುವಾಸನೆ ಮತ್ತೇರಿಸುತ್ತಿದೆ. ಐಯಾನ್ ಶಮಿ ಸೌಂದರ್ಯವನ್ನು, ತೇಜಸ್ ಅಶ್ವಿನಿಯ ಸೌಂದರ್ಯ ನೋಡಿ ಬೆರಗಾಗಿ ಹೋಗಿದ್ದಾರೆ. ಅವರ ಪತ್ನಿಯರು ಎಷ್ಟೇ ಸುಂದರವಾಗಿದ್ದರೂ ಬೇರೆಯವರ ಪತ್ನಿಯರ ಸೌಂದರ್ಯ ಗಂಡಸರನ್ನು ಧೃತಿಗೆಡಿಸಿ ಬಿಡುತ್ತದೆ. ಇದು ಮನೋವೈಜ್ಞಾನದ ಒಂದು ವೈಶಿಷ್ಟ್ಯ.

ಗಂಡನನ್ನು ಯಾವ ಯಾವ ರೀತಿಯಲ್ಲಿ ಆಕರ್ಷಿಸಿಸಬೇಕು... ತನ್ನ ಗಂಡ ಬೇರೆ ಹೆಣ್ಣುಗಳ ಕಡೆಗೆ ನೋಡದಂತೆ ಇಟ್ಟುಕೊಳ್ಳಲು ಏನು ಮಾಡಬೇಕು ಎನ್ನುವುದು ಬಹಳ ಹಳೆ ವಿಚಾರ. ಅದನ್ನು ಹೆಣ್ಣುಗಳು ಈಗಲೂ ಪ್ರಯೋಗಿಸುತ್ತಾರೆ. ಆದರೆ ಗಂಡು ಮಾತ್ರ ತನ್ನ ಪತ್ನಿ ಬೇರೆ ಗಂಡಸರ ಕಡೆಗೆ ಆಕರ್ಷಣೆಗೊಳಗಾಗದಂತೆ ತಡೆ ಹಿಡಿಯುವುದು ಹೇಗೆ ಎನ್ನುವುದರ ಬಗ್ಗೆ ಅಷ್ಟೊಂದು ತಲೆ ಕೆಡಿಸಿಕೊಳ್ಳುವಂತೆ ತೋರುವುದಿಲ್ಲ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಗಂಡಸರು ಹೆಣ್ಣು ನವಿಲಿನ ಮುಂದೆ ನಾಟ್ಯವಾಡುವಂತೆ ತಮ್ಮ ಪತ್ನಿಯರನ್ನು ಮೆಚ್ಚಿಸಲು ಶತಾಯ ಗತಾಯ ಹೆಣಗಾಡುತ್ತಿರುವುದು ಕಂಡುಬರುತ್ತಿದೆ.

ಎಪ್ಪತ್ತು ನೂರು ವರ್ಷಗಳ ಹಿಂದೆಯೇ ಯುರೋಪಿಯನ್ ದೇಶಗಳಲ್ಲಿ ಗಂಡಸರು ಹೆಂಗಸರು ತಾವು ಇಳಿ ವಯಸ್ಸು ತಲುಪುವುದರೊಳಗೆ ಕನಿಷ್ಠ ಹತ್ತಾರು ಗಂಡಸರು ಹೆಂಗಸರನ್ನು ಬದಲಾಯಿಸಿಕೊಳ್ಳುತ್ತಿದ್ದರು. ಅವರಿಗೆ ಹುಟ್ಟುವ ಮಕ್ಕಳ ಗತಿ ದೇವರೆ ಬಲ್ಲ, ಮಕ್ಕಳೂ ಅಷ್ಟೇ 14, 15 ವರ್ಷಗಳು ಮುಗಿಯುತ್ತಿದ್ದಂತೆ ತಮ್ಮ ತಂದೆ ತಾಯಿಯರನ್ನು ಬಿಟ್ಟು ಬೇರೆಯಾಗಿ ಸಂಸಾರ ಹೂಡಿಬಿಡುತ್ತಿದ್ದರು.

ಹಿಂದೂ ಮುಸ್ಲಿಮ್ ಇನ್ನಿತರ ಧರ್ಮಗಳ ಕೆಳವರ್ಗದ ಕುಟುಂಬಗಳಲ್ಲಿ ಪ್ರಪಂಚದಾದ್ಯಂತ ಇಂದಿಗೂ ಪತಿ ಪತ್ನಿ, ಮಕ್ಕಳು, ತಂದೆ ತಾಯಿ ಎಂದು ಬಡಬಡಿಸುತ್ತಾರೆ. ಆದರೆ ಅದೇ ಹಿಂದು ಮುಸ್ಲಿಮ್ ಕುಟುಂಬಗಳ ಐಶ್ವರ್ಯವಂತರ ಕುಟುಂಬಗಳು ಯೂರೋಪಿಯನ್ ಸಂಸ್ಕೃತಿಯನ್ನು ನೆಚ್ಚಿಕೊಂಡುಬಿಟ್ಟಿವೆ.

ನಾಲ್ವರು ಲೀಲಾಜಾಲವಾಗಿ ಹರಟುತ್ತಿದ್ದಾರೆ. ನಡುವೆ ಕಾಸ್ಮೋರಾ ರೋಬೋಟ್‌ಗಳ ಜೊತೆಯಲ್ಲಿ ಆಡಿಕೊಳ್ಳುತ್ತಿದ್ದಾಳೆ. ಶಮಿ ಮತ್ತು ತೇಜಸ್ ಮನೆಗೆ ಬಂದಾಗಲೆ ಐಯಾನ್ ಮತ್ತು ಅಶ್ವಿನಿ ಅವರನ್ನು ತಬ್ಬಿಕೊಂಡು ಬರ ಮಾಡಿಕೊಂಡಿದ್ದಾರೆ. ಐಯಾನ್, ಶಮಿ ಕೆನ್ನೆಯ ಮೇಲೆ; ತೇಜಸ್, ಅಶ್ವಿನಿ ಕೆನ್ನೆಯ ಮೇಲೆ ತುಟಿಗಳನ್ನು ಒತ್ತಿ ಉದ್ರೇಕಿಸಿದ್ದಾರೆ. ಕೈಕೈ ಹಿಡಿದುಕೊಂಡು ಕರೆದುಕೊಂಡು ಸೋಫಾ ಮೇಲೆ ಕೂರಿಸಿದ್ದಾರೆ.

ಸಾಯಂಕಾಲ ತಣ್ಣನೆ ವಾತಾವರಣ ಆ ಮನೆ ಹವಾನಿಯಂತ್ರಣ ಆಟೋಮ್ಯಾಟಿಕ್ ಶಬ್ದದಿಂದ ನಿಯಂತ್ರಣವಾಗಿದ್ದರಿಂದ ಹೊರಗಿನ ಸದ್ದು ಒಳಕ್ಕೆ ಕೇಳಿಸುತ್ತಿಲ್ಲ. ಮನೆಯಲ್ಲಿರುವ ರೋಬೋಟ್‌ಗಳು ಮನೆಯ ಒಡೆಯರು ನೀಡುವ ಆಜ್ಞೆಗಳಿಗಾಗಿ ತಮ್ಮ ಸ್ಥಳಗಳಲ್ಲಿ ನಿಂತು ಕಾಯುತ್ತಿವೆ.

"ತೇಜಸ್, ಶಮಿ ಡಿನ್ನರ್ ಏನ್ ತೆಗೆದುಕೊಳ್ತೀರಾ...?" ಅಶ್ವಿನಿ ಕೇಳಿದಳು.

"ಸಮ್‌ಥಿಂಗ್ ವಿಚ್ ಯು ಪೀಪಲ್ ಲೈಕ್" ಶಮಿ ಹೇಳಿದಳು.

"ಡಿನ್ನರ್ ಏನಾದರೂ ಮಾಡೋಣ... ಅದಕ್ಕೆ ಮುಂಚೆ ಏನಾದರೂ ಮಾಡ್ಬೇಕಲ್ಲ" ಐಯಾನ್ ಮಾತಿಗೆ ಎಲ್ಲರೂ ನಕ್ಕರು.

"ನೆನ್ನೆ ಪಾರ್ಟಿ ತುಂಬಾ ಚೆನ್ನಾಗಿತ್ತು. ತುಂಬಾ ಎಂಜಾಯ್ ಮಾಡಿದ್ವಿ" ಅಶ್ವಿನಿ ಹೇಳಿದಳು.

"ಪಾರ್ಟಿ ಉದ್ದಕ್ಕೂ ತಮ್ಮ ಬೆಟರ್ ಆಫ್ನ್ ಬೇರೆಯವರಿಗೆ ಒಪ್ಪಿಸಿಬಿಡ್ಬೇಕಲ್ಲ. ಅದು ಸರಿಯಲ್ಲ" ತೇಜಸ್ ತನ್ನ ಪತ್ನಿಯ ಕಡೆಗೆ ನೋಡುತ್ತಾ ಹೇಳಿದ. ಅಶ್ವಿನಿ ಮತ್ತು ಶಮಿ ಕಣ್ಣುಗಳು ಮಿಣುಕು ಹುಳುಗಳಂತೆ ಬಡಿದುಕೊಂಡವು.

ಶಮಿ ಇಬ್ಬರ ಕಡೆಗೆ ನೋಡಿ "ಅವರ ಬೆಟರ್ ಆಫ್ಸ್ ನಿಮ್ಮ ಕೈಗಳಲ್ಲಿ ಇರ್ತಾರಲ್ಲ..." ಶಮಿ ಬಾಯಿಗೆ ಬಂದ ಮಾತುಗಳನ್ನು ನುಂಗಿಕೊಂಡಳು. ಐಯಾನ್ ಅವಳ ತುಟಿಗಳಲ್ಲಿದ್ದ ಮಾತುಗಳನ್ನು ಅರ್ಥ ಮಾಡಿಕೊಂಡವನಂತೆ ಸಣ್ಣದಾಗಿ ನಕ್ಕ. ಅಶ್ವಿನಿ ತನಗೂ ಅರ್ಥವಾಗಿದೆ ಎನ್ನುವಂತೆ ಇಬ್ಬರ ಕಡೆ ನೋಡಿ ಕಿರುನಗೆ ಬೀರಿದಳು.

"ಓಕೆ ! ಈ ನಡುವೆ ರೆಡಿಮೇಡ್ ಫುಡ್ ತಿಂದು ತಿಂದು ನಾಲಿಗೆ ತೇದೋಗದೆ. ನಾವೆ ಒಂದಿಷ್ಟು ನಾನ್ ವೆಜ್ ರೆಡಿ ಮಾಡೋಣ" ಅಶ್ವಿನಿ ಹೇಳಿದಳು.

"ಓ! ಯಾಕಾಗಬಾರ್ದು... ಒಳ್ಳೆ ಐಡಿಯಾ. ನೀವಿಬ್ಬರು ನಾನ್‌ವೆಜ್ ಮಾಡಿ. ನಾವು ಸಹಾಯ ಮಾಡ್ತೀವಿ" ಐಯಾನ್ ಹೇಳಿದ. ಅಶ್ವಿನಿ ರೋಬೋಟ್‌ಗಳಿಗೆ ವಿಶ್ರಾಂತಿ ನೀಡಿ ಎದ್ದು ನಿಂತಳು. ಜತೆಯಲ್ಲಿ ಶಮಿ ಕೂಡ ಎದ್ದು ನಿಂತಳು. ಅವರಿಗೆ ಸಹಾಯ ಮಾಡಲು ಐಯಾನ್ ಮತ್ತು ತೇಜಸ್ ಕೂಡ ತಯಾರಾಗಿ ನಿಂತರು.

ಕಿಚ್ಚನ್‌ನಲ್ಲಿ ಯಾವ ಯಾವ ಸಾಮಾನುಗಳು ಎಲ್ಲಿವೆ ಎನ್ನುವುದೇ ಗೊತ್ತಾಗಲಿಲ್ಲ. ಮತ್ತೆ ರಿಮೋಟ್ ತೆಗೆದುಕೊಂಡ ಅಶ್ವಿನಿ ಕಿಚ್ಚನ್ ಇನ್‌ಚಾರ್ಜ್ ರೋಬೋಟ್ ಸಹಾಯದಿಂದ ಎಲ್ಲಾ ಸಾಮಾನುಗಳನ್ನು ತೆಗೆದುಕೊಂಡು ರೋಬೋಟನ್ನು ಹಿಂದಕ್ಕೆ ಕಳುಹಿಸಿದಳು.

ರೋಬೋಟ್ "ಏನಾದರೂ ಸಹಾಯ ಬೇಕಾದರೆ ದಯವಿಟ್ಟು ನನ್ನಿಂದ ಪಡೆಯಿರಿ" ಎಂದು ಹೇಳಿ ತನ್ನ ಸ್ಥಾನದಲ್ಲಿ ಹೋಗಿ ನಿಂತುಕೊಂಡಿತು. ಕಾಶ್ಮೋರಾ ಹಾಲ್‌ನಲ್ಲಿ ಒಂದು ರೋಬೋಟ್ ಜೊತೆಗೆ ಡಾಕ್ಟರ್ ರೋಗಿ ಆಟ ಆಡುತ್ತಿದ್ದಳು. ರೋಬೋಟ್ ಕಾಸ್ಮೋರಾ ಕೈಯಿಂದ ಚುಚ್ಚು ಮದ್ದನ್ನು ಹಲವು ಬಾರಿ ಚುಚ್ಚಿಸಿಕೊಂಡು ಅಳುತ್ತಿತ್ತು. ರೋಬೋಟ್ ಅಳುವುದನ್ನು ಕೇಳಿಸಿಕೊಂಡು ಬಂದ ಅಶ್ವಿನಿ ಕಾಸ್ಮೋರಾ ಕೈಯಿಂದ ಸೂಜಿಯನ್ನು ತೆಗೆದುಕೊಂಡು ಉಳಿದ ಸಾಮಾನುಗಳನ್ನು ಕೊಟ್ಟು ಹೋದಳು.

ರೋಬೋಟ್ ''ಥ್ಯಾಂಕ್ ಯು ಮೆಡಮ್... ನೀವು ಸೂಜಿ ತೆಗೆದುಕೊಳ್ಳದೆ ಇದ್ದಿದ್ದರೆ ನನ್ನನ್ನು ಚುಚ್ಚಿ ಚುಚ್ಚಿ ಸಾಯಿಸಿ ಬಿಡ್ತಾ ಇದ್ದಳು'' ಎಂದಿತು. ಎಲ್ಲರೂ ಗೊಳ್ಳನೆ ನಕ್ಕರು. ಅಶ್ವಿನಿ, ಶಮಿ ಇಬ್ಬರೂ ಮಾತನಾಡಿಕೊಂಡು ಹಳೆ ಕಾಲದ ಚಿಕನ್ ಮುಘಲಾಯ್, ಮಟನ್ ಚಿಪ್ಸ್, ಚೈನೀಸ್ ನೂಡಲ್ಸ್ ಮಾಡಲು ತಯಾರಿ ಮಾಡಿಕೊಂಡರು. ಐಯಾನ್ ಮತ್ತು ತೇಜಸ್ ಅವರು ಹೇಳಿದ್ದನ್ನೆಲ್ಲ ಕತ್ತರಿಸಿ ಸ್ವಚ್ಛ ಮಾಡಿಕೊಡುತ್ತಿದ್ದರು. ಸುಮಾರು ಎರಡು ಗಂಟೆಗಳ ಕಾಲ ಓವನ್ ಜೊತೆ ಹೆಣಗಾಡಿದ ಮೇಲೆ ನಾಲ್ಕು ಐಟಮ್‌ಗಳು ತಯಾರಾಗಿ ಟೇಬಲ್ ಮೇಲೆ ಕುಳಿತ್ತಿದ್ದವು. ಅಷ್ಟರಲ್ಲಿ ಎಲ್ಲರಿಗೂ ಬೆವರು ಸುರಿದು ಹೋಗಿತ್ತು.

''ಅಡಿಗೆ ಮಾಡೋದು ತುಂಬಾ ಕಷ್ಟ ಆದರೂ ಒಳ್ಳೆ ವ್ಯಾಯಾಮ ನೋಡು... ಆರೋಗ್ಯಕ್ಕೆ ತುಂಬಾ ಒಳ್ಳೇದು'' ಐಯಾನ್ ಹೇಳಿದ. ಅಶ್ವಿನಿ ಮತ್ತು ಶಮಿ ಬಾತ್‌ರೂಮಿಗೆ ಹೋಗಿ ಅಲ್ಲಿಂದ ಶೃಂಗಾರ ಮೇಜುಗಳ ಮುಂದೆ ನಿಂತಿದ್ದರು. ಐಯಾನ್ ಮತ್ತು ತೇಜಸ್ ಅವರು ಮುಂಚೆಯೇ ಟೇಬಲ್ ಮುಂದೆ ತಯಾರಾಗಿ ಕುಳಿತಿದ್ದರು. ಅವರ ಎದುರಿಗೆ ನಾಲ್ಕು ಗ್ಲಾಸುಗಳು ಕುಳಿತಿವೆ.

''ಬೇಗನೆ ಬನ್ನಿ... ಬೇಗನೆ ಬನ್ನಿ... ಮಹಿಳೆಯರು ಯಾವಾಗಲು ಹೀಗೇನೆ'' ಐಯಾನ್ ಮಾತುಗಳಿಗೆ ತೇಜಸ್ ನಕ್ಕ'' ಎಲ್ಲದರಲ್ಲೂ ಮಹಿಳೆಯರು ಮುಂದು. ವಿ ಆರ್ ಬೆಟರ್ ಆಪ್ಸ್'' ಅಶ್ವಿನಿ ತುಟಿಗಳಿಗೆ ಲಿಫ್‌ಸ್ಟಿಕ್ ಬಳಿದುಕೊಳ್ಳುತ್ತ ಹೇಳಿದಳು. ಶಮಿ ತಾನು ಧರಿಸಿದ್ದ ಬಟ್ಟೆಗಳನ್ನು ತೆಗೆದು ಮೂಲೆಗೆ ಹಾಕಿ ಅಶ್ವಿನಿ ವಾರ್ಡ್‌ರೋಬ್‌ನಲ್ಲಿದ್ದ ಬಿಳುಪಾದ ಮತ್ತು ತೆಳುವಾದ ಶರ್ಟ್ ಮತ್ತು ಪುಟ್ಟ ನಿಕ್ಕರನ್ನು ಧರಿಸಿದಳು. ಅಶ್ವಿನಿ ಕೂಡ ಆಗಲೆ ಬಟ್ಟೆ ಬದಲಾಯಿಸಿದಳು. ತೆಳುವಾದ ಟೀ ಶರ್ಟ್ ಮತ್ತು ದೊಗಳೆ ನಿಕ್ಕರ್‌ನಲ್ಲಿದ್ದಳು. ಇಬ್ಬರ ದೇಹಗಳು ಸಡಿಲುಗೊಂಡು ಹಗುರವಾಗಿದ್ದವು.

ಇಲ್ಲಿ ಐಯಾನ್ ಮತ್ತು ತೇಜಸ್ ಯಾವ ಬ್ರ್ಯಾಂಡ್‌ಗಳನ್ನು ತೆಗೆದಕೊಳ್ಳುವುದು ಎಂದು ತುಸು ತಲೆ ಕೆಡಿಸಿಕೊಂಡಿದ್ದರು. ಅನಂತರ ಎರಡು ಅಂತರಾಷ್ಟ್ರೀಯ ಬ್ರ್ಯಾಂಡ್‌ಗಳನ್ನು ಕಾಕ್‌ಟೈಲ್ ಮಾಡುವುದಾಗಿ ತೀರ್ಮಾನಿಸಿ ಟೇಬಲ್ ಮೇಲೆ ತಂದಿಟ್ಟರು.

''ಬ್ಯೂಟಿಫುಲ್ ಲೇಡೀಸ್ ಏನ್ ತೆಗೆದುಕೊಳ್ತಾರೊ'' ತೇಜಸ್ ಕೇಳಿದ.

''ಅವರೇ ಬಂದು ಹೇಳ್ಲಿ. ನಮಗೇಕೆ...?'' ಐಯಾನ್ ಹೇಳುತ್ತಿದ್ದಂತೆ ಇಬ್ಬರೂ ಪ್ಯಾರೀಸ್‌ನ ಫ್ಯಾಷನ್ ಶೋನಲ್ಲಿ ಒಂದು ಹೆಜ್ಜೆ ಮುಂದೆ ಒಂದು ಹೆಜ್ಜೆ ಅಡ್ಡ ಇಟ್ಟು ನಡೆದು ಬರುವ ಮಾಡಲ್‌ಗಳಂತೆ ಬರುತ್ತಿದ್ದಾರೆ. ಐಯಾನ್ ಮತ್ತು ತೇಜಸ್ ತಮ್ಮ ಕಣ್ಣುಗಳನ್ನು ತಾವೇ ನಂಬದೆ ಅವರು ಬರುವುದನ್ನೇ ನೋಡತೊಡಗಿದರು. ಬಂದವರು ಟೇಬಲ್ ಎದುರಿಗೆ ವೈಯ್ಯಾರವಾಗಿ ನಗುತ್ತ ಕುಳಿತುಕೊಂಡರು.

''ಆಗಲೆ ಕಿಕ್ ಹೊಡೆದಿದೆಯಾ ಹೇಗೆ?'' ಅಶ್ವಿನಿ ನಗುತ್ತ ಪ್ರಶ್ನಿಸಿದಳು. ತಲೆಯನ್ನು

ಒಮ್ಮೆ ಒದರಿದ ಐಯಾನ್ "ಅಬ್ಬಾ..!" ಎಂದು ದೀರ್ಘ ಎಳೆದು ಟೇಬಲ್ ಮೇಲಿದ್ದ ಬಾಟಲುಗಳ ಕಡೆಗೆ ಕಣ್ಣು ನೆಟ್ಟು "ನಿಮಗೆ ಏನ್ ಬೇಕು?" "ಹಾಗೆಲ್ಲ ಕೇಳಿ ನಮ್ಮನ್ನು ಅವಮಾನ ಮಾಡ್ಬೇಡಿ. ನೀವು ಏನು ತೆಗೆದುಕೊಳ್ತೀರೊ ಅದೇ ನಮ್ಗೂ..." ಅಶ್ವಿನಿ ಶಮಿಯ ಕಡೆಗೆ ನೋಡಿ ಕಣ್ಣು ಹಾರಿಸುತ್ತ ಹೇಳಿದಳು. ನಾಲ್ಕು ಗ್ಲಾಸುಗಳನ್ನು ಸಮನಾಗಿ ತುಂಬಿ ಸೋಡಾ ಬೆರೆಸಿದರು.

"ಸಮಯಾನ ವೇಸ್ಟ್ ಮಾಡ್ಬಾರದು. ಬದುಕೋದೆ ಎಪ್ಪತ್ತು ಎಂಬತ್ತು ವರ್ಷ" ಐಯಾನ್ ಮಾತಿಗೆ "ಯಾಕೆ ಜೀನ್ಸ್ ಟ್ರೀಟ್‌ಮೆಂಟ್ ತೆಗೆದ್ಕೊಂಡರೆ ಇನ್ನು ಇಪ್ಪತ್ತು ವರ್ಷ ಬದುಕಬಹುದಲ್ಲ? ಐವತ್ತು ವರ್ಷಗಳ ಹಿಂದೆ ಬೆನ್ ನಗರ ವಾಸಿಗಳ ಸರಾಸರಿ ಆಯುಷ್ಯ ಐವತ್ತೇಳು ವರ್ಷ ಇತ್ತಂತೆ. ಈಗ ಎಪ್ಪತ್ತಾರು ವರ್ಷ. ಡಿ ಮತ್ತು ಈ ವಲಯಗಳಲ್ಲಿ ಈಗಲೂ ತೀರ ಕಡಿಮೆ" ತೇಜಸ್ ಹೇಳಿದ.

ಟೇಬಲಿನ ಮೇಲೆ ಹಾಟ್ ತಟ್ಟೆಗಳಲ್ಲಿದ್ದ ಮಾಂಸದ ತುಂಡುಗಳನ್ನು ಫೋರ್ ಚಿಪ್ಸ್ ತೆಗೆದುಕೊಂಡು ಒಂದೊಂದಾಗಿ ಬಾಯಿಗೆ ಇಟ್ಟುಕೊಂಡರು. ಈಗ ಎಲ್ಲರೂ ಗ್ಲಾಸುಗಳನ್ನು ಮೇಲಕ್ಕೆತ್ತಿ ಮುದ್ದಿಸಿ "ಚೀಯರ್ಸ್ ಫಾರ್ ಗುಡ್ ಹೆಲ್ತ್ ಅಂಡ್ ಪಾರ್ ದಿಸ್ ಪ್ಲಸೆಂಟ್ ಇವ್‌ನಿಂಗ್" ಎಲ್ಲರೂ ಒಂದೇ ರಾಗದಲ್ಲಿ ಹೇಳಿದರು. ಗ್ಲಾಸುಗಳು ತಮ್ಮ ಒಡಲಲ್ಲಿ ಓಲಾಡುತ್ತಿದ್ದ ತಣ್ಣನೆಯ ಮಧುವಿನ ಜೊತೆಗೆ "ಟ್ರೀಣ್... ಟ್ರೀಣ್..." ಎಂದು ಡಿಕ್ಕಿ ಹೊಡೆದುಕೊಂಡು ದೂರವಾದವು. ಎಲ್ಲರೂ ಒಂದೊಂದು ಸಣ್ಣ ಗುಟುಕು ನುಂಗಿ ಕೆಳಗಿಟ್ಟರು.

ಈ ನಡುವೆ ಅಶ್ವಿನಿ ಕಾಸ್ಮೋರಾಗೆ ಊಟ ಮಾಡಿಸಿ ಅವಳನ್ನು ಅವಳ ಹಾಸಿಗೆಯ ಮೇಲೆ ಮಲಗಿಸಿ ಬಂದಿದ್ದಳು.

"ಪ್ರಪಂಚದಲ್ಲಿ ಡ್ರಿಂಕ್ಸ್ ಇಲ್ಲದೆ ಇದ್ದರೆ ಹೇಗಿರ್‍ತಾ ಇತ್ತು?" ತೇಜಸ್ ಪ್ರಶ್ನಿಸಿದ.

"ಓ ನೆನೆದುಕೊಳ್ಳಲು ಸಾಧ್ಯವೇ ಇಲ್ಲ..."

ಐಯಾನ್ ಉತ್ತರ "ಹೌದಲ್ಲ! ಈ ರೀತಿಯ ಸಂದೇಹ ನಮಗೆ ಬಂದೇ ಇಲ್ಲವಲ್ಲ.." ಅಶ್ವಿನಿ ಮತ್ತು ಶಮಿ ಇಬ್ಬರು ಯೋಚಿಸತೊಡಗಿದರು.

"ಮಗು ಹುಟ್ಟಿದ ತಕ್ಷಣವೆ ತಾಯಿ ಮಗುವಿಗೆ ಡ್ರಿಂಕ್ಸ್ ಉಣಿಸುತ್ತಾಳಲ್ಲ..? ಇನ್ ಫ್ಯಾಕ್ಟ್ ತಾಯಿಯ ಸ್ತನ್ಯ ಹಾಲಿನಲ್ಲಿ ಸ್ವಲ್ಪ ಅಮುಲೇರುವ ಅಂಶವು ಇರುತ್ತದೆ..." ತೇಜಸ್ ಮಾತುಗಳಿಗೆ ಮಹಿಳೆಯರಿಬ್ಬರು ಸ್ವಲ್ಪ ಚಕಿತರಾದಂತೆ, ಐಯಾನ್ "ನಿಜ... ನೀನು ಹೇಳೋದು ನೂರಕ್ಕೆ ನೂರು ಪಟ್ಟು ಸತ್ಯ" ಎಂದು ಮಹಾತ್ಮನಂತೆ ತಲೆದೂಗಿದ.

"ನೀನು ಏನೇನೊ ತಿಳಿದುಕೊಂಡಿಬಿಟ್ಟಿದ್ದೀಯಾ" ಅಶ್ವಿನಿ, ತೇಜಸ್ ಭುಜವನ್ನು ತಟ್ಟಿ ಹೇಳಿದಳು.

ಆಗಲೆ ಇನ್ನೊಂದು, ಮತ್ತೊಂದು ಸ್ಮಾಲ್‌ಗಳು ಅವರ ತಲೆಗೆ ಏರಿ ತಲೆಯಲ್ಲಿ ಏನೇನೊ ಬಯಕೆಗಳು, ಆಸೆಗಳು ಟಿಸಿಲೊಡೆಯುತ್ತಿದ್ದವು. ಅದು ಅವರ ಮಾತುಗಳ ಮುಖಾಂತರ ಹೊರಹೊಮ್ಮುತ್ತಿದ್ದವು ಕೂಡ. ಐಯಾನ್ ಅಶ್ವಿನಿಯ ಕಡೆಗೆ, ತೇಜಸ್ ಶಮಿಯ ಕಡೆಗೆ ಮುಖಗಳನ್ನು ತಿರುಗಿಸಿಕೊಂಡರು. ಅವರು ಅದನ್ನೇ ಕಾಯುತ್ತಿರುವಂತೆ ತುಟಿಗಳನ್ನು ಹತ್ತಿರಕ್ಕೆ ತಂದು ಬಿಟ್ಟರು. ಒಂದೆರಡು ಮುತ್ತುಗಳು ವಿನಿಮಯವಾದವು.

ಇನ್ನು ತಡೆದುಕೊಳ್ಳಲಾಗದೆ ಅವರು ಒಂದೆರಡು ತುಂಡುಗಳನ್ನು ತಿಂದು ಮೈ ಮುರಿದುಕೊಳ್ಳುತ್ತಾ ಎದ್ದು ನಿಂತರು. ಎದ್ದು ನಿಂತವರು ಓಲಾಡುತ್ತ ತೂರಾಡುತ್ತಾ ಮೆತ್ತನೆಯ ಹಾಸಿಗೆಗಳ ಕಡೆಗೆ ನಡೆದರು. ಹಾಸಿಗೆಯಲ್ಲಿ ಕಣ್ಣು ಬಿಟ್ಟು ನೋಡುತ್ತಾರೆ? ಐಯಾನ್ ತೋಳುಗಳಲ್ಲಿ ಶಮಿ ತೇಜಸ್ ತೋಳುಗಳಲ್ಲಿ ಅಶ್ವಿನಿ ಇದ್ದಾರೆ. ಇದು ಹೇಗಾಯಿತು...? ಅದರ ಬಗ್ಗೆ ಯೋಚಿಸಲು ಈಗ ಅವರಿಗೆ ಸಮಯ ಇರಲಿಲ್ಲ.



ಬೆಳಿಗ್ಗೆ ಆರು ಗಂಟೆ. ಆ ಸಮಯಕ್ಕೆ ತಮ್ಮ ಒಡೆಯರನ್ನು ಎಬ್ಬಿಸಬೇಕಾದ ರೋಬೋಟ್‌ಗಳು ಹಾಗೆ ಬಿದ್ದುಕೊಂಡಿವೆ. ಎಲ್ಲವೂ ಚೀಪ್ ಹಾಲ್ಕೊ ಹಾಲ್ ಕುಡಿದು ಸ್ಮೃತಿ ತಪ್ಪಿರುವಂತೆ ತೋರುತ್ತಿವೆ. ಕಾಸ್ಮೋರಾಳನ್ನು ನೋಡಿಕೊಳ್ಳುವ ಸ್ವಯಂಚಾಲಿತ ರೋಬೋಟ್ ಮಾತ್ರ ಅವಳ ಪಕ್ಕದಲ್ಲಿ ನಿಂತುಕೊಂಡಿದೆ.

ಐಯಾನ್ ಮತ್ತು ಅಶ್ವಿನಿ ಹಾಸಿಗೆ ಮೇಲೆ ಬಿಸಾಡಿದ ಬಟ್ಟೆಗಳಂತೆ ಬಿದ್ದುಕೊಂಡಿದ್ದಾರೆ. ಏಸಿ ನಿಂತೋಗಿ ಮನೆಯ ಒಳಗಿನ ಶಾಖ ಹೆಚ್ಚಾಗಿದೆ. ಐಯಾನ್ ಕಣ್ಣುಜ್ಜಿಕೊಂಡು ಸುತ್ತಲೂ ನೋಡುತ್ತಾನೆ. ಎಲ್ಲವೂ ನಿಶ್ಯಬ್ದ. ''ಅರೇ...! ಇದೇನಿದು ಯಾವಾಗಲು ಈಗಾಗಲಿಲ್ಲವಲ್ಲ'' ಐಯಾನ್ ರಿಮೋಟ್ ತೆಗೆದುಕೊಂಡು ಸೂಚನೆಗಳನ್ನು ನೀಡುತ್ತಾನೆ.

ಸ್ಮೃತಿ ತಪ್ಪಿದ ರೋಬೋಟ್‌ಗಳು ಚಾಲನೆಗೊಳ್ಳುತ್ತವೆ. ಏನೋ ಅನಾಹುತ ನಡೆದುಹೋಗಿದೆ ಎಂದು ತಿಳಿದುಕೊಂಡ ಐಯಾನ್.

''ಅಶ್ವಿನಿ... ಅಶ್ವಿನಿ'' ಅಶ್ವಿನಿಯನ್ನು ಎಬ್ಬಿಸುತ್ತಾನೆ. ಅಶ್ವಿನಿ ದಿಢೀರನೆ ಎದ್ದು ಕುಳಿತು ಕಣ್ಣುಜ್ಜಿಕೊಂಡು ನೋಡುತ್ತಾಳೆ. ಅವಳ ಮುಖವೆಲ್ಲ ಕೆಂಪಾಗ ಹೋಗಿದೆ. ತುಟಿಗಳು ಬಾತುಕೊಂಡಿವೆ.

''ಏನಾಯಿತು...?'' ಗಾಬರಿಯಿಂದ ಪ್ರಶ್ನಿಸಿದಳು.

''ಏನಾಗಿದೆಯೊ ಗೊತ್ತಿಲ್ಲ... ರೋಬೋಟ್ಸ್ ಕೆಲಸ ಮಾಡ್ತಾ ಇಲ್ಲ, ಈಗ ಚಾಲನೆ ಮಾಡಿದೆ''

''ಹೋಗ್ಲಿ ಫೀಡ್ ಬ್ಯಾಕ್ ಕೇಳಿ'' ಅಶ್ವಿನಿ ಹೇಳಿದಳು.

''ಹೌದಲ್ಲ?'' ಐಯಾನ್ ಮಾಸ್ಟರ್ ಕಂಟ್ರೋಲ್‌ನಿಂದ ಫೀಡ್‌ಬ್ಯಾಕ್ ಕೇಳಿದ. ವಾಯ್ಸ್ ಕಳೆದುಕೊಂಡಿದ್ದ ಮಾಸ್ಟರ್ ರೋಬೋಟ್ ಮಾತನಾಡಲಾಗದೆ ಸ್ವಲ್ಪ ಹೊತ್ತು ವಿಲಿವಿಲಿ ಹೊದ್ದಾಡಿದ ಮೇಲೆ'' ರಾತ್ರಿ ನೀವು ಡಿಸ್‌ಕನೆಕ್ಟ್ ಮಾಡಿದಿರಿ'' ಎಂದಿತು.

''ನಾವಾ...?'' ಐಯಾನ್ ಮತ್ತು ಅಶ್ವಿನಿ ಇಬ್ಬರೂ ಒಮ್ಮೆಲೆ ಪ್ರಶ್ನಿಸಿದರು.

''ಹೌದು ! ನೀವೇ. ಮಲ್ಟಿ ಐ ಕ್ಯಾಮರಾ ಎಲ್ಲವನ್ನು ನೋಡುತ್ತಿದ್ದರೂ ಯಾರಿಗೂ ಏನೂ ಹೇಳಲಾಗದೆ ಹೋಯಿತು. ಆಗಂತುಕರು ಬಾಗಿಲು ಹೊರಗಿದ್ದ ರೋಬೋಟ್ ತಲೆ ಹೊಡೆದು ಮನೆ ಒಳಗೆ ನುಗ್ಗಿದರು. ಬೇಕಾದರೆ ನೀವೇ ತೆರೆಯ ಮೇಲೆ ನೋಡಿ'' ಎಂದಿತು. ಮಾಸ್ಟರ್ ರೋಬೋಟ್ ರಿಮೋಟ್ ಮುಖಾಂತರ ಗೋಡೆ ಮೇಲಿದ್ದ ತೆರೆಯನ್ನು ಕೆಳಕ್ಕೆ ಜಾರಿಸಿದ ಮೇಲೆ ಕ್ಯಾಮರಾ ಸೆರೆ ಹಿಡಿದಿರುವ ಚಿತ್ರಣ ಮೂಡತೊಡಗಿತು.

''ಹೌದು ! ತೇಜಸ್, ಶಮಿ ಎಲ್ಲಿ...?'' ಅಶ್ವಿನಿ ಪ್ರಶ್ನಿಸುತ್ತಿದ್ದಂತೆ ಐಯಾನ್ ಎದ್ದು ಹೋಗಿ ಕೋಣೆಯಲ್ಲಿ ನೋಡಿದ. ತೇಜಸ್ ಮತ್ತು ಶಮಿ ಇಬ್ಬರೂ ಹಾಸಿಗೆಯ ಮೇಲೆ ಅಸ್ತವ್ಯಸ್ತವಾಗಿ ಮಲಗಿದ್ದಾರೆ. ಐಯಾನ್ ಇಬ್ಬರನ್ನು ಕದಲಿಸುತ್ತ ''ಮನೆಯಲ್ಲಿ ಕಳ್ಳರು ನುಗ್ಗಿದ್ದಾರೆ'' ಎಂದ. ಇಬ್ಬರೂ ಹೌಹಾರಿ ಎದ್ದು ಕುಳಿತರು. ಐಯಾನ್ ಹಿಂದಿರುಗಿ ಬಂದು ಅಶ್ವಿನಿಯ ಪಕ್ಕದಲ್ಲಿ ಕುಳಿತ. ತೇಜಸ್ ಮತ್ತು ಶಮಿ ಇಬ್ಬರೂ ಎದ್ದು ಬಂದು ಪರದೆಯ ಕಡೆಗೆ ನೋಡುತ್ತಾ ನಿಂತರು.

ಅಶ್ವಿನಿಗೆ ಕಾಸ್ಮೋರಾಳು ಜ್ಞಾಪಕಕ್ಕೆ ಬಂದಿತು. ಅಷ್ಟರಲ್ಲಿ ''ಕಾಸ್ಮೋರಾಗೆ ಏನೂ ಆಗಲಿಲ್ಲ, ತಾವು ನಿಧಾನವಾಗಿ ಹೋಗಬಹುದು'' ಮಾಸ್ಟರ್ ರೋಬೋಟ್ ಹೇಳಿತು. ಅಷ್ಟರಲ್ಲಿ ಅಶ್ವಿನಿ, ಕಾಸ್ಮೋರಾ ಹತ್ತಿರಕ್ಕೆ ಹೋಗಿ ನೋಡುತ್ತಾಳೆ. ಕಾಸ್ಮೋರಾ ನಿದ್ದೆ ಮಾಡುತ್ತಿದ್ದಾಳೆ. ಅವಳನ್ನು ಕದಲಿಸಿ ನೋಡುತ್ತಾಳೆ.

ಕಾಸ್ಮೋರಾ ''ಮಮ್ಮಿ ನಿದ್ದೆ ಬರುತ್ತೆ ಮಮ್ಮಿ'' ಎಂದಳು.

ಅವಳನ್ನು ಎತ್ತಿಕೊಂಡು ಐಯಾನ್ ಹತ್ತಿರಕ್ಕೆ ಬಂದು ಕುಳಿತುಕೊಂಡಳು. ಪರದೆಯ ಮೇಲೆ ಇಬ್ಬರು ಆಗಂತುಕರು ಕಾಣಿಸುತ್ತಿದ್ದಾರೆ. ''ಮೊದಲಿಂದ ಹಾಕಿ'' ಎಂದಳು ಅಶ್ವಿನಿ. ಐಯಾನ್ ಹಿಂದಕ್ಕೆ ಬಟನ್ ಒತ್ತಿದ.

ಆಗಂತುಕರು ಹಾಲ್‌ನಲ್ಲಿ ನಿಂತುಕೊಂಡು ಸುತ್ತಲೂ ಒಮ್ಮೆ ನೋಡಿದರು. ಅನಂತರ ಕೋಣೆಯ ಒಳಗೆ ನುಸುಳಿದರು. ಆ ಕೋಣೆಯಲ್ಲಿ ಐಯಾನ್ ಮತ್ತು ಅಶ್ವಿನಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದಾರೆ. ದೂರದಿಂದಲೇ ಅಶ್ವಿನಿ ಐಯಾನ್ ಮುಖಗಳ ಮೇಲೆ ಯಾವುದೋ ದ್ರವ್ಯವನ್ನು ಚೆಲ್ಲಿ... ಕೆಲವು ಕ್ಷಣಗಳು ಹಾಗೆ ನಿಂತುಕೊಂಡು ನೋಡಿದರು. ಅನಂತರ ನಿಧಾನವಾಗಿ ಹತ್ತಿರಕ್ಕೆ ನಡೆದು ಹೋಗಿ ಅವರ ಪಕ್ಕದಲ್ಲಿ ಕುಳಿತುಕೊಂಡು ಇಬ್ಬರನ್ನು ಸೂಕ್ಷ್ಮವಾಗಿ ಪರೀಕ್ಷಿಸಿ,

"ಚೆನ್ನಾಗಿ ಕುಡಿದಿದ್ದಾರೆ. ಇವರು ಎದ್ದು ಕೂತ್ಕೊಬೇಕಾದರೆ ಇನ್ನು ಹತ್ತು ಹನ್ನೆರಡು ಗಂಟೆ ಬೇಕು" ಒಬ್ಬ ಹೇಳಿದ. ಇಬ್ಬರೂ ನಕ್ಕರು. ಬಲಕೈಗೆ ಹಾಕಿಕೊಂಡಿದ್ದ ಗ್ಲೌಸನ್ನು ತೆಗೆದು,

"ಚೆನ್ನಾಗಿದ್ದಾಳೆ ಬ್ಯೂಟಿ..." ಅಶ್ವಿನಿಯ ತುಟಿಗಳನ್ನು ಬೆರಳುಗಳಲ್ಲಿ ಸ್ಪರ್ಶಿಸುತ್ತಾ ಹೇಳಿದ. ಅಶ್ವಿನಿ ಶಾಕ್ ಹೊಡೆದುಕೊಂಡಂತೆ ಐಯಾನ್ ಕಡೆಗೆ ನೋಡಿದಳು. "ಫಿಂಗರ್ ಪ್ರಿಂಟ್ಸ್ ಬೀಳುತ್ತೊ... ಈಡಿಯಟ್, ಈಸಿಯಾಗಿ ಸಿಕ್ಕಾಕಿಕೊಳ್ತೀಯ" ಇನ್ನೊಬ್ಬ ಎಚ್ಚರಿಸಿದ.

"ತುಟಿ ಮೇಲೂ ಫಿಂಗರ್ ಪ್ರಿಂಟ್ಸ್ ಬೀಳುತ್ತ...?" ಎನ್ನುತ್ತ ಮತ್ತೆ ಅದೇ ರೀತಿ ಸ್ಪರ್ಶಿಸಿದ. ಎಲ್ಲರೂ ಉಸಿರು ಬಿಗಿಹಿಡಿದು ಸಸ್ಪೆನ್ಸ್ ಸಿನಿಮಾ ನೋಡುವಂತೆ ನೋಡುತ್ತಿದ್ದಾರೆ.

ಒಬ್ಬ "ಲೊ ಬಂದಿರುವುದು ಯಾತಕ್ಕೆ? ಎದ್ದೇಳು !" ಗದರಿಸಿದ.

"ಇರು ಗುರು... ಇಂತಹ ಚಾನ್ಸ್ ಎಲ್ಲಿ ದೊರಕುತ್ತೆ ?" ಗ್ಲೌಸನ್ನು ಕೈಯಿಗೆ ಹಾಕಿಕೊಂಡು ಅಶ್ವಿನಿಯ ನಗ್ನ ಎದೆಗಳ ಮೇಲೆ ಹಾವು ಹರಿದಾಡಿದಂತೆ ಕೈಗಳನ್ನು ಚಲಿಸಿದ.

ಐಯಾನ್ "ಥೂ ಈಡಿಯಟ್" ಎಂದು ಚೀರಿ ಎದುರಿಗಿದ್ದ ರೋಬೋಟನ್ನು ಕಾಲಿನಲ್ಲಿ ಜೋರಾಗಿ ಒದ್ದ. ರೋಬೋಟ್ ಕಿರ್... ಕಿರ್ ಎಂದು ಜಾರಿಬಿದ್ದು ಮತ್ತೆ ಎದ್ದು ನಿಂತುಕೊಂಡಿತು. ಅಶ್ವಿನಿ ಮುಖವನ್ನು ಮುಚ್ಚಿಕೊಂಡಳು. ಶಮಿ ಕಣ್ಣುಗಳನ್ನು ಅಗಲಿಸಿಕೊಂಡು ನೋಡುತ್ತಿದ್ದಾಳೆ.

ತೇಜಸ್ "ಬಾಸ್ಟರ್ಡ್ಸ್" ಎಂದು ಚೀರಿದ.

ಅಶ್ವಿನಿಯ ದೇಹದ ಮೇಲೆ ಕೈ ಆಡಿಸುತ್ತಿದ್ದವನನ್ನು ಇನ್ನೊಬ್ಬ ಆಗಂತುಕ ಹಿಡಿದುಕೊಂಡು ಮೇಲಕ್ಕೆ ಎತ್ತಿ ನಿಲ್ಲಿಸಿದ. ಎತ್ತಿ ನಿಲ್ಲಿಸಿದವನನ್ನು ದೂರಕ್ಕೆ ತಳ್ಳಿ ಮತ್ತೆ ಅಶ್ವಿನಿಯ ಮುಂದೆ ಕುಳಿತುಕೊಂಡು ಅವಳನ್ನೇ ನೋಡತೊಡಗಿದ. ಅವಳ ಮೇಲೆ ಅರೆಕೊರೆ ಇದ್ದ ಬಟ್ಟೆಗಳನ್ನು ಪೂರ್ಣವಾಗಿ ದೂರಕ್ಕೆ ತಳ್ಳಿದ. ಅಶ್ವಿನಿಯ ನಗ್ನದೇಹ ಅವನ ಕಣ್ಣುಗಳ ಮುಂದೆ ಹರಡಿಕೊಂಡಿದೆ.

ಅವಳ ದೇಹದ ಬಣ್ಣ ಮತ್ತು ಅವಳ ಅಪರೂಪ ಆಕೃತಿಯನ್ನು ನೋಡಿ ಆಶ್ಚರ್ಯಚಕಿತನಾಗಿ ನೋಡುತ್ತಲೆ ಇದ್ದುಬಿಟ್ಟ. ಅವನು ಮುಖಕ್ಕೆ ಬಟ್ಟೆ ಕಟ್ಟಿಕೊಂಡಿದ್ದರಿಂದ ಅವನ ಮುಖದ ಮೇಲಿನ ಬದಲಾವಣೆಗಳನ್ನು ನೋಡಲಾಗಲಿಲ್ಲ. ಆದರೆ ಐಯಾನ್, ಅಶ್ವಿನಿ, ತೇಜಸ್, ಶಮಿ ಮುಖಗಳು ತುಂಬಾ ಆತಂಕ ತುಂಬಿಕೊಂಡು ಉಸಿರಿಡಿದು ನೋಡುತ್ತಿದ್ದಾರೆ. ಅವರಿಗೆ ಏನು ಮಾಡಬೇಕೊ ಅರ್ಥವಾಗಲಿಲ್ಲ.

ಅಶ್ವಿನಿಯಂತೂ ತನ್ನ ಎದುರಿಗೆ ತನ್ನನ್ನೇ ಮಾನಭಂಗ ಮಾಡುತ್ತಿದ್ದರೂ ಏನು ಮಾಡಲಾಗಿಲ್ಲವಲ್ಲ ಎಂದು ಮುಖ ಮುಚ್ಚಿಕೊಂಡಿದ್ದಾಳೆ. ಯಾರಿಗೂ ಇಂತಹ ಅವಮಾನ ಬರಬಾರದು. ಇಂತಹ ಆಧುನಿಕ ಯುಗದಲ್ಲೂ ಅದೂ ಎಲ್ಲಾ ರೀತಿಯ ಸೌಕರ್ಯಗಳು ಮತ್ತು ಸುರಕ್ಷತೆ ಇರುವ ಕೋಟ್ಯಾಂತರ ರೂಪಾಯಿಗಳು ಬೆಲೆಬಾಳುವ ಸ್ಮಾರ್ಟ್

ಮನೆಯಲ್ಲಿದ್ದು ಏನು ಪ್ರಯೋಜನ? ಎಲ್ಲರ ಹೃದಯಗಳು ಒಂದೇ ಸಮನೆ ಹೊಡೆದು ಕೊಳ್ಳುತ್ತಿವೆ. ಕೋಪ ಕೈ ಕಾಲುಗಳವರೆಗೂ ತಲುಪಿದೆ. ಏನು ಮಾಡಲು ಸಾಧ್ಯ?

ಅಶ್ವಿನಿ ಮುಂದೆ ಕುಳಿತಿರುವ ಆಗಂತುಕ ಅವಳ ದೇಹದ ಮೇಲೆಲ್ಲ ಮತ್ತೊಮ್ಮೆ ಕೈ ಆಡಿಸುತ್ತಿದ್ದಾನೆ. ಮನೆಯ ಒಳಗಿರುವ ಪ್ರತಿಯೊಂದು ವಸ್ತುವನ್ನು ಗಮನಿಸುತ್ತ ಹೆಜ್ಜೆ ಹಾಕತೊಡಗಿದ. ಅಲ್ಲಲ್ಲಿ ನಿಂತಿರುವ ರೋಬೋಟ್‌ಗಳ ಹತ್ತಿರಕ್ಕೆ ಹೋಗಿ ಆಶ್ಚರ್ಯವಾಗಿ ಅವುಗಳನ್ನು ನೋಡುತ್ತಿದ್ದಾನೆ. ಅವುಗಳನ್ನು ಮುಟ್ಟಲೋ ಬೇಡವೋ ಎಂದು ಕೈಚಾಚಿ ಚಾಚಿ ಹಿಂದಕ್ಕೆ ತೆಗೆದುಕೊಳ್ಳುತ್ತಾನೆ. ಅಲ್ಲೇ ಇದ್ದ ಒಂದು ಉದ್ದವಾದ ಕೋಲನ್ನು ತೆಗೆದುಕೊಂಡು ಬಂದು ರೋಬೋಟ್ ತಲೆಯ ಮೇಲೆ ಹೊಡೆದ. ರೋಬೋಟ್ ಯಾವುದೇ ಪ್ರತಿಕ್ರಿಯೆ ತೋರದೆ ಅವನನ್ನೇ ದುರುಗುಟ್ಟಿ ನೋಡಿತು. ಅದರ ಕಣ್ಣುಗಳಿಂದ ದಿಢೀರನೆ ಎರಡು ಬೆಳಕಿನ ಕೋಲುಗಳು ಬಂದು ಅವನಿಗೆ ಬಡಿದುಬಿಟ್ಟಿತು.

ಆಗಂತುಕ ಸಣ್ಣದಾಗಿ ಕಿರಿಚಿಕೊಂಡು ಓಡಿದ.

ಅಲ್ಲಿಂದ ಇನ್ನೊಂದು ಕೋಣೆಯ ಒಳಕ್ಕೆ ಹೋಗಿ ನಿಂತುಕೊಂಡ ಅಷ್ಟೇ... ಎರಡೇ ಕ್ಷಣಗಳಲ್ಲಿ ಹಿಂದಿರುಗಿ ಬಂದು ಅಶ್ವಿನಿಯ ಮುಂದೆ ಕುಳಿತಿದ್ದ ಆಗಂತುಕನನ್ನ ಪಕಕ್ಕೆ ತಳ್ಳಿದ. ಕೋಪಗೊಂಡ ಆಗಂತುಕ ಏನು? ಎನ್ನುವಂತೆ ಅವನನ್ನೇ ನೋಡಿದ.

''ಆ ಕೋಣೆಯಲ್ಲಿ ಬಂದು ನೋಡು'' ಎಂದ. ಇಬ್ಬರು ಮುಖಗಳಿಗೆ ಕವಚಗಳನ್ನು ಹಾಕಿಕೊಂಡಿದ್ದರಿಂದ ಅವರ ಮಾತುಗಳು ತೊದಲು ತೊದಲಾಗಿ ಕೇಳಿಸುತ್ತಿದ್ದವು. ಉಸಿರು ಬಿಗಿ ಹಿಡಿದು ನೋಡುತ್ತಿದ್ದ ಅಶ್ವಿನಿ ತುಸು ಚೇತರಿಸಿಕೊಂಡಳು. ಅವರು ಮನೆಬಿಟ್ಟು ಹೋಗುವುದರೊಳಗೆ ಇನ್ನೂ ಏನೇನು ಮಾಡುತ್ತಾರೊ? ಎನ್ನುವ ಆತಂಕ ಅವರೆಲ್ಲರಲ್ಲೂ ಇನ್ನೂ ತುಂಬಿಕೊಂಡಿದೆ. ಇಬ್ಬರೂ ಕೋಣೆಯ ಒಳಕ್ಕೆ ಇಣುಕಿ ನೋಡಿದರು. ತೇಜಸ್ ಮತ್ತು ಶಮ್ಮಿ ಇಬ್ಬರೂ ಅದೇ ರೀತಿ ಅಸ್ತವ್ಯಸ್ತವಾಗಿ ಬಿದ್ದುಕೊಂಡಿದ್ದಾರೆ. ದೂರದಿಂದಲೇ ಅವರ ಕೈಯಲ್ಲಿದ್ದ ದ್ರವ್ಯವನ್ನು ಅವರ ಮೇಲೆ ಚೆಲ್ಲಿ ನಿಧಾನವಾಗಿ ಹತ್ತಿರಕ್ಕೆ ನಡೆದುಹೋಗಿ ಪಕ್ಕದಲ್ಲಿ ಕುಳಿತುಕೊಂಡರು.

''ಇವರೂ ಜೋರಾಗಿಯೆ ಕುಡಿದಿದ್ದಾರೆ'' ಒಬ್ಬ ಹೇಳುತ್ತಾ ಬಲ ಕೈ ಗ್ಲೌಸನ್ನು ಬಿಚ್ಚಿ ಶಮಿ ತುಟಿಗಳನ್ನು ಸ್ಪರ್ಶಿಸಿದ. ಪಕ್ಕದಲ್ಲಿದ್ದವನು ಅವನನ್ನು ದುರುಗುಟ್ಟಿ ನೋಡಿದ. ಅವನು ಮಾತ್ರ ತನಗೆ ಏನೂ ಗೊತ್ತೇ ಇಲ್ಲ ಎನ್ನುವಂತೆ ಗ್ಲೌಸ್ ಹಾಕಿಕೊಂಡು ಶಮಿಯ ಎದೆಗಳ ಮೇಲೆ ಕೈ ಆಡಿಸಿದ. ಈಗ ಮುಖವನ್ನು ಮುಚ್ಚಿಕೊಳ್ಳುವ ಕೆಲಸ ಶಮಿಗೆ ಒದಗಿಬಂದಿತ್ತು. ಎಲ್ಲರೂ ಮತ್ತೊಮ್ಮೆ ಆಗಂತುಕರು ಏನು ಮಾಡುವರೆಂದು ಉಸಿರಿಡಿದು ನೋಡುತ್ತಿದ್ದಾರೆ.

ಶಮಿಯ ಹಿಂಭಾಗಗಳನ್ನು ಮೃದುವಾಗಿ ಸ್ಪರ್ಶಿಸಿ ''ಯಾರು ಯಾರ ಪತ್ನಿಯರೊ...'' ಎಂದ.

"ಯಾರು ಯಾರ ಪತ್ನಿಯರಾದರೆ ನಿನಗೇನು?" ಒಬ್ಬ ಹೇಳಿದ.

"ಸರಿ ನಡಿ... ನಮ್ಮ ಕೆಲಸ ಮುಗಿಸಿ ಹೋಗೋಣ" ಒಬ್ಬನ ಮಾತಿಗೆ "ನನಗೆ ಈ ಮನೆ ಬಿಟ್ಟು ಬರೋದಕ್ಕೆ ಮನಸೇ ಬರ್ತಾ ಇಲ್ಲ ಗುರು..." ಇನ್ನೊಬ್ಬ ಆಗಂತುಕ ದುಃಖವಾಗಿ ಹೇಳಿದ.

"ಯಾಕೆ ಬಳ್ಳಾರಿ ಜೈಲು ನೋಡ್ಬೇಕೇನು? "ಬಳ್ಳಾರಿ ಜೈಲು ಬ್ರಿಟಿಷರು ಭಾರತವನ್ನು ಆಳುತ್ತಿದ್ದ ಕಾಲದಿಂದಲೂ ಕುಖ್ಯಾತಿ ಪಡೆದ ಜೈಲು. ಅವನನ್ನು ಮತ್ತೊಬ್ಬ ಹಿಡಿದು ಎತ್ತಿ ನಿಲ್ಲಿಸಿದ. ಈಗ ಇಬ್ಬರೂ ಹಾಲಿಗೆ ಬಂದರು. ಅಶ್ವಿನಿ ಮತ್ತು ಶಮಿ ಇಬ್ಬರಿಗೂ ಸ್ವಲ್ಪ ಧೈರ್ಯ ಬಂದಂತೆ ಉಸಿರಾಡತೊಡಗಿದರು. ಮನೆಯಲ್ಲಿ ಹುಡುಕಾಡಿ ಕೈಗೆ ಸಿಕ್ಕಿದ ಹಣ ಮತ್ತು ಒಡವೆಗಳನ್ನು ಎತ್ತಿಕೊಂಡು ಕ್ರೆಡಿಟ್ ಕಾರ್ಡ್‌ಗಳನ್ನು ಜೋರಾಗಿ ತುಃ ತುಃ ಎಂದು ಉಗಿದು ಬಾತ್ ರೂಮಿಗೆ ಬಿಸಾಕಿದರು.

"ಇಷ್ಟು ದೊಡ್ಡ ಸಾಹಸ ಮಾಡಿಯೂ ಏನೂ ಪ್ರಯೋಜನವಿಲ್ಲ. ಈ ವಲಯಗಳಲ್ಲಿ ಕಳ್ಳತನ ಮಾಡೋದಕ್ಕಿಂತ ಸಿ ಡಿ ವಲಯಗಳಲ್ಲಿ ಮಾಡೊದೆ ವಾಸಿ" ಒಬ್ಬ ಹೇಳಿದ. ಇನ್ನೊಬ್ಬ ಹಿಂದಿರುಗಿ ಬಂದು ಅಶ್ವಿನಿಯ ನಗ್ನ ದೇಹದ ಮುಂದೆ ಕುಳಿತುಕೊಂಡ. ಹಿಂದೆಯೆ ಇನ್ನೊಬ್ಬ ಅವನನ್ನು ತಿವಿದು ಮೇಲಕ್ಕೆ ಎತ್ತಿ ನಿಲ್ಲಿಸಿದ. ಕೋಪಿಸಿಕೊಂಡ ಅವನು ನಿಲ್ಲಿಸಿದವನನ್ನು ದೂರಕ್ಕೆ ತಳ್ಳಿ ಮತ್ತೆ ಅಶ್ವಿನಿ ಮುಂದೆ ಕುಳಿತುಕೊಂಡ. ಮುಂದಿನ ಘಟನೆಗಳನ್ನು ಐಯಾನ್ ಮತ್ತು ತೇಜಸ್ ಕೂಡ ನೋಡಲಾರದೆ ಹೋದರು. ಈಗ ಇಬ್ಬರು ಆಗಂತುಕರು ಅಶ್ವಿನಿ ಮತ್ತು ಶಮಿಯ ಜೊತೆಗೆ ತಮಗೆ ಇಷ್ಟಬಂದಂತೆ ವರ್ತಿಸತೊಡಗಿದರು.

ಕೊನೆಗೂ ತೃಪ್ತರಾದ ಆಗಂತುಕರು ಅಲ್ಲಿಂದ ಎದ್ದು ಬಂದು ಟೇಬಲ್ ಮುಂದೆ ಕುಳಿತುಕೊಂಡು ಒಂದೆರಡು ಪೆಗ್ಗುಗಳನ್ನು ಏರಿಸಿ ಬಾಗಿಲು ತೆಗೆದುಕೊಂಡು ಹೊರಕ್ಕೆ ಹೋಗುವ ಮುನ್ನ ತಮ್ಮ ಜೊತೆಗಿದ್ದ ಎಲ್ಲಾ ಸಾಮಾನುಗಳನ್ನೂ ಪರಿಶೀಲಿಸಿ ಹೊರಕ್ಕೆ ನಡೆದರು. ಅಲ್ಲಿಗೆ ಒಂದು ಭಯಾನಕ ಅಧ್ಯಾಯ ಅವರ ಕಣ್ಣುಗಳ ಮುಂದೆ ಮುಕ್ತಾಯವಾಗಿತ್ತು. ರಿಮೋಟ್ ಕಂಟ್ರೋಲ್ ಒತ್ತಿದ ಐಯಾನ್ ಒಂದು ದೊಡ್ಡದಾದ ನಿಟ್ಟುಸಿರಿಟ್ಟ ಮತ್ತೆ ದಿಢೀರನೆ ಎದ್ದು ನಿಂತು ಎದುರಿಗಿದ್ದ ರೋಬೋಟ್‌ಗಳನ್ನೆಲ್ಲ ಕಾಲಿನಲ್ಲಿ ಒದೆಯುತ್ತ ಕೈಯಿಗೆ ಸಿಕ್ಕಿದ ವಸ್ತುಗಳನ್ನು ದೂರ ದೂರಕ್ಕೆ ಬಿಸಾಡತೊಡಗಿದ. ರೋಬೋಟ್‌ಗಳೆಲ್ಲ ಒಂದೇ ಸಮನೆ ಸಣ್ಣ ಮಕ್ಕಳಂತೆ ಕಿರುಚಾಡತೊಡಗಿದವು. ತೇಜಸ್ ಎದ್ದು ಬಂದು ಐಯಾನ್‌ನನ್ನು ಸಮಾಧಾನ ಪಡಿಸಿದ. ಅಶ್ವಿನಿ ಮತ್ತು ಶಮಿ ದಿಗ್ಭ್ರಾಂತರಾಗಿ ಮಾತುಗಳು ಬರದೆ ದಂಗಾಗಿ ಹೋಗಿದ್ದರು.

ಹೊರಕ್ಕೆ ಬರದಂತೆ ಐಯಾನ್ ಪೊಲೀಸ್ ಕಂಟ್ರೋಲ್ ರೂಮಿಗೆ ತಿಳಿಸಿದ. ಪೊಲೀಸರು ಯಾವುದೇ ವಸ್ತುಗಳನ್ನು ಮುಟ್ಟದೆ ಮನೆಯ ಒಳಗಿರುವವರನ್ನೂ ಹಾಗೆ

ಒಳಗೆಯೇ ಇರುವಂತೆ ತಿಳಿಸಿದರು. ಐದೇ ನಿಮಿಷಗಳಲ್ಲಿ ಪೊಲೀಸರು ಐಯಾನ್ ಮನೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡುಬಿಟ್ಟರು. ಅವರ ಜೊತೆಗೆ ಬಂದಿದ್ದ ರೋಬೋಟ್ - ಡಾಗ್ ಸ್ಕ್ವಾಡ್ ಮನೆಯಲ್ಲಿ ಚೆಲ್ಲಾಪಿಲ್ಲಿಯಾಗಿರುವ ಎಲ್ಲಾ ವಸ್ತುಗಳನ್ನು ಮೂಸಿ ಮೂಸಿ ನೋಡುತ್ತಿವೆ. ವಿಶೇಷ ಮಲ್ಟಿಐಯ್ಡ್ ಮಾಗ್ನಿಫೈಡ್ ಕ್ಯಾಮರಾದಲ್ಲಿ ಮನೆಯ ಒಳಗಿನ ಅತಿ ಸೂಕ್ಷ್ಮ ವಸ್ತುಗಳನ್ನು ಸಹ ಮತ್ತೊಮ್ಮೆ ಸೆರೆ ಹಿಡಿಯಲಾಯಿತು. ಅರ್ಧ ಗಂಟೆಯಲ್ಲಿ ಎಲ್ಲವನ್ನು ಮುಗಿಸಿದ ಪೊಲೀಸರು,

''ನಿಮ್ಮ ಕೆಲಸಾನ ನೀವು ಮಾಡಿಕೊಳ್ಳಿ'' ಎಂದರು. ಐಯಾನ್ ಮನೆಯ ಮಲ್ಟಿಐಯ್ಡ್ ಕ್ಯಾಮರಾ ಸೆರೆ ಹಿಡಿದಿದ್ದ ಚಿತ್ರವನ್ನು ಐಯಾನ್ ಪೋಲೀಸರ ಕೈಯಿಗೆ ಒಪ್ಪಿಸಿದ. ಅಲ್ಲೇ ಪರದೆಯ ಮೇಲೆ ಒಂದು ಸಲ ನೋಡಿದ ಪೊಲೀಸರು ಅದನ್ನು ತಮ್ಮ ಜೊತೆಗೆ ಕೊಂಡೊಯ್ದರು. ಕಳ್ಳರಿಗೆ ಸಂಬಂಧಪಟ್ಟ ಹಾಗೆ ಯಾವುದೇ ಕ್ಲೂ ಸಿಕ್ಕಿದರು ಐಯಾನ್‌ಗೆ ತಿಳಿಸುವುದಾಗಿ ಹೇಳಿದ ಪೊಲೀಸರು ಅಲ್ಲಿಂದ ಹೊರಟು ಹೋದರು.



ಪೊಲೀಸ್ ಕಂಟ್ರೋಲ್ ರೂಮಿನಲ್ಲಿ ಅಧಿಕಾರಿಗಳು ಕುಳಿತಿದ್ದಾರೆ. ರೋಬೋಟ್ ಡಾಗ್ ಸ್ಕ್ವಾಡ್ ಮೂಲಕ ಮನೆಯಲ್ಲಿ ಚೆಲ್ಲಾಡಿದ್ದ ಸಾಮಾನುಗಳ ಮೇಲೆ ಬಿದ್ದಿದ್ದ ಗುರುತುಗಳು, ಕಳ್ಳರು ಉಪಯೋಗಿಸಿದ್ದ ಮತ್ತೇರುವ ದ್ರವ್ಯದ ವಾಸನೆಯ ಆಧಾರದ ಮೇಲೆ ಈ ಕಂಪನಿಯನ್ನು ತಿಳಿದುಕೊಂಡರು. ಮಲ್ಟಿಐಯ್ಡ್ ಕ್ಯಾಮರದಲ್ಲಿ ಸೆರೆ ಹಿಡಿದ ಚಿತ್ರಣವನ್ನು ನೋಡಿ ಆಗುಂತುಕರ ಮುಖಚರ್ಯೆ ಮತ್ತು ಅವರ ಅಂಗಾಂಗಗಳನ್ನು ಗುರುತಿಸಲು ತಯಾರಿ ಮಾಡಿಕೊಂಡರು. ಆದರೆ ಮುಖಚರ್ಯೆಗಳನ್ನು ಸರಿಯಾಗಿ ಗುರುತಿಸಲಾಗದೆ ಹೋಯಿತು.

ಕಾರಣ ಮುಖಗಳಿಗೆ ಅತಿ ದಪ್ಪವಾದ ಬಟ್ಟೆಗಳನ್ನು ಸುತ್ತಿಕೊಂಡಿದ್ದರು. ಬಟ್ಟೆಯಷ್ಟೇ ಆಗಿದ್ದರೆ ಆಲ್ಫಾ ಕಿರಣಗಳು ಬಟ್ಟೆಯನ್ನು ಬೇಧಿಸಿ ಮುಖಚರ್ಯೆಯನ್ನು ಸೆರೆ ಹಿಡಿಯುತ್ತಿದ್ದವು. ಮುಖದ ಮೇಲೆ ಆಲ್ಫಾಕಿರಣಗಳು ಒಳನುಗ್ಗದಂತೆ ತೆಳು ಫೈಬರ್ ಕವಚಗಳನ್ನು ಧರಿಸಿದ್ದರು. ಜೊತೆಗೆ ಕೈಗಳಿಗೆ ಗ್ಲೌಸುಗಳನ್ನು ಹಾಕಿಕೊಂಡಿದ್ದರಿಂದ ಬೆರಳು ಮುದ್ರೆಗಳನ್ನು ಸಹ ಗುರುತಿಸಲಾಗದೆ ಹೋಯಿತು.

ಇಷ್ಟಕ್ಕೂ ಅವರು ಅಷ್ಟೆಲ್ಲ ಚಾಕಚಕ್ಯತೆಯನ್ನು ಉಪಯೋಗಿಸಿ ಬಾರಿ ರಿಸ್ಕ್ ತೆಗೆದುಕೊಂಡು ಕಳ್ಳತನ ಮಾಡಿದ್ದರೂ. ಆ ಮನೆಯಲ್ಲಿ ತುಂಬಾ ಬೆಲೆ ಬಾಳುವ ಯಾವುದೇ ವಸ್ತುಗಳು ಅವರಿಗೆ ದೊರಕಿರಲಿಲ್ಲ. ಕೇವಲ ಒಂದೆರಡು ಲಕ್ಷ ಚಿಲ್ಲರೆ ಹಣ ಮತ್ತು ಹತ್ತಾರು ಲಕ್ಷ ಬೆಲೆ ಬಾಳುವ ಒಡವೆಗಳನ್ನು ದೋಚಿದ್ದರು. ಅಂತಿಮವಾಗಿ ಅವರ ಕೈಗಳಲ್ಲಿದ್ದ ಸಾಮಾನುಗಳನ್ನು ಮತ್ತು ಅವುಗಳನ್ನು ತಯಾರಿಸಿದ ಕಂಪನಿಗಳನ್ನು ಗುರುತಿಸುವುದರ ಜೊತೆಗೆ ಅವರು ನಡೆಯುವ ರೀತಿ ಮತ್ತು ಅವರ ಬಾಡಿ ಗೆಶ್ಚರ್‌ಸ್ನು ಗುರುತಿಸಲಾಯಿತು.

ಕಳ್ಳರನ್ನು ಹಿಡಿಯುವುದರಲ್ಲಿ ಪೊಲೀಸರಿಗೆ ಯಾವ ಸಂದೇಹವೂ ಇರಲಿಲ್ಲ. ಪೊಲೀಸ್ ಕಂಟ್ರೋಲ್ ಕೋಣೆಯಿಂದ ಆ ವಲಯದ ಮಾಸ್ಟರ್ ಕಂಟ್ರೋಲ್ ಮುಖಾಂತರ ಎಲ್ಲಾ ಕಡೆಗಳಿಗೆ ವಿಷಯವನ್ನು ಫೀಡ್ ಮಾಡಲಾಯಿತು. ಅನಂತರ ಎ ವಲಯದ ಮುಖ್ಯ ಬಾಗಿಲುಗಳಲ್ಲಿ ಅಳವಡಿಸಿದ್ದ ಮಲ್ಟಿಐಯ್ಡ್ ಕ್ಯಾಮರಾಗಳಲ್ಲಿ ಕಳ್ಳರನ್ನು ಗಮನಿಸಲಾಯಿತು.

ಮುಂದೆ ಅವರು ಯಾವ ಕಡೆಗೆ ಹೋದರು...? ಯಾವ ವಲಯಕ್ಕೆ ಸೇರಿದವರು...? ಬಿ ಮತ್ತು ಸಿ ವಲಯಗಳಿಗೆ ವಿಷಯವನ್ನು ಕನೆಕ್ಟ್ ಮಾಡಿ ವಿವರಗಳನ್ನು ಕೇಳಿದರು. ಮೇಲಿನ ಎರಡೂ ವಲಯಗಳನ್ನು ಬಿಟ್ಟು ಬೇರೆ ಕಡೆಗೆ ಹೋಗಿದ್ದರೆ ಅವರನ್ನು ಹಿಡಿಯುವುದು ಕಷ್ಟ ಅಷ್ಟರಲ್ಲಿ ಎ ಬಿ ಮತ್ತು ಸಿ ವಲಯದಿಂದ ಅಂತಹವರು ಯಾರೂ ಬಂದಿಲ್ಲ ಎನ್ನುವುದಾಗಿ ವಿವರಗಳು ಬಂದವು. ಕಳ್ಳರನ್ನು ಹಿಡಿಯುವ ಸಾಹಸ ಅಲ್ಲಿಗೆ ಒಂದು ಹಿನ್ನಡೆಯನ್ನು ಅನುಭವಿಸಿತು.



ಶಮಿ ತನ್ನ ತಂದೆ ತಾಯಿಯ ಜೊತೆಗೆ ಸ್ಮಾರ್ಟ್ ಮನೆಯಲ್ಲಿ ಕುಳಿತಿದ್ದಾಳೆ. ಅದೇ ವಲಯದ ಇನ್ನೊಂದು ಸ್ಮಾರ್ಟ್ ಮನೆಯಲ್ಲಿ ಜೀವನ ನಡೆಸುವ ಶಮಿ ತಂದೆ ತಾಯಿ, ಮಗಳನ್ನು ನೋಡಿಕೊಂಡು ಹೋಗಲು ಬಂದಿದ್ದಾರೆ. ಶಮಿ ತಂದೆಯದು ದೇಶ ವಿದೇಶಗಳಲ್ಲಿ ದೊಡ್ಡ ಕಾರುಬಾರು. ಶಮಿ ಮನೆಗೆ ಬಂದಿರುವ ತನ್ನ ತಂದೆ ತಾಯಿಯನ್ನು ಕೂರಿಸಿ ವಿಶೇಷವಾಗಿ ಉಪಚರಿಸುತ್ತಿದ್ದಾಳೆ.

ತಾಯಿಯ ಸೌಂದರ್ಯವನ್ನು ನೋಡಿ ಶಮಿ ತಡೆಯಲಾರದೆ "ಅಮ್ಮಾ ಈ ವಯಸ್ಸಿನಲ್ಲೂ ನೀನು ಎಷ್ಟು ಸುಂದರವಾಗಿದ್ದೀಯಮ್ಮ...? ನಿನ್ನನ್ನು ನೋಡಿ ನನಗೇನೆ ಜಲಸ್ ಆಗ್ತಾಯಿದೆ" ಎಂದಳು. ಶಮಿಯ ತಂದೆ ಪತ್ನಿಯ ಕಡೆಗೆ ನೋಡಿ ಆಕೆಯ ಕೆನ್ನೆಯನ್ನು ಮೃದುವಾಗಿ ತಟ್ಟಿದರು. "ನೋಡು ನಿಮ್ಮ ತಂದೆ ಈ ತರಹ ಮಾಡಿ ಮಾಡೀನೆ ನನ್ನ ಸೌಂದರ್ಯ ಹಿಮ್ಮಡಿ ಆಗಿರೋದು" ಎಂದಳು. ಮೂವರಿಗೂ ನಗು ತಡೆಯಲಾಗಲಿಲ್ಲ.

"ಮಹಿಳೆಯರ ವಯಸ್ಸು ನಲವತ್ತು ಪ್ಲಸ್ ಆದಾಗ ನಿಜವಾಗಿಯೂ ಸುಂದರವಾಗಿ ಕಾಣಿಸಿಕೊಳ್ತಾರೆ. ನೀವು ಸುಂದರವಾಗಿ ಕಾಣಿಸಿಕೊಳ್ಳೋದಕ್ಕೆ ಜೀನ್ಸ್ ಟ್ರೀಟ್‌ಮೆಂಟ್ ತೆಗೆದುಕೊಳ್ತೀನಿ ಅಂದರಲ್ಲ ಏನಾಯಿತು?" ಶಮಿ ತಂದೆಯನ್ನು ಪ್ರಶ್ನಿಸಿದಳು.

"ಮಾಡಿಕೊಂಡನಲ್ಲಮ್ಮ ಹೋದ ತಿಂಗ್ಳು ಅದರಿಂದ ಅದು ನನಗೆ ಏನೂ ಪ್ರಯೋಜನ ಆಗಲಿಲ್ಲ" ಎಂದರು ತಂದೆ. ಶಮಿ ಮತ್ತು ಆಕೆಯ ತಾಯಿ ಒಂದೇ ರೀತಿಯಾಗಿ ನಕ್ಕರು.

"ನೀವಿಬ್ಬರೂ ಅಕ್ಕ ತಂಗಿಯರ ತರಹ ಕಾಣಿಸ್ತೀರ...? ನಿಮ್ಮ ತಾಯಿ ಸ್ವಲ್ಪ ದಪ್ಪ, ನೀನು

ಸ್ವಲ್ಪ ಸಣ್ಣ, ಅಷ್ಟೇ ವ್ಯತ್ಯಾಸ'' ತಂದೆಯ ಮಾತಿಗೆ ''ಅಪ್ಪ ನಾನು ಅಮ್ಮನಿಗಿಂತ ಇಪ್ಪತ್ತು ನಾಲ್ಕು ವರ್ಷ ಚಿಕ್ಕವಳು'' ಎಂದಳು ಶಮಿ.

''ಹೌದು ! ತೂಕದ ವ್ಯತ್ಯಾಸಾನು ಅಷ್ಟೇ'' ಈ ಮಾತಗೆ ಈಗ ಮೂವರು ನಕ್ಕರು.

ಅಷ್ಟರಲ್ಲಿ ಬಾಗಿಲಲ್ಲಿದ್ದ ರೋಬೋಟ್ ''ತೇಜಸ್ ಬರ್‍ತಾ ಇದ್ದಾರೆ?'' ಎಂದಿತು. ಶಮಿ ತಂದೆ, ತಾಯಿ ಕಾತುರದಿಂದ ಬಾಗಿಲು ಕಡೆಗೆ ನೋಡಿದರು. ತೇಜಸ್ ಒಳಗೆ ಬಂದಿದ್ದೆ ಆಶ್ಚರ್ಯದಿಂದ ''ಹಾಯ್... ಹಲೊ... ಅಂಕಲ್... ಆಂಟಿ ಯಾವಾಗ ಬಂದಿರಿ?'' ಎಂದು ಹತ್ತಿರಕ್ಕೆ ಬಂದ.

ಶಮಿಯ ತಂದೆ ತೇಜಸ್ ಕೈಕುಲುಕಿದರೆ, ಶಮಿಯ ತಾಯಿ ಕೈಕುಲುಕಿ ತೇಜಸ್ ಕೆನ್ನೆಗೆ ತುಟಿಗಳನ್ನು ಒತ್ತಿದಳು. ತೇಜಸ್ ಕೂಡ ಹಾಗೇ ಮಾಡಿದ. ಅನಂತರ ಶಮಿಯ ಹತ್ತಿರಕ್ಕೆ ಬಂದು ''ಹಾಯ್ ಹನಿ...'' ಎಂದು ಶಮಿಯ ತುಟಿಗಳಿಗೆ ತುಟಿಗಳನ್ನು ಒತ್ತಿದ. ಇಬ್ಬರ ತುಟಿಗಳಲ್ಲಿ ಸಣ್ಣದಾಗಿ ವಿದ್ಯುತ್ ಸಂಚಲನಗೊಂಡಿತು.

ತೇಜಸ್, ಬಟ್ಟೆ ಬದಲಿಸಿಕೊಂಡು ಬರುವುದಾಗಿ ಕೋಣೆಯ ಒಳಗೋದ. ''ನೀವು ಬಟ್ಟೆ ಬದಲಿಸಿಕೊಳ್ಳಿ'' ಶಮಿ ತನ್ನ ತಂದೆ ತಾಯಿಗೆ ಹೇಳಿದಳು.

''ಹೌದೌದು, ಬಟ್ಟೆ ಬದಲಾಯಿಸಿಕೊಳ್ಳಬೇಕು'' ಶಮಿ ತಂದೆ ಇನ್ನೊಂದು ಕೋಣೆಯ ಒಳಗೆ ಎದ್ದು ಹೋದರು. ಶಮಿ, ತಂದೆಗೆ ಸಹಾಯ ಮಾಡಲು ಹಿಂದೆಯೆ ಹೋದಳು. ಶಮಿಯ ತಾಯಿ ಎದ್ದು ಮನೆಯಲ್ಲಿದ್ದ ಅಲಂಕಾರ ವಸ್ತುಗಳನ್ನು ನೋಡತೊಡಗಿದರು. ಶಮಿ ವಾರ್ಡ್‌ರೋಬ್‌ನಿಂದ ಬಟ್ಟೆಗಳನ್ನು ತೆಗೆದುಕೊಟ್ಟು ಹಿಂದಕ್ಕೆ ಬಂದಳು. ತಾಯಿ ಹಾಲ್‌ನಲ್ಲಿ ಸಾಮಾನುಗಳನ್ನು ಸರಿಪಡಿಸುತ್ತಿದ್ದಳು.



ಈಗ ಎಲ್ಲರೂ ಟೇಬಲ್ ಮುಂದೆ ಕುಳಿತಿದ್ದಾರೆ. ವಿಧ ವಿಧ ಡ್ರಿಂಕ್ಸ್ ಅವರ ಮುಂದೆ ಕುಳಿತಿವೆ. ಎದುರಿಗೆ ಗೋಡೆಯ ಮೇಲೆ ಹಳೆ ಚಲನಚಿತ್ರ ಸಣ್ಣದಾಗಿ ಶಬ್ದ ಮಾಡುತ್ತ ಚಲಿಸುತ್ತಿದೆ. ತೇಜಸ್ ಮತ್ತು ಶಮಿ ತಂದೆ ಕುಡಿಯುತ್ತಿದ್ದಾರೆ. ಶಮಿ ಖುದ್ದಾಗಿ ಮೈಕ್ರೊ ಓವನ್‌ನಲ್ಲಿದ್ದ ಮಾಂಸದ ತುಂಡುಗಳನ್ನು ತಂದು ಮುಂದೆ ಇರಿಸಿದ್ದಾಳೆ. ಎಲ್ಲವನ್ನು ಅರೆಂಜ್ ಮಾಡಿದ ಮೇಲೆ ಶಮಿ ಕೂಡ ಅವರ ಜೊತೆಗೆ ಸೇರಿಕೊಂಡು. ಈಗ ಅವರ ಸಹಾಯಕ್ಕಾಗಿ ಎರಡು ರೋಬೋಟ್‌ಗಳು ಪಕ್ಕದಲ್ಲಿ ನಿಂತಿವೆ. ಶಮಿ ತಂದೆ ಕುಡಿಯುತ್ತಿದ್ದಂತೆ ಅವರ ಮುಖದಲ್ಲಿ ಯಾವುದೋ ಆತಂಕ ತುಂಬಿಕೊಳ್ಳುತ್ತಿತ್ತು. ಶಮಿ ಮತ್ತು ತೇಜಸ್‌ಗೆ ಮದುವೆಯಾಗಿ ಎರಡು ವರ್ಷಗಳು ಮುಗಿದಿವೆ. ಪ್ರಸ್ತುತ ಪ್ರಪಂಚದಾದ್ಯಂತ ಮದುವೆಗಳು ಅವರ ಆರ್ಥಿಕ ಆಧಾರದ ಮೇಲೆ ನಡೆಯುತ್ತಿವೆ. ಪ್ರೀತಿ, ಪ್ರೇಮ ಎನ್ನುವುದು ಈಗ ಸೆಕ್ಸ್‌ಗೆ ಮಾತ್ರ ಸೀಮಿತವಾಗಿದೆ. ಯಾರು ಎಷ್ಟೇ ಸ್ಫೂರದ್ರೂಪಿಯಾದರೂ ಹಣ ಖರ್ಚು ಮಾಡಿ

ಬೇರೆಯವರ ಜೊತೆಗೆ ಆಗಾಗ ಡೇಟಿಂಗ್ ಫಿಕ್ಸ್ ಮಾಡಿಕೊಳ್ಳುತ್ತಾರೆ. ಇನ್ನು ವ್ಯಾಮೋಹಿಗಳಾದರೆ ಒಂದೆರಡು ವಾರ, ತಿಂಗಳುಗಳು ಒಟ್ಟಾಗಿ ಜೀವನ ನಡೆಸುತ್ತಾರೆ. ಮದುವೆ ನಡೆಯುವುದು ಮಾತ್ರ ಅವರವರ ಐಶ್ವರ್ಯದ ಆಧಾರದಿಂದಲೆ.

ಎ ಮತ್ತು ಬಿ ವಲಯದ ಮದುವೆಗಳು ಹೆಚ್ಚಾಗಿ ಇಂಟರ್‌ನೆಟ್ ಮದುವೆಗಳಾಗಿವೆ. ಮದುವೆಯಾಗಲು ಇಚ್ಛಿಸುವ ವಧು ಮತ್ತು ವರನ ಪೂರ್ಣ ಮಾಹಿತಿಯನ್ನು ಇಂಟರ್‌ನೆಟ್‌ನಲ್ಲಿ ಹಾಕಿ ಬಿಡುತ್ತಾರೆ. ವಧು ಮತ್ತು ವರನ ಒಂದು ಪೂರ್ಣ ಡಾಕ್ಯುಮೆಂಟರಿಯೆ ಅದರಲ್ಲಿ ಇರುತ್ತದೆ. ಅವರ ಅಭಿರುಚಿಗಳು, ಅವರ ಹಾವಭಾವಗಳು... ಅವರು ನಡೆಯುವುದು, ಮಾತನಾಡುವುದು... ಅವರ ವಿದ್ಯಾಭ್ಯಾಸ... ಅವರ ಆರೋಗ್ಯದ ಮಾಹಿತಿ... ಅವರ ಟೆಂಪರ್‌ಮೆಂಟ್... ಅವರ ಅಸೆಟ್ಸ್ ವಿವರ ಹೀಗೆ ವಧು ವರನ ಪೂರ್ಣ ಪ್ರಮಾಣದ ಮಾಹಿತಿ ಇರುತ್ತದೆ.

ಸುಮಾರು ಐವತ್ತು ವರ್ಷಗಳ ಹಿಂದಿನಿಂದಲೂ ಹೆಣ್ಣು ಮಕ್ಕಳನ್ನು ಭ್ರೂಣದಲ್ಲಿಯೇ ಸಾಯಿಸಿದ ಕಾರಣದಿಂದ ಯುಸ್‌ಐನಲ್ಲಿ ಹೆಣ್ಣುಮಕ್ಕಳ ಸಂಖ್ಯೆ ತೀರಾ ಕಡಿಮೆಯಾಗಿ ಬಿಟ್ಟಿದೆ. ಅದರಲ್ಲೂ ಹಿಂದೂಗಳಲ್ಲಿ ಇದು ಬಹಳ ಅಮಾನುಷವಾಗಿದ್ದ ಅನಿಷ್ಠ ಕಾರಣದಿಂದ ಈ ದಿನ ಹೆಣ್ಣು ಮಕ್ಕಳಿಗೆ ಭಾರಿ ಬೇಡಿಕೆಯಾಗಿದೆ. ಎ ಮತ್ತು ಬಿ ವಲಯದ ಗಂಡುಗಳು ಇನ್ನಿತರ ಧರ್ಮ ಮತ್ತು ದೇಶಗಳ ಹೆಣ್ಣು ಮಕ್ಕಳನ್ನು ಮದುವೆಯಾಗುತ್ತಿದ್ದಾರೆ.

ಶಮಿ ಮತ್ತು ತೇಜಸ್ ಮದುವೆ ಆಗುವುದಕ್ಕಿಂತ ಮುಂಚೆ ಏಳು ವರ್ಷಗಳ ಕಾಲ ಅವರಿಬ್ಬರು ಪ್ರತ್ಯೇಕವಾಗಿ ಒಂದು ವಿಶಾಲವಾದ ಸ್ಮಾರ್ಟ್ ಮನೆಯಲ್ಲಿ ಜೀವನ ನಡೆಸಿದ್ದಾರೆ. ಇಷ್ಟೆಲ್ಲ ನಡೆದು ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಮದುವೆಯಾದ ಮೇಲೂ ಒಂದು ಬಿಡಿಸಲಾಗದ ಕಗ್ಗಂಟು ಅವರ ನಡುವೆ ಏರ್ಪಟ್ಟಿತ್ತು. ಇಬ್ಬರೂ ಆರೋಗ್ಯವಾಗಿದ್ದರೂ ಶಮಿ ಗರ್ಭ ಧರಿಸದೆ ಇರುವುದು. ಮೊದಲಿಗೆ ಒಂದು ವರ್ಷ ಕಾಲ ಅದರ ಬಗ್ಗೆ ಅವರು ತಲೆ ಕೆಡಿಸಿಕೊಳ್ಳಲಿಲ್ಲ. ಎರಡನೆ ವರ್ಷ ತಮ್ಮಲ್ಲೆ ತಾವು ಪ್ರಶ್ನಿಸಿಕೊಂಡರು. ಒಂದು ವರ್ಷ ಮಗು ಬೇಡವೆಂದುಕೊಂಡು, ಎರಡನೇ ವರ್ಷದಲ್ಲಿ ಅವರು ಯಾವುದೇ ರೀತಿಯ ನಿರ್ಬಂಧಗಳನ್ನು ಪಾಲಿಸುತ್ತಿರಲಿಲ್ಲ. ಆದರೂ ಶಮಿ ಗರ್ಭ ಧರಿಸಲಿಲ್ಲ.

ಶಮಿ ಮತ್ತು ತೇಜಸ್ ತಂದೆ ತಾಯಿಗೆ ಒಬ್ಬಳೆ ಮಗಳು, ಒಬ್ಬನೆ ಮಗ. ಎರಡೂ ಕಡೆಯೂ ಹೇರಳವಾದ ಸಂಪತ್ತಿದೆ. ಇವರಿಗೆ ಮಕ್ಕಳಾಗದೆ ಹೋದಲ್ಲಿ ಆಸ್ತಿಯ ಬಗ್ಗೆ ಪ್ರಶ್ನೆ ಏಳುತ್ತದೆ. ಯಾವುದೇ ಕಾರಣಕ್ಕೂ ಅವರಿಗೆ ಮಕ್ಕಳು ಆಗಲೇಬೇಕು. ಎರಡು ಮನೆಗಳಲ್ಲೂ ಆತಂಕ ಶುರುವಾಗಿತ್ತು. ಶಮಿ ಮತ್ತು ತೇಜಸ್ ಮೇಲೆ ಅವರ ಕುಟುಂಬದವರು ಒತ್ತಡವನ್ನು ತರತೊಡಗಿದರು. ಇಬ್ಬರಿಗೂ ಏನೂ ತೊಂದರೆಗಳಿಲ್ಲ, ಮಕ್ಕಳು ಆಗೆ ಆಗುತ್ತಾರೆ ಎನ್ನುವುದು ಎಲ್ಲರ ನಂಬಿಕೆಯಾಗಿತ್ತು.

ಶಮಿ ಮತ್ತು ತೇಜಸ್ ಮೇಲೆ ಎರಡು ಮನೆಯವರು ವೈದ್ಯಕೀಯ ತಪಾಸಣೆ

ನಡೆಸುವಂತೆ ಒತ್ತಡ ಹೇರಿದರು. ಶಮಿ ತಂದೆಗೆ ಎಷ್ಟೇ ತಡೆ ಹಿಡಿದರೂ ಆಗಲಿಲ್ಲ. ಕೊನೆಗೆ "ನೋಡಮ್ಮ ಶಮಿ. ಐ ವಾಂಟ್ ಟು ಬೇಬಿಸ್. ಎರಡು ಮನೆಗಳಿಗೆ ಎರಡು ಬೇಬಿಸ್ ಬೇಕು" ಎಂದರು. ಕುಡಿದಿದ್ದ ಕಿಕ್ ಒಂದೇ ಸಮನೆ ಜರ್‍ರನೆ ಇಳಿದು ಹೋಗಿ ಶಮಿ ಮತ್ತು ತೇಜಸ್ ಒಬ್ಬರನ್ನೊಬ್ಬರು ನೋಡಿಕೊಂಡರು. ಶಮಿ ತಂದೆ ಈ ರೀತಿ ನೇರವಾಗಿ ಯಾವಾಗಲೂ ಹೇಳಿರಲಿಲ್ಲ. ಹೇಳಿ ಕೇಳಿ ಇಂಡಿಯನ್ ಕುಟುಂಬ. ಈ ಕುಟುಂಬಗಳು ಇಂದಿಗೂ ಸ್ವಲ್ಪ ಮಟ್ಟಿಗಾದರೂ ಮೌಲ್ಯಗಳನ್ನು ಉಳಿಸಿಕೊಂಡಿದ್ದವು.

ಯುರೋಪ್ ದೇಶಗಳ ಯುವಕ ಯುವತಿಯರಾಗಿದ್ದರೆ ಇದು ನಮ್ಮ ಖಾಸಗಿ ವಿಷಯ ಎಂದು ಬಿಡುತ್ತಿದ್ದರು "ಐಯಾಮ್ ಸಾರಿ" ಶಮಿ ತಂದೆ ಏನೋ ಜ್ಞಾನೋದಯ ವಾದಂತೆ ತಡವರಿಸುತ್ತ ಹೇಳಿದರು.

ಶಮಿ ತಾಯಿ "ನಮ್ಮ ಮಕ್ಕಳಿಗೆ ಮಕ್ಕಳಾಗದೆ ಹೋಗುತ್ತ? ಇವೊತ್ತು ಇಲ್ಲ ಅಂದರೆ ನಾಳೆ ಆಗುತ್ತೆ. ಇನ್ನು ಒಂದಷ್ಟು ದಿನ ಸಂತೋಷವಾಗಿರ್‍ಲಿ ಬಿಡಿ" ಎಂದಳು.

"ಓಕೆ, ತಿನ್ನೊದಕ್ಕೆ ಏನಾದರೂ ಕೊಡಮ್ಮ" ಮಾತುಗಳನ್ನು ಬದಲಿಸಿದರು. ಶಮಿ ರೋಬೋಟ್‌ಗೆ ಸೂಚನೆ ನೀಡಿದಳು. ಆಗಲೆ ಹಲವು ಭಕ್ಷ್ಯಗಳು ಅವರ ಮುಂದೆ ಇದ್ದರೂ ಇನ್ನಷ್ಟು ಬಿಸಿಬಿಸಿ ಭಕ್ಷ್ಯಗಳನ್ನು ರೋಬೋಟ್ ಅವರ ಟೇಬಲಿಗೆ ಸಪ್ಲೈ ಮಾಡಿತು. ಎಲ್ಲರೂ ತಿಂದು ಮುಗಿಸಿದರು. ಶಮಿ ತಂದೆ ತಾಯಿ ಊಟ ಮುಗಿಸಿ ಶಮಿ ಮತ್ತು ತೇಜಸ್‌ಗೆ ಸಮಾಧಾನ ಹೇಳಿ ತಮ್ಮ ಮನೆಯ ಕಡೆಗೆ ಕಾರಿನಲ್ಲಿ ಹೊರಟರು.



ಶಮಿ ತಂದೆ ತಾಯಿ ಮನೆ ಬಿಟ್ಟು ಅರ್ಧ ಗಂಟೆಯಾಗಿರಬೇಕು. ಎ ವಲಯದಲ್ಲಿ ಚಟ... ಚಟ ಚಟ... ಎಂದು ಸೋಲಾರ್ ವಿದ್ಯುತ್ ಕಡಿದುಕೊಂಡಿತು. ಎಲ್ಲೆಲ್ಲೂ ಅಂಧಕಾರ, ಏನಾಗುತ್ತಿದೆ? ಐಯಾನ್ ತುರ್ತಾಗಿ ಸೋಲಾರ್ ಬ್ಯಾಟರಿಗಳಿರುವ ಸ್ವಿಚ್ಚಿನ ಕಡೆಗೆ ರಿಮೋಟ್ ಒತ್ತಿದ. ಬಲ್ಬ್‌ಗಳೆಲ್ಲಾ ಮತ್ತೆ ಉರಿಯತೊಡಗಿದವು. ಒಂದೆರಡು ಕ್ಷಣಗಳು ಸೋಲಾರ್ ವಿದ್ಯುತ್ ಸಂಪರ್ಕ ಕಳೆದುಕೊಂಡಿದ್ದ ರೋಬೋಟ್‌ಗಳೆಲ್ಲ ಮತ್ತೆ ಜೀವ ಪಡೆದುಕೊಂಡು ತಮ್ಮ ತಮ್ಮ ಕಾರ್ಯದಲ್ಲಿ ತೊಡಗಿಕೊಂಡವು. ಐಯಾನ್ ನ್ಯೂಸ್ ಕೇಳತೊಡಗಿದ.

ರೋಬೋಟ್ ಒಂದು ವಿಶೇಷ ಸಮಾಚಾರವನ್ನು ಇಂಟರ್‌ನೆಟ್ ಮೂಲಕ ಪಡೆದುಕೊಂಡು ಪ್ರಕಟಿಸಿತು. "ವಿಶೇಷ ಸೂಚನೆ... ಬೆನ್ ನಗರಕ್ಕೆ ಉತ್ತರ ಪೂರ್ವದಲ್ಲಿ ನೂರು ಕಿಲೋಮೀಟರ್ ದೂರದಲ್ಲಿರುವ ಸೌರಗೋಪುರದ ಮೇಲೆ ಸಿಡಿಲು ಬಡಿದು ಸೌರಶಕ್ತಿ ಸಂಪರ್ಕ ಅಸ್ತವ್ಯಸ್ತಗೊಂಡಿದೆ. ವಿಷಾದದ ವಿಷಯವೆಂದರೆ 1011 ಮೀಟರ್‌ಗಳು ಎತ್ತರ ಮತ್ತು 1500 ಮೀಟರುಗಳ ಸುತ್ತಳತೆ ಹರಡಿಕೊಂಡಿರುವ ಈ ಸೌರಗೋಪುರ

ಪೂರ್ಣವಾಗಿ ಹೊತ್ತಿಕೊಂಡು ಉರಿಯುತ್ತಿದೆ'' ಐಯಾನ್ ಇಂಟರ್‌ನೆಟ್‌ನ ನ್ಯೂಸ್ ಚಾನಲ್ ತಿರುಗಿಸಿ ನೋಡುತ್ತಾನೆ.

ಧರೆಯೇ ಒಂದು ದೀಪವಾಗಿ ಉರಿಯುತ್ತಿರುವಂತೆ ತೋರುತ್ತಿದೆ. ಭಯಂಕರ ಬೆಂಕಿಯ ಕೆನ್ನಾಲಿಗೆಗಳು ಸುತ್ತಲೂ ಚಾಚಿಕೊಳ್ಳುತ್ತಿವೆ. ಐಯಾನ್ ಇಂಟರ್‌ನೆಟ್ ಚಾನ್‌ಲ್ ನ್ಯೂಸನ್ನು ದೊಡ್ಡ ಪರದೆಗೆ ಜೋಡಿಸಿದ. ಗೋಡೆಯೆ ಹೊತ್ತಿ ಉರಿಯುತ್ತಿದೆ. ಐಯಾನ್ ಅಶ್ವಿನಿಯನ್ನು ಕರೆದು ತೋರಿಸಿದ, ಅಶ್ವಿನಿ ಬೆರಗಾಗಿ ಹೋದಳು.

''ಏನಾಯಿತು...?''

''ಬೆನ್ ನಗರಕ್ಕೆ ಈಶಾನ್ಯದಲ್ಲಿರುವ ಸೌರಗೋಪುರದ ಮೇಲೆ ಸಿಡಿಲು ಬಡಿದಿದೆ !'' ಎನ್ನುತ್ತಿದ್ದಂತೆ ''ನಮಗೆ ಏನೂ ತೊಂದರೆ ಆಗೋದಿಲ್ಲ ತಾನೆ...?'' ಅಶ್ವಿನಿ ಪ್ರಶ್ನಿಸಿದಳು.

''ನಮಗೆ ಏನೂ ಆಗೋದಿಲ್ಲ, ಆದರೆ ಸೌರಶಕ್ತಿ ವಿದ್ಯುತ್ ಹೋಗಿದೆ'' ಐಯಾನ್ ಹೇಳಿದ. ವಿಶಾಲವಾದ ತಟ್ಟೆಯಾಕಾರದ ದೀಪದ ಮೇಲೆ ದೊಡ್ಡ ಗೋಪುರ ಧಗಧಗನೆ ಉರಿಯುತ್ತಿದೆ. ಇದನ್ನು ನಂದಿಸುವುದು ಹೇಗೆ? ನೋಡುತ್ತಿರುವವರಿಗೆ ಏನೂ ಅರ್ಥವಾಗುತ್ತಿಲ್ಲ.

ಇದನ್ನು ಕಟ್ಟುವುದಕ್ಕೆ ಮುಂಚೆ ವಿಜ್ಞಾನಿಗಳು ಹೀಗಾದರೆ ಏನೂ ಮಾಡಬೇಕು ಎನ್ನುವುದನ್ನು ಯೋಚಿಸಿದ್ದರೊ ಇಲ್ಲವೊ...? ಈ ಅನಾಹುತಕ್ಕೆ ಸಿಡಿಲು ಕಾರಣವೋ ಅಥವಾ ಇನ್ನೇನಾದರೂ ಕಾರಣವಿದೆಯೋ... ನೋಡುವವರು ಒಬ್ಬರನ್ನೊಬ್ಬರು ಪ್ರಶ್ನಿಸಿಕೊಳ್ಳುತ್ತಿದ್ದಾರೆ.

ಯಾರಾದರೂ ಶತ್ರು ದೇಶದವರು, ಉಗ್ರವಾದಿಗಳು ಏನಾದರೂ ಮಾಡಿರಬಹುದೇ? ಇಲ್ಲ ನೈಸರ್ಗಿಕ ವಿಪತ್ತಿಗೆ ತುತ್ತಾಗಿರಬಹುದೆ? ಹೀಗೆ ಹಲವು ರೀತಿಯಾಗಿ ಪ್ರಶ್ನಿಸಿಕೊಳ್ಳುತ್ತಿದ್ದರು. ಬೆನ್ ನಗರವೆ ಅಲ್ಲ ಪ್ರಪಂಚದಾದ್ಯಂತ ಎಲ್ಲಾ ಚಾನಲ್‌ಗಳು ಹೊತ್ತಿ ಉರಿಯುತ್ತಿರುವ ಸೌರ ಗೋಪುರವನ್ನು ತೋರಿಸುತ್ತಿವೆ. ಫೋನ್‌ಗಳು, ಈ-ಮೇಲ್‌ಗಳು, ಲೈವ್ ಇನ್ ಕಾರ್ಯಕ್ರಮಗಳು, ದೂರದರ್ಶನಗಳು, ಸ್ಕೈ ಸಿಗ್ನಲ್‌ಗಳು ಮತ್ತು ಇಂಟರ್‌ನೆಟ್‌ನಲ್ಲೂ ಉರಿಯುತ್ತಿರುವ ಗೋಪುರದ್ದೇ ವಿಷಯವಾಗಿದೆ.

1500 ಮೀಟರುಗಳು ವ್ಯಾಪ್ತಿಯಲ್ಲಿ ಹರಡಿದ್ದ ಈ ಸೌರಶಕ್ತಿಯ ಚಕ್ರಾಕಾರದ ಚಾವಣಿ ಭೂಮಿಯಿಂದ 100, 200 ಮತ್ತು 300 ಮೀಟರುಗಳ ಎತ್ತರದಲ್ಲಿ ಮೂರು ಹಂತಗಳಾಗಿ ಹರಡಿಕೊಂಡಿದೆ. ಮಧ್ಯದಲ್ಲಿ 1011 ಮೀಟರುಗಳು ಎತ್ತರದ ಗೋಪುರವಿದ್ದು ಅದರ ಸರಾಸರಿ ವ್ಯಾಸ 111 ಮೀಟರುಗಳು. ಮೂರು ಅಂತಸ್ತುಗಳಲ್ಲಿ ಕಛೇರಿಗಳಿದ್ದು ನೂರಾರು ವಿಜ್ಞಾನಿಗಳು, ತಂತ್ರಜ್ಞರು, ಅಧಿಕಾರಿಗಳು, ಕಾರ್ಮಿಕರು ಆ ಸೌರಗೋಪುರದಲ್ಲಿ ಕೆಲಸ ಮಾಡುತ್ತಿದ್ದಾರೆ.

ರಾತ್ರಿ ಹತ್ತು ಗಂಟೆ ಸಮಯ. ಆಗ ಎರಡನೆ ಪಾಳಿಯಲ್ಲಿ ಸಾಕಷ್ಟು ಉದ್ಯೋಗಿಗಳು ಕೆಲಸದಲ್ಲಿ ತೊಡಗಿರುವುದಾಗಿ ತಿಳಿದುಬಂದಿತು. ಸೌರಗೋಪುರ ಎಷ್ಟು ಭಯಂಕರವಾಗಿ ಹೊತ್ತಿ ಉರಿಯುತ್ತಿದೆ ಎಂದರೆ ಅದರ ಒಳಗೆ ಇರುವವರು ಯಾರೂ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲದಂತೆ ತೋರುತ್ತಿತ್ತು. ಎರಡನೆ ಪಾಳಿಯಲ್ಲಿದ್ದವರ ಸಂಖ್ಯೆ ನಿಖರವಾಗಿ ಈಗ ಇಂಟರ್‌ನೆಟ್‌ನಲ್ಲಿ ಎಲ್ಲೆಡೆ ದೊರಕುತ್ತಿತ್ತು.

ಅಲ್ಲಿ ಕೆಲಸ ಮಾಡುವ ಪ್ರತಿಯೊಬ್ಬ ಉದ್ಯೋಗಿಯು ಒಳಗೆ ಪ್ರವೇಶಿಸುವ ಮುನ್ನ ತನ್ನ ಗುರುತಿನ ಕಾರ್ಡನ್ನು ಕಂಪ್ಯೂಟರ್ ರೋಬೋಟ್ ಬಾಯಲ್ಲಿ ಇಟ್ಟಾಗ ಅದು ಗುರುತಿಸಿ ಒಳಗೆ ಬಿಡುತ್ತದೆ. ಹಾಗಾಗಿ ಒಳಗೆ ಪ್ರವೇಶಿಸಿದವರ ವಿವರಗಳು ಭಾವಚಿತ್ರದ ಸಮೇತ ದೊರಕುತ್ತಿದೆ. ಜೊತೆಗೆ 727 ವಿಸಿಟರ್ಸ್ ಇದ್ದು ಅವರಲ್ಲಿ 123 ಜನರು ಅನ್ಯ ದೇಶಗಳಿಗೆ ಸೇರಿದವರೆಂದು ತಿಳಿಯಿತು.

ಸೌರಗೋಪುರಕ್ಕೆ ಬೆಂಕಿ ಹೊತ್ತಿಕೊಂಡಾಗ ಎಷ್ಟು ಜನರು ಗೋಪುರದ ಸಂಕೀರ್ಣದಿಂದ ಹೊರಕ್ಕೆ ಓಡಿಬಂದರು...? ಎಂದು ತಿಳಿದುಬರಲಿಲ್ಲ. ಹೀಗೆ ಪಾರಾಗಿ ಬಂದವರು ಮತ್ತು ಪ್ರತ್ಯಕ್ಷ ದರ್ಶಿಗಳು ಕೂಡಲೆ ಮಾಹಿತಿ ನೀಡಬೇಕೆಂದು ತಿಳಿಸಲಾಯಿತು. ಟಿವಿ ಮಾಧ್ಯಮಗಳು ಕೆಲವರಿಂದ ಹೇಳಿಕೆಗಳನ್ನು ಪಡೆದುಕೊಂಡು ವಿವರಿಸುತ್ತಿದ್ದವು. ಗೋಪುರಕ್ಕೆ ಬೆಂಕಿ ಹೇಗೆ ಹೊತ್ತಿಕೊಂಡಿತು? ಎನ್ನುವ ಜಿಜ್ಞಾಸೆ ನಡೆಯುತ್ತಲೇ ಇತ್ತು. ಒಂದು ಕಡೆ ಉಪಗ್ರಹಗಳಿಂದ ವಿವರಗಳನ್ನು ಪಡೆದುಕೊಳ್ಳಲು ವಿಜ್ಞಾನಿಗಳು ಹೆಣಗಾಡುತ್ತಿದ್ದರೆ ಇನ್ನೊಂದು ಕಡೆ ಸುತ್ತಮುತ್ತಲಿನ ಜನರನ್ನು ಮತ್ತು ಗೋಪುರದಿಂದ ತಪ್ಪಿಸಿಕೊಂಡವರಿಂದ ಮಾಹಿತಿಗಳನ್ನು ಕಲೆ ಹಾಕುತ್ತಿದ್ದರು.

ಕೆಲವರ ಹೇಳಿಕೆಯ ಪ್ರಕಾರ ಇದ್ದಕ್ಕಿದ್ದ ಹಾಗೆ ಗೋಪುರದ ಮೂರರ ಎರಡನೇ ಎತ್ತರದ ಭಾಗದಲ್ಲಿ ಅಥವಾ 720 ಮೀಟರುಗಳ ಎತ್ತರದಲ್ಲಿ ಬೆಂಕಿ ಕಾಣಿಸಿಕೊಂಡಿತು. ನೋಡುತ್ತಿದ್ದಂತೆ ಮೋಡಗಳಿಂದ ಮಿಂಚು ಚಲಿಸಿದಂತೆ ಎಲ್ಲಾ ಕಡೆಯೂ ಬೆಂಕಿ ಹರಡಿಕೊಂಡುಬಿಟ್ಟಿತು. ಈಗ ಬೆಂಕಿ ಯಾವ ಮಟ್ಟಕ್ಕೆ ಉರಿಯುತ್ತಿದೆ ಎಂದರೆ ಗೋಪುರದ ಸುತ್ತಮುತ್ತಲಿದ್ದ ಸುಮಾರು ನಾಲ್ಕೈದು ಕಿಲೋ ಮೀಟರುಗಳು ದೂರಕ್ಕೆ ಬೆಂಕಿಯ ತಾಪ ಹರಡಿಕೊಂಡಿದೆ.

ಎಲ್ಲವನ್ನೂ ಗಮನಿಸುತ್ತಿದ್ದ ವಿಜ್ಞಾನಿಗಳೂ, ಅಧಿಕಾರಿಗಳ ಹೇಳಿಕೆಯಂತೆ ನಾಲ್ಕೈದು ಕಿಲೋಮೀಟರುಗಳು ಸುತ್ತಲಿರುವ ಜನರು ತಕ್ಷಣವೇ ಮನೆಗಳನ್ನು ತೊರೆದು ದೂರ ಹೋಗಬೇಕೆಂದು ಸರಕಾರ ಹೇಳಿಕೆ ನೀಡಿತು. ಗೋಪುರದ ಸುತ್ತಲು ಹರಡಿಕೊಂಡಿರುವ ಸ್ಲಮ್ಮುಗಳು, ಕೆಳವರ್ಗದ ಬಡಾವಣೆಗಳ ಜನರು ವಿಷಯ ತಿಳೀಯುತ್ತಿದ್ದಂತೆ ದಿಗ್ಭ್ರಾಂತರಾಗಿ ಮಕ್ಕಳೂ ಮರಿಗಳನ್ನು ಎತ್ತಿಕೊಂಡು ಸಿಕ್ಕಿದ ಕಡೆ ಓಡತೊಡಗಿದರು. ಈ ನಡುವೆ ಹತ್ತಿರದಲ್ಲಿದ್ದ ಒಂದೆರಡು ಸ್ಲಮ್ಮುಗಳಿಗೆ ಬೆಂಕಿಯ ನಾಲಿಗೆಗಳು ಚಾಚಿಕೊಂಡು ಬಿಟ್ಟಿದ್ದವು. ನೋಡು ನೋಡುತ್ತಿದ್ದಂತೆ ಸ್ಲಮ್ಮುಗಳು ಕರಲಾಗಿ ಹೋಗುತ್ತಿವೆ.

ಗುಡಿಸಿಲುಗಳ ಜೊತೆಗೆ ಜನರೂ ಒಂದೇ ಸಮನೆ ಉರಿಯುತ್ತ ಕರಕಲು ವಾಸನೆ ಏಳತೊಡಗಿತು. ಜನ ಇರುವೆಗಳಂತೆ ಆಕ್ರಂದಿಸುತ್ತ ದಿಕ್ಕು ತೋಚದೆ ದೂರ ದೂರಕ್ಕೆ ತಮ್ಮ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಓಡುತ್ತಿದ್ದಾರೆ. ಒಂದೇ ವಾಕ್ಯದಲ್ಲಿ ಹೇಳುವುದಾದರೆ ಧರೆಯೆ ಹೊತ್ತಿ ಉರಿಯುತ್ತಿದೆ.

ಗೋಪುರದಿಂದ ಐದಾರು ಕಿಲೋಮೀಟರುಗಳು ಮೇಲೆ ಆಕಾಶದಲ್ಲಿ ಹಾರಾಡುವ ವಿಮಾನಗಳು ಏನೂ ಮಾಡಲಾಗದೆ ಸುತ್ತಲು ಗಿರಕಿ ಹೊಡೆಯುತ್ತಿವೆ. ವಿಜ್ಞಾನಿಗಳು, ಅಧಿಕಾರಿಗಳು, ರಾಜಕಾರಣಿಗಳು ಏನೂ ಮಾಡಲು ತೋಚದೆ ಅಂತರಾಷ್ಟ್ರೀಯ ಕೆಲವು ಏಜನ್ಸಿಗಳಿಗೆ ವಿಷಯ ತಿಳಿಸಿ ಏನು ಮಾಡಬೇಕೆಂದು ಸಲಹೆಗಳನ್ನು ಕೇಳುತ್ತಿದ್ದಾರೆ. ಎಲ್ಲರದೂ ಒಂದೇ ಪ್ರಶ್ನೆ

ಗೋಪುರದ ಒಳಗೆ ಕೆಲವು ನೂರು ಜನರು ಸಾವನ್ನು ಅಪ್ಪಿದರೆ, ಸುತ್ತಲಿನ ಪ್ರದೇಶಗಳಲ್ಲಿ ಸಾವಿರಾರು ಜನರು ಬೆಂಕಿಗೆ ತುತ್ತಾಗುತ್ತಿರುವುದು ವಿಷಾದಕರ ವಿಷಯವಾಗಿದೆ. ಎಲ್ಲವೂ ವಿಜ್ಞಾನದ ಕೊಡುಗೆ, ಮಾನವ ಮಿದುಳಿನ ವೈಜ್ಞಾನಿಕ ಅವಿಷ್ಕಾರಗಳ ಫಲಿತಾಂಶ.

ಕೆಲವು ಏಜನ್ಸಿಗಳು, ಹತ್ತಿರ ಹಾರಾಡುತ್ತಿರುವ ಮೋಡಗಳ ಮೇಲೆ ಸಿಲ್ವರ್ ನೈಟ್ರೇಟ್ ಪುಡಿಯನ್ನು ಸಿಂಪಡಿಸುವಂತೆ ಹೇಳಿದರೆ, ಇನ್ನೂ ಕೆಲವು ಏಜನ್ಸಿಗಳು, ಕಾರ್ಬನ್ ಡೈಯಾಕ್ಸೈಡ್ ಪುಡಿಯನ್ನು ತುರ್ತಾಗಿ ಗೋಪುರದ ಮೇಲೆ ಚೆಲ್ಲಿ ಎಂದವು. ಗೋಪುರದ ಕಡೆಗೆ ಮೋಡಗಳನ್ನು ಚಲಿಸಿ ಅವುಗಳ ಮೇಲೆ ಸಿಲ್ವರ್ ನೈಟ್ರೇಟ್ ಚೆಲ್ಲುವುದು ಹೇಗೆ? ಬೇರೆ ಏನೂ ದಾರಿ ಇಲ್ಲವೆ...? ಯೋಚಿಸುವುದಕ್ಕೆ ಸಮಯ ಎಲ್ಲಿದೆ?

ಉರಿಯುತ್ತಿರುವ ಗೋಪುರದ ಹತ್ತಿರಕ್ಕೆ ಹೋಗುವುದೇ ದುಸ್ಸಾಹಸವಾಗಿದೆ. ನೋಡುನೋಡುತ್ತಿದ್ದಂತೆ ಗೋಪುರ ಕುಸಿದು ಬಿದ್ದಿತು. ಗೋಪುರದ ಕೆಳಗಿದ್ದ ಕಟ್ಟಡಗಳು ಉರಿದು ಬೂದಿಯಾಗಿ ಹೋದವು. ಒಳಗೆ ನೂರಾರು ಜನರು ಅಸುನೀಗಿದರೆ, ಹೊರಗೆ ಸಾವಿರಾರು ಜನರು ಸತ್ತುಹೋದರು. ಸುತ್ತಲಿದ್ದ ನೂರಾರು ಸ್ಲಮ್ಮುಗಳು, ಹಳ್ಳಿಗಳು, ಪಟ್ಟಣಗಳು ಉರಿದುಹೋದವು. ಎಲ್ಲೆಲ್ಲೂ ಆಕ್ರಂದನ. ಪ್ರಪಂಚದ ಇತಿಹಾಸದಲ್ಲಿ ಇದುವರೆಗೂ ನಡೆದ ಭೀಕರಗಳಲ್ಲಿ ಅತಿ ದೊಡ್ಡ ಅನಾಹುತ ಇದಾಗಿತ್ತು. ಗೋಪುರದ ಸುತ್ತಲೂ ಸುಮಾರು ಆರು ಕಿಲೋಮೀಟರುಗಳ ಅಳತೆಯಲ್ಲಿ ಎಲ್ಲಿ ನೋಡಿದರೂ ಮನುಷ್ಯರು ಕರಕಲಾದ ವಾಸನೆ ಬರುತ್ತಿತ್ತು. ಸುಮಾರು ಇಪ್ಪತ್ತು ಲಕ್ಷ ಜನರು ತಮ್ಮ ಕಣ್ಣುಗಳನ್ನು ಕೈಕಾಲುಗಳನ್ನು ಚರ್ಮಗಳನ್ನು ಸುಟ್ಟುಕೊಂಡಿದ್ದರು. ಎಲ್ಲೆಲ್ಲೂ ಹೆಣಗಳು. ಯಾರೂ ಏನೂ ಮಾಡಲಾಗದೆ ಹೋದರು.



ಕ್ರಿ.ಶ.2001 ನೇ ಸೆಪ್ಟೆಂಬರ್ 11 ರಂದು ಅಮೇರಿಕಾದ ಡಬ್ಲೂಟಿಒ ಗೋಪುರಗಳಿಗೆ ಬಿನ್ ಲ್ಯಾಡನ್ ಎಂಬ ಉಗ್ರವಾದಿ ಗುಂಪಿನವರು ಎರಡು ವಿಮಾನಗಳನ್ನು ತಂದು ಡಿಕ್ಕಿ ಹೊಡೆಸಿ ಎರಡು ಗೋಪುರಗಳನ್ನು ಉರಿಸಿ ಕೆಳಕ್ಕೆ ಕೆಡವಿದ್ದರು. ಆದರೆ ಅಲ್ಲಿ ಕೇವಲ 700 ಜನರು ಮಾತ್ರ ಪ್ರಾಣವನ್ನು ಕಳೆದುಕೊಂಡಿದ್ದರು. ಇಲ್ಲಿ ಗೋಪುರದ ಒಳಗೆ 723 ಜನರು ಅಸು ನೀಗಿದ್ದರೆ, ಹೊರಗೆ 20 ಸಾವಿರ ಜನರು ಸತ್ತು ಇಪ್ಪತ್ತು ಲಕ್ಷ ಜನರು ಅಂಗಹೀನರಾಗಿದ್ದರ್ರು. ಯುಎಸ್ಐ ಕೋಟ್ಯಾಂತರ ರೂಪಾಯಿಗಳ ನಷ್ಟ ಅನುಭವಿಸಿತ್ತು. ಆದರೆ ಬೆನ್ ನಗರದ ಎ ಮತ್ತು ಬಿ ವಲಯಗಳಗೆ ಯಾವುದೇ ತೊಂದರೆ ಆಗಲಿಲ್ಲ. ಆದರೂ ಬೆನ್ ನಗರದ ಎರಡು ದಿಕ್ಕುಗಳಲ್ಲಿ ಅದೇ ರೀತಿಯ ಎರಡು ಸೌರಶಕ್ತಿ ಗೋಪುರಗಳಿದ್ದು ವಿದ್ಯುತ್ತಿಗೆ ಏನೂ ತೊಂದರೆಯಾಗಲಿಲ್ಲ.

ಎ, ಬಿ ಮತ್ತು ಸಿ ವಲಯಗಳಲ್ಲಿ ಎರಡು ರೀತಿಯ ವ್ಯವಸ್ಥೆಗಳಿವೆ. ಒಂದು, ಸೌರಶಕ್ತಿಯ ಗೋಪುರಗಳಿಂದ ಸರಬರಾಜಾಗುವ ವಿದ್ಯುತ್ತು, ಎರಡು, ಮನೆಯಲ್ಲೆ ಸೌರ ಬ್ಯಾಟರಿಗಳನ್ನು ಅಳವಡಿಸಿರುವುದು. ಸಿ ಮತ್ತು ಕೆಳಗಿನ ವಲಯಗಳಲ್ಲಿ ಇಂದಿಗೂ ಗಾಳಿಚಕ್ರಗಳು ಮತ್ತು ನೀರಿನ ಸ್ಥಾವರಗಳ ಮುಖಾಂತರ ನಿದ್ಯುತ್ತನ್ನು ಪಡೆಯುವ ವ್ಯವಸ್ಥೆ ಇದೆ.



ತೇಜಸ್ ಮತ್ತು ಶಮಿ ಪ್ಲ್ಯಾಸ್ಮ ಪರದೆಯ ಮೂಲಕ ವೈದ್ಯರ ಜೊತೆಗೆ ಸಂಭಾಷಿಸುತ್ತಿದ್ದಾರೆ. ವೈದ್ಯರು ಎಲ್ಲಾ ರೀತಿಯ ಮಾಹಿತಿಯನ್ನು ಪಡೆದುಕೊಂಡ ಮೇಲೆ ತಮ್ಮ ಆಸ್ಪತ್ರೆಗೆ ಬರಲು ಸೂಚಿಸಿದರು. ತಡ ಮಾಡುವುದರಲ್ಲಿ ಯಾವ ಅರ್ಥವೂ ಇಲ್ಲ ಎಂದು ಅದೇ ದಿನ ಶಮಿ ಮತ್ತು ತೇಜಸ್ ವೈದ್ಯರ ಸಲಹೆಯಂತೆ ಆಸ್ಪತ್ರೆ ತಲುಪಿ ತಪಾಸಣೆ ನಡೆಸಿ ಸಾಯಂಕಾಲ ರಿಜಲ್ಟ್ ಕೊಡುವುದಾಗಿ ತಿಳಿಸಿದರು.

ಶಮಿ ಯಾಕಾದರೂ ಕನ್‌ಸೀವ್ ಆಗುತ್ತಿಲ್ಲ ಎನ್ನುವುದು ಅವರ ಸಮಸ್ಯೆಯಾಗಿತ್ತು. ಒಂದು ವರ್ಷದಿಂದ ಅವರಿಬ್ಬರು ಯಾವುದೇ ಗರ್ಭ ನಿರೋಧಕ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಿಲ್ಲ. ಮತ್ತೆ ಶಮಿ ಯಾಕೆ ಗರ್ಭ ದರಿಸಿಲ್ಲ. ಇಬ್ಬರಲ್ಲಿ ಯಾರಿಗೆ ತೊಂದರೆ ಇದೆ. ಮದುವೆಯಾಗುವುದಕ್ಕಿಂತ ಮುಂಚೆ ಆರೋಗ್ಯ ತಪಾಸಣೆಯಲ್ಲಿ ಅವರಿಬ್ಬರಿಗೂ ಯಾವುದೇ ನ್ಯೂನ್ಯತೆ ಇರುವುದಾಗಿ ಯಾವ ವೈದ್ಯರು ತಿಳಿಸಿರಲಿಲ್ಲ. ಯಾವುದೂ ಸಾಯಂಕಾಲ ಗೊತ್ತಾಗಿ ಬಿಡುತ್ತದೆ.

ಸಾಯಂಕಾಲ ವೈದ್ಯರು, ಶಮಿ ಗರ್ಭ ಧರಿಸಿರುವುದಾಗಿ ತಿಳಿಸಿದರು. ಶಮಿ ಮತ್ತು ತೇಜಸ್‌ಗೆ ಎಲ್ಲಿಲ್ಲದ ಖುಷಿಯಾಯಿತು. ಒಬ್ಬರನ್ನೊಬ್ಬರು ತಬ್ಬಿಕೊಂಡು ಮುತ್ತುಗಳ ಮಳೆಗರೆದರು. ವಿಷಯವನ್ನು ತಕ್ಷಣವೇ ಎರಡು ಕುಟುಂಬಗಳಿಗೆ ರವಾನಿಸಲಾಯಿತು. ಶಮಿ ಮತ್ತು ತೇಜಸ್ ತಂದೆ ತಾಯಿಯರಿಗೆ ವಿಷಯ ತಿಳಿಸಿದ್ದೆ ಎಲ್ಲರೂ ಧಾವಿಸಿ ಬಂದು ಶುಭ ಹಾರೈಸಿದರು.

ಶಮಿ ಮನೆಯಲ್ಲಿ ಆ ರಾತ್ರಿ ಆರು ಜನರ ನಡುವೆ ಇನ್ನೊಂದು ಸಮಾರಂಭ ನಡೆದು ಹೋಯಿತು. ಶಮಿ ಮುಂದಿನ ಹತ್ತು ತಿಂಗಳು ಹೇಗಿರಬೇಕು...? ಏನೇನು ತಿನ್ನಬೇಕು? ಎನ್ನುವ ವಿವರಗಳನ್ನು ಆಕೆಯ ತಂದೆ ತಾಯಿ ಮತ್ತು ಅತ್ತೆ ಮಾವ ಶಮಿಗೆ ತಿಳಿಸಿ ಅವರವರ ಮನೆಗಳ ಕಡೆಗೆ ಹೊರಟು ಹೋದರು.



ಪ್ರಸ್ತುತ ಬೆನ್ ನಗರದಲ್ಲಿರುವ ಹೆಚ್ಚು ಜನರು ಹೆಣ್ಣು ಗಂಡೆನ್ನದೆ ನಾಲ್ಕಾರು ಮದುವೆಗಳನ್ನು ಮಾಡಿಕೊಂಡಿರುವವರೆ. ಮದುವೆ ಮಾಡಿಕೊಳ್ಳುವ ಮುನ್ನವೆ ಕೆಲವು ತಿಂಗಳು ಒಟ್ಟಾಗಿ ಇದ್ದು ಇಬ್ಬರಿಗೂ ಸರಿ ಹೊಂದದಿದ್ದರೆ ಬೇರೆಯಾಗಿ ಬಿಡುತ್ತಾರೆ ಅಥವಾ ಮದುವೆಗೆ ಮುಂಚೆಯೆ ಯಾವುದೇ ರೀತಿಯ ಅಡಚಣೆಗಳು ಬಂದರೂ ಅದಕ್ಕೆ ಏನೇನು ಮಾಡಬೇಕು ಎನ್ನುವುದನ್ನು ನಿರ್ಧರಿಸಿ ಬಿಟ್ಟಿರುತ್ತಾರೆ. ಅದು ಆರ್ಥಿಕ ವಿಷಯವಾಗಿರ ಬಹುದು...! ಮಕ್ಕಳ ವಿಷಯವಾಗಿರಬಹುದು...! ಸೆಕ್ಸ್ ವಿಷಯವಾಗಿರಬಹುದು...! ಮನೆಯಲ್ಲಿ ನಡೆಯುವ ಇತರೆ ಯಾವುದೇ ವ್ಯವಹಾರಗಳಾಗಿರಬಹುದು...! ಸರಿ ಹೊಂದದೇ ಇದ್ದರೆ ಕಾನೂನಿನಂತೆ ವಿವಾಹ ವಿಚ್ಛೇದನ ಪಡೆದುಕೊಳ್ಳುತ್ತಾರೆ.

ಕೆಲವರು ಮಾತ್ರ ಇಂತಹ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ಪ್ರೀತಿಯಿಂದ ಅನ್ಯೋನ್ಯದಿಂದ ಕೊನೆಯವರೆಗೂ ಕೂಡಿ ಬಾಳುತ್ತೇವೆ ಎನ್ನುವ ವಿಶ್ವಾಸದಿಂದ ಮದುವೆಯಾಗಿರುತ್ತಾರೆ. ಅಂತಹವರಲ್ಲಿ ತೇಜಸ್ ಶಮಿ ಕೂಡ ಒಂದು ಜೋಡಿ, ಐಯಾನ್ ಅಶ್ವಿನಿ ಕೂಡ. ಆದರೆ ಮುಂದಿನ ದಿನಗಳಲ್ಲಿ ಏನಾಗುತ್ತದೆ ಎನ್ನುವುದು ಯಾರಿಗೂ ಗೊತ್ತಿರಲಿಲ್ಲ.

ಶಮಿಯ ತಂದೆ ನಾಲ್ಕು ಮಹಿಳೆಯರನ್ನು ಬದಲಾಯಿಸಿ ಕೊನೆಗೆ ಶಮಿಯ ತಾಯಿಯನ್ನು ಕೈಹಿಡಿದಿದ್ದಾರೆ. ಈ ನಡುವೆ ಶಮಿ ತಾಯಿ ಕೂಡ ಇಬ್ಬರು ಗಂಡಸರನ್ನು ಬದಲಾಯಿಸಿದ್ದಳು. ತೇಜಸ್ ತಂದೆಯ ಜೊತೆಗಿರುವುದು ಮೂರನೆಯ ಪತ್ನಿ. ಐಯಾನ್ ತಂದೆ ಮತ್ತು ತಾಯಿ ಶ್ರೀರಾಮನಂತೆ ಒಂದೇ ಮಾತು ಒಂದೇ ಬಾಣ ಎಂದು ಮೊದಲಿನಿಂದಲೂ ಹಾಗೆ ಇದ್ದಾರೆ. ಆದರೆ ಅವರಿಗೆ ಇಷ್ಟವಾದ ಗೆಳೆಯ ಗೆಳತಿಯರ ಜೊತೆಗೆ ಕೂಡುವುದು, ಮಲಗುವುದನ್ನು ಇಬ್ಬರೂ ಎಷ್ಟೋ ವರ್ಷಗಳಿಂದ ನಡೆಸಿಕೊಂಡು ಬಂದಿದ್ದಾರೆ. ಅವರ ನಡುವೆ ಇದುವರೆಗೂ ಯಾವುದೇ ಭಿನ್ನಾಭಿಪ್ರಾಯಗಳು ಬಂದಿಲ್ಲ. ಅಶ್ವಿನಿ ತಂದೆ ಎರಡನೆಯ ಪತ್ನಿಯ ಜೊತೆಗಿದ್ದಾರೆ. ಮೊದಲನೆಯ ಪತಿ ಬೇರೊಬ್ಬಳ ಜೊತೆ ಇದ್ದಾರೆ.

ಇಂತಹ ಸಂಬಂಧಗಳ ನಡುವೆ ಹುಟ್ಟಿಸಿದ ಮಕ್ಕಳು, ಯಾರ ಮಕ್ಕಳು ಎನ್ನುವ ಪ್ರಶ್ನೆಗಳು ಎದ್ದಾಗ ಅವರ ಡಿಎನ್‌ಎ ಪರೀಕ್ಷೆಗೆ ಒಳಪಡಿಸಿ ಮಕ್ಕಳೆ ತಮ್ಮ ತಂದೆ ತಾಯಿ ಯಾರು ಎನ್ನುವುದನ್ನು ನಿರ್ಧರಿಸಿಕೊಳ್ಳುತ್ತಾರೆ. ಅವರಿಗೆ ಹುಟ್ಟಿದ ಮಕ್ಕಳು ತಂದೆ ಅಥವಾ ತಾಯಿಗೆ

ಹೋಲುವಂತಿದ್ದರೆ ಅಂತಹ ಪ್ರಶ್ನೆಗಳು ಬರುವುದಿಲ್ಲ. ಆದರೆ ಇಬ್ಬರ ಚಹರೆಗಳು ಹೋಲಿಕೆಯಾಗದಿದ್ದಲ್ಲಿ ಡಿಎನ್ಎ ಪರೀಕ್ಷೆಗೆ ಒಳಗಾಗಬೇಕಿತ್ತು.

ಇದು ಪ್ರಸ್ತುತ ದೊಡ್ಡ ಅಪರಾಧವಲ್ಲದಿದ್ದರೂ ಕೆಲವೊಮ್ಮೆ ಆಸ್ತಿ ವಿಷಯಗಳು, ಸಾಮಾಜಿಕ ಭಿನ್ನಾಭಿಪ್ರಾಯಗಳು ಬಂದಾಗ ಗರಿಗೆದರಿಕೊಳ್ಳುತ್ತಿದ್ದವು. ಮಕ್ಕಳು ಹದಿನಾಲ್ಕು ಹದಿನಾರು ವರ್ಷಗಳಾದ ನಂತರ ತಂದೆ ತಾಯಿಯನ್ನು ಬಿಟ್ಟು ಪ್ರತ್ಯೇಕವಾಗಿ ಜೀವನ ನೆಸಲು ಪ್ರಾರಂಭಿಸಿ ಬಿಡುತ್ತಿದ್ದರು. ಆಗ ಆರ್ಥಿಕ ಮುಗ್ಗಟ್ಟು ಬರುವುದರಿಂದ ತಂದೆ ತಾಯಿಯ ಆರ್ಥಿಕ ಲಾಭ ಪಡೆದುಕೊಳ್ಳಲು ತಂದೆ ತಾಯಿ ಯಾರು ಎನ್ನುವ ಪ್ರಶ್ನೆಗಳು ಬರುತ್ತಿದ್ದವು. ಅದನ್ನು ನಿವಾರಿಸಿಕೊಳ್ಳಲು ತಮ್ಮ ತಂದೆ ತಾಯಿ ಯಾರೆಂದು ಮೊದಲೆ ನಿರ್ಧರಿಸಿಕೊಂಡು ಬಿಡುತ್ತಿದ್ದರು. ಬಹಳ ಜನ ಸೆಕ್ಸ್ ಯಾರ ಜೊತೆಗೆ ಹಂಚಿಕೊಂಡರೂ ಮಕ್ಕಳನ್ನು ಮಾತ್ರ ಮಾಡಿಕೊಳ್ಳುತ್ತಿರಲಿಲ್ಲ.

ಆದರೆ ಎಲ್ಲರೂ ಒಂದು ವಿಷಯವನ್ನು ಮಾತ್ರ ಖಂಡಿತವಾಗಿ ಪಾಲಿಸುತ್ತಿದ್ದರು. ವೈದ್ಯರಿಂದ ಸೆಕ್ಸ್ ಫಿಟ್‌ನೆಸ್ ಮತ್ತು ಯಾವುದೇ ರೋಗ ಇಲ್ಲ ಎನ್ನುವ ಸರ್ಟಿಫಿಕೇಟ್ ಇದ್ದರೆ ಮಾತ್ರ ಸೆಕ್ಸ್‌ಗೆ ಮುಂದಾಗುತ್ತಿದ್ದರು. ಏಡ್ಸ್ ಎನ್ನುವ ಮಹಾರೋಗಕ್ಕೆ ಮದ್ದು ಕಂಡಿಡಿದ ಮೇಲೆ ತ್ರೀಸೆಕ್ಸ್ ಯಥಾಪ್ರಕಾರ ಮುಂದುವರಿದಿತ್ತು. ಒಂದು ಕಾಲದಲ್ಲಿ ಅಂದರೆ ಸುಮಾರು ಕ್ರಿ.ಶ. 2010ರವರೆಗೆ ಪ್ರಪಂಚದಾದ್ಯಂತ ಲಕ್ಷಾಂತರ ಜನರು ಏಡ್ಸ್‌ನಿಂದ ಮರಣ ಹೊಂದಿದ್ದರು. ಅದು ಈಗಲೂ ಹಳ್ಳಿ ಪಟ್ಟಣ ಮತ್ತು ಇನ್ನಿತರ ಪ್ರದೇಶಗಳಲ್ಲಿ ಹಾಗೆ ಉಳಿದುಕೊಂಡಿದೆ. ಇದರ ಜೊತೆಗೆ ಸಾರಸ್ ರೋಗ ಕೂಡ ಸೇರಿಕೊಂಡಿದೆ.

ಏಡ್ಸ್‌ಗೆ ಔಷಧಿಯನ್ನು ಕಂಡು ಹಿಡಿದ ಮೇಲೆ ಅದು ಭಾರಿ ದುಬಾರಿಯಾದ್ದರಿಂದ ಎಲ್ಲರೂ ಔಷಧಿ ಪಡೆಯಲು ಆಗುತ್ತಿಲ್ಲ. ಪ್ರಪಂಚದಾದ್ಯಂತ ಏಡ್ಸ್‌ಗೆ ತುತ್ತಾಗಿರುವವರು ಇದ್ದು ಅದರಲ್ಲೂ ಹೆಚ್ಚಾಗಿ ಬಡ ದೇಶಗಳ ಜನರು ಇನ್ನೂ ಸಾಯುತ್ತಲೆ ಇದ್ದಾರೆ. ಅಂತಹವರನ್ನು ಕೆಲವು ಐಶ್ವರ್ಯ ದೇಶಗಳು ಗುರುತಿಸಿ ಅವರನ್ನು ಪ್ರತ್ಯೇಕವಾಗಿ ಇರಿಸಲಾಗಿದೆ. ಅವರು ಎಲ್ಲಿಯೂ ಓಡಾಡದಂತೆ ನಿಷೇಧಿಸಲಾಗಿದೆ.

ಪ್ರಪಂಚದಾದ್ಯಂತ ಮಗು ಹುಟ್ಟಿದ ತಕ್ಷಣವೆ ಏಡ್ಸ್ ತಪಾಸಣೆಯನ್ನು ನಡೆಸಲಾಗುತ್ತಿದೆ. ಏಡ್ಸ್ ಇದ್ದರೆ ಅಂತಹ ಮಗುವನ್ನು ಏಡ್ಸ್ ಕ್ಯಾಂಪ್‌ಗಳಿಗೆ ರವಾನಿಸುತ್ತಾರೆ. ಇಲ್ಲ ಸಾಯಿಸಿಬಿಡುತ್ತಾರೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಪ್ರತಿಯೊಬ್ಬರಿಗೂ ಏಡ್ಸ್ ಮುನ್ನೆಚ್ಚರಿಕೆ ಔಷಧಿಯನ್ನು ನೀಡಿ ರೋಗವನ್ನು ನಿರ್ನಾಮ ಮಾಡಲಾಗಿದೆ. ಆದರೆ ಬಡ ದೇಶಗಳಿಗೆ ಇದು ಸಾಧ್ಯವಾಗಿಲ್ಲ.

ಪ್ರಪಂಚದ ಕೆಲವು ಸ್ವಯಂ ಸೇವಕ ಸಂಸ್ಥೆಗಳು ಏಡ್ಸ್ ರೋಗಕ್ಕೆ ಔಷಧಿಯನ್ನು ನೀಡುತ್ತ ರೋಗವನ್ನು ಕೊನೆಗಾಣಿಸಲು ಪ್ರಯತ್ನಿಸುತ್ತಿವೆ. ಮುಖ್ಯ ತೊಂದರೆ ಎಂದರೆ ಏಡ್ಸ್ ರೋಗ ಕೆಲವು ಪ್ರಾಣಿಗಳಲ್ಲಿ ಕಾಣಿಸಿಕೊಂಡು ಅದನ್ನು ಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗದೆ

ಹೋಗಿದೆ. ಮುಖ್ಯವಾಗಿ ಮಂಗ, ಇಲಿ, ನಾಯಿ, ಮತ್ತು ಬೆಕ್ಕುಗಳಲ್ಲಿ ಎಚ್‌ಐವಿ ರೋಗಾಣುಗಳು ಇರುವುದು. ಇದರ ಜೊತೆಗೆ ಕೆಲವು ಸೊಳ್ಳೆಗಳಿಂದಲೂ ರೋಗ ಹರಡುತ್ತಿವೆ ಎಂದು ತಿಳಿದುಬಂದಿದೆ.

ಬೆನ್‌ನಗರದ ಎ ಮತ್ತು ಬಿ ವಲಯಗಳಲ್ಲಿ ಈಗ ಮಂಗ, ಇಲಿ, ನಾಯಿ ಮತ್ತು ಬೆಕ್ಕುಗಳನ್ನು ಪೂರ್ಣವಾಗಿ ನಿಷೇಧಿಸಲಾಗಿದೆ. ಆದರೆ ಅವು ಕೆಲವು ವಲಯಗಳು ಮತ್ತು ಹಳ್ಳಿ , ಪಟ್ಟಣ ಪ್ರದೇಶಗಳಲ್ಲಿ ಇನ್ನೂ ಅಚ್ಚುಮೆಚ್ಚಿನ ಪ್ರಾಣಿಗಳಾಗಿವೆ. ಸಾಂಕ್ರಾಮಿಕ ರೋಗವಲ್ಲದಿದ್ದರೂ ಗುಣಪಡಿಸಲಾರದ ರೋಗವೆಂದರೆ ಜೀನ್ಸ್ ಡಿಗ್ರಿಡೇಷನ್ ಕಾಯಿಲೆ. ಇದಕ್ಕೂ ಔಷಧಿಯನ್ನು ಕೆಲವೆ ವರ್ಷಗಳಲ್ಲಿ ಕಂಡು ಹಿಡಿಯುವುದಾಗಿ ವಿಜ್ಞಾನಿಗಳು ಹೇಳಿಕೆಯನ್ನು ನೀಡಿದ್ದಾರೆ.



ನೀರವ ರಾತ್ರಿ, ಸಮಯ ಒಂದು ಗಂಟೆ. ಐಯಾನ್ ಹಾಸಿಗೆ ಮೇಲೆ ಮಲಗಿ ಕೊಂಡಿದ್ದಾಳೆ. ಪಕ್ಕದಲ್ಲಿಯೆ ಅಶ್ವಿನಿ ಮಲಗಿದ್ದಾಳೆ. ಅವನ ಮಿದುಳಿನ ಯಾವುದೋ ಒಂದು ಮೂಲೆಯಲ್ಲಿ ಲವ್‌ಲೀನಾ ಬಗ್ಗೆ ತರಂಗಗಳು ಏಳುತ್ತಿವೆ. ಯಾರಾದರೂ ಒಬ್ಬರು ತಮಗೆ ಇಷ್ಟವಾದವರ ಬಗ್ಗೆ ಪದೇ ಪದೇ ಯೋಚಿಸುತ್ತಿದ್ದರೆ ಅವರ ರೂಪ, ಅವರ ಮಾತುಗಳು ಅವರ ಹಾವಭಾವ ಯಾವುದೋ ಒಂದು ರೀತಿಯಲ್ಲಿ ಕಾಡುತ್ತಿರುತ್ತದೆ.

ಅದು ಮುಖ್ಯವಾಗಿ ಕನಸಿನ ಮೂಲಕ ಹೊರಬೀಳುತ್ತದೆ. ಮನುಷ್ಯನ ಮನಸ್ಸಿನಲ್ಲಿ ಮೂಡುವ ಅನೇಕ ವಿಚಾರಗಳು ಮಿದುಳಿನ ಕೋಶಗಳಲ್ಲಿ ಏರುಪೇರಾಗಿ ಅವು ಬೇರೆ ಬೇರೆ ಸಮಯದಲ್ಲಿ, ಬೇರೆ ಬೇರೆ ರೂಪದಲ್ಲಿ ಕಾರ್ಯಗತವಾಗಿರುತ್ತವೆ. ಲವ್‌ಲೀನಾಳನ್ನು ಪ್ಲಾಸ್ಮ ಪರದೆಯ ಮೇಲೆ ನೋಡಿದ ಐಯಾನ್ ಮನಸು ಕದಡಿದ ನೀರಿನಂತೆ ಅಂದಿನಿಂದ ಇಂದಿನವರೆಗೂ ತುಳುಕಾಡುತ್ತಿದೆ.

ಇನ್ನು ಅವಳನ್ನು ನೇರವಾಗಿ ನೋಡಿದಾಗ ಏನಾಗಬಹುದು? ಕೆಲವು ಹೆಣ್ಣುಗಳು ದೂರದಿಂದ ನೋಡಲು ಬಹಳ ಸುಂದರವಾಗಿ ಕಾಣಿಸುತ್ತಾರೆ. ತೀರ ಹತ್ತಿರದಿಂದ ನೋಡಿದರೆ ಅದೇ ಮೋಹ ಉಳಿದುಕೊಳ್ಳುವುದಿಲ್ಲ. ಛೀ ಹಾಗಾಗಬಾರದು. ಅವಳು ನಿಜವಾಗಿಯೂ ಸಹಜ ಸೌಂದರ್ಯವತಿಯೆ ಆಗಿರಬೇಕು? ಅವಳನ್ನು ಒಂದು ದಿನ ಕೂಡಲೇಬೇಕು. ಐಯಾನ್ ಮಿದುಳಲ್ಲಿ ಈ ರೀತಿಯ ಆಲೋಚನೆಯ ತರಂಗಗಳು ಏಳುತ್ತಲೆ ಇವೆ.

ಭೂಮಿಗೆ ಸುಮಾರು 35 ಸಾವಿರ ಕಿ.ಮೀ.ಗಳ ದೂರದಲ್ಲಿ ಒಂದು ಸ್ಪೇಸ್ ಕಾಲೋನಿ ಇದೆ. ಆ ಕಾಲೋನಿಯ ಒಂದು ಕೋಣೆಯಲ್ಲಿ ಲವ್‌ಲೀನಾ ಒಬ್ಬಳೆ ಕುಳಿತಿದ್ದಾಳೆ. ಅವಳ ಕೈಯಲ್ಲಿ ಒಂದು ಪುಟ್ಟ ಯಂತ್ರವಿದೆ. ಕೋಣೆ ಪೂರ್ಣವಾಗಿ ಹವಾನಿಯಂತ್ರಣ ವಿಲ್ಲದಿದ್ದರೂ ಉಸಿರಾಡಲು ಎಷ್ಟು ಬೇಕೊ ಅಷ್ಟು ಆಮ್ಲಜನಕವಿದೆ.

ಅವಳು ಎಷ್ಟೇ ಪ್ರಯತ್ನಿಸಿದರೂ ಆ ಪುಟ್ಟ ಯಂತ್ರ ಅವಳ ಮಾತು ಕೇಳುತ್ತಿಲ್ಲ. ಆ ಯಂತ್ರದ ಮೂಲಕ ಅವಳು ಯಾರನ್ನೋ ಸಂಪರ್ಕಿಸುತ್ತಲೆ ಇದ್ದಾಳೆ. ನಡುನಡುವೆ ಲವ್‌ಲೀನಾ ಕಿಟಕಿಯಿಂದ ಹೊರಕ್ಕೆ ನೋಡುತ್ತಿದ್ದಾಳೆ. ಯಾವ ಕಡೆ ನೋಡಿದರೂ ಮಿನುಗುತ್ತಿರುವ ಬಣ್ಣ ಬಣ್ಣದ ನಕ್ಷತ್ರಗಳೊ ನಕ್ಷತ್ರಗಳು. ಹತ್ತಿರದಲ್ಲಿ ದೂರ ದೂರದಲ್ಲಿ ಸಣ್ಣದಾಗಿ, ದೊಡ್ಡದಾಗಿ ಬಣ್ಣ ಬಣ್ಣದಾಗಿ ತುಂಟು ನಗೆ ಚೆಲ್ಲುತ್ತಿರುವ ಬರಿ ನಕ್ಷತ್ರ ಲೋಕ. ಮೇಲೆ, ಕೆಳಗೆ, ಹತ್ತಿರದಲ್ಲಿ ದೂರದಲ್ಲಿ ಹಾರಿ ಹೋಗುತ್ತಿರುವ ನಕ್ಷತ್ರಗಳು, ಟೆಲೆಸ್ಕೋಪ್‌ನಲ್ಲಿ ನೋಡಿ ನೋಡಿ ಅವಳಿಗೆ ಸಾಕಾಗಿ ಹೋಗಿದೆ. ಈ ನಕ್ಷತ್ರಗಳು ನಿಹಾರಿಕೆ ಪುಂಜಗಳು... ಪ್ರಪಂಚ ಎಂದರೆ ಏನು? ಎಲ್ಲಿ ಆರಂಭವಾಗುತ್ತದೆ ? ಎಲ್ಲಿ ಅಂತ್ಯವಾಗುತ್ತದೆ ? ನೋಡುತ್ತ ನೋಡುತ್ತ ಅವಳಿಗೆ ಮಾತುಗಳೆ ಬರಲಿಲ್ಲ.

ಬ್ರಹ್ಮಾಂಡ ಎಲ್ಲೆ ಇಲ್ಲಿದ್ದು. 15 ಬಿಲಿಯನ್ ವರ್ಷಗಳ ಹಿಂದೆ ಬಿಗ್‌ಬ್ಯಾಂಗ್ ಮಹಾಗಂಟೆ ಭಾಜಿಸಿ ವಿಶ್ವ ಸೃಷ್ಟಿಯಾಯಿತು. ಮೊದಲಿಗೆ ವಿಶ್ವ ಬರೀ ಜಲಜನಕದ ಅನಿಲರಾಶಿಯಾಗಿತ್ತು. ಅನಂತರ ಜಲಜನಕ, ಹೀಲಿಯಂ ಅನಿಲವಾಗಿ ಪರಿವರ್ತನೆ ಯಾಯಿತು. ಇದರಲ್ಲಿ ಪ್ರೋಟಾನ್, ನ್ಯೂಟ್ರಾನ್ ಮತ್ತು ಎಲೆಕ್ಟ್ರಾನ್ ಅಣುಗಳಿದ್ದವು. ಮುಂದೆ ಕೋಟ್ಯಾಂತರ ಆಕಾಶಗಂಗೆಗಳ ಸೃಷ್ಟಿಯಾದವು. ಅವುಗಳಲ್ಲಿ ಬಿಲಿಯಾಂತರ ನಕ್ಷತ್ರಗಳು ಕಾಣಿಸಿಕೊಂಡವು.

ನಕ್ಷತ್ರಗಳಿಂದ ಹೊರಸೂಸುವ ಬೆಳಕಿನ ಕಿರಣಗಳು ಒಂದು ಸೆಕೆಂಡಿಗೆ ಮೂರು ಲಕ್ಷ ಕಿ.ಮೀಟರುಗಳು ವೇಗದಲ್ಲಿ ಧಾವಿಸುತ್ತಿವೆ. ಹೀಗೆ ಕಿರಣಗಳು ಒಂದು ವರ್ಷ ನಿರಂತರವಾಗಿ ಧಾವಿಸಿದರೆ ಒಂದು ಜ್ಯೋತೀರ್ವರ್ಶ ಎನ್ನುತ್ತಾರೆ. ನಕ್ಷತ್ರಗಳ ಜೊತೆಗೆ ಗ್ರಹಗಳು, ಕ್ಷುದ್ರ ಗ್ರಹಗಳು, ಉಪಗ್ರಹಗಳು, ಧೂಮಕೇತುಗಳು, ಉಲ್ಕೆಗಳು ಸೃಷ್ಟಿಯಾದವು. ಮೊದಲಿಗೆ ಭೂಮಿ ವಿಶ್ವದ ಮಧ್ಯದಲ್ಲಿದೆ ಎಂದು ಅನಂತರ ಸೂರ್ಯ, ಆಕಾಶಗಂಗೆ ಮಧ್ಯದಲ್ಲಿದೆ ಎಂದು ತಿಳಿದುಕೊಳ್ಳಲಾಯಿತು. ಪ್ರಸ್ತುತ ವಿಶ್ವ ಬಂಟಿಯಲ್ಲಿ ನೂರಾರು ವಿಶ್ವಗಳನ್ನೊಳಗೊಂಡ ಒಂದು ಸೂಪರ್ ಬ್ರಹ್ಮಾಂಡ ಇರುವುದಾಗಿ ತಿಳಿದುಬಂದಿದೆ.

ಲಿವ್‌ಲೀನಾಗೆ ದೂರದಲ್ಲಿ ಕ್ಷೀಣ ನಕ್ಷತ್ರ ಕಣಗಳುಳ್ಳ ಅನಿಲ ಮತ್ತು ಧೂಳಿನ ರಾಶಿರಾಶಿ ನೆಬ್ಯೂಲಾಗಳು ಕಾಣಿಸುತ್ತಿದ್ದವು. ದೂರದರ್ಶಕದಿಂದ ನೆಬ್ಯೂಲಾಗಳಲ್ಲಿ ವೀಕ್ಷಿಸಿದಾಗ ಆಗಾಧ ಕಪ್ಪು ಮತ್ತು ಬಿಳಿಯ ಕಲೆಗಳು ಕಾಣಿಸುತ್ತಿದ್ದವು.

ಅವಳ ಅನುಭವಗಳನ್ನು ಯಾರಿಗೆ ಹೇಳುವುದು? ತನ್ನ ಜೀವನದಲ್ಲಿ ಮಹತ್ವವಾದುದನ್ನು ಸಾಧಿಸಿ ತನಗೆ ತಾನೇ ಮೈಮರೆತು ಹೋಗಿದ್ದಾಳೆ. ಅಂತರಿಕ್ಷದಲ್ಲಿ ಒಂಟಿಯಾಗಿ ಒಬ್ಬಳೇ ಕುಳಿತಿದ್ದಾಳೆ. ಹಗಲು ರಾತ್ರಿ ಬೇಧವಿಲ್ಲದೆ ಆಕಾಶದಲ್ಲಿ ಒಬ್ಬಳೆ ತೇಲಾಡುತ್ತಿದ್ದಾಳೆ.

ಕೈಯಲ್ಲಿದ್ದ ಪುಟ್ಟ ಯಂತ್ರದ ಕಡೆಗೆ ಮತ್ತೆ ತೀಕ್ಷ್ಣವಾಗಿ ನೋಡಿದಳು. ಪಾಪ ಅದು ತಾನೆ

ಏನು ಮಾಡಲು ಸಾಧ್ಯ? ವಿಸ್ಮಯ ಜಗತ್ತಿನಲ್ಲಿ ವಿಜ್ಞಾನ ಎಷ್ಟೋ ಮುಂದುವರಿದಿದ್ದರೂ ಇನ್ನೂ ಏನೇನು ಸಾಲದು... ಇದ್ದಕ್ಕಿದ್ದಾಗೆ ಆ ಪುಟ್ಟ ಯಂತ್ರದಲ್ಲಿ ಏನೋ ಬದಲಾವಣೆ ಕಾಣಿಸಿಕೊಂಡಿತು. ಮಿಂಚು ಹುಳುವಿನಂತೆ ಬೆಳಕನ್ನು ಚೆಲ್ಲುತ್ತ ಸಣ್ಣದಾಗಿ ಸದ್ದು ಮಾಡತೊಡಗಿತು.

ಆ ಪುಟ್ಟ ಯಂತ್ರದ ಹೆಸರು ಹ್ಯಾಮ್ ವೈಯರ್‌ಲೆಸ್ ಸೆಟ್. ಹವ್ಯಾಸಿ ರೇಡಿಯೊ ಸಂಪರ್ಕ ಸಾಧಿಸುವ ಯಂತ್ರ. ಇದು ಕೇವಲ ತರಂಗಗಳನ್ನು ಚೆಲ್ಲಿ ಸಂಪರ್ಕವನ್ನು ಬೆಳೆಸುವ ಯಂತ್ರ, ಸುಮಾರು 60 ನಿಮಿಷಗಳಿಂದ ಲವ್‌ಲೀನಾ ಈ ಪುಟ್ಟ ಯಂತ್ರದ ಮೂಲಕ ಐಯಾನ್‌ನನ್ನು ಸಂಪರ್ಕಿಸಲು ಪ್ರಯತ್ನಿಸುತ್ತಿದ್ದಳು.

ಐಯಾನ್ ಪಕ್ಕದಲ್ಲಿದ್ದ ಯಂತ್ರ ಹೃದಯ ಚಲನಗೊಂಡಂತೆ ಪಿಸುಗುಟ್ಟತೊಡಗಿತು. ಐಯಾನ್ ಕಿವಿಗಳಲ್ಲಿ ಯಾರೋ ಪಿಸುಗುಟ್ಟಿದ ಸದ್ದು, ದಿಢೀರನೆ ಎದ್ದು ಕುಳಿತುಕೊಂಡು ಸುತ್ತಲೂ ನೋಡಿದ.

ಹ್ಯಾಮ್ ಸೆಟ್ ಸದ್ದು ಮಾಡುತ್ತಿದೆ...?

ಈ ಹೊತ್ತಿನಲ್ಲಿ ಯಾವ ಮೂಲೆಯಿಂದಲೋ ಯಾವ ನಿಶಾಸುರ ಹ್ಯಾಮ್ ಸದಸ್ಯನೋ? ಐಯಾನ್ ಯಂತ್ರವನ್ನು ಕೈಗೆ ತೆಗೆದುಕೊಂಡು ಅಶ್ವಿನಿ ಕಡೆಗೆ ನೋಡುತ್ತ ಹಾಲ್‌ಗೆ ನಡೆದುಬಂದ. ಅನಂತರ ಸರಿಯಾಗಿ ಕೇಳಿಸದೆ ಮನೆಯ ಟೇರೇಸಿನ ಮೇಲಕ್ಕೆ ನಡೆದ. ನೀರವ ರಾತ್ರಿ, ನಕ್ಷತ್ರಗಳೇ ತುಂಬಿದ ಆಕಾಶ.

''ಹಲೋ ಹಲೋ...'' ಎಂದ. ಎರಡೇ ಪದಗಳು ಭೂಮಿಯಿಂದ 35 ಸಾವಿರ ಕಿ.ಮೀ. ದೂರದ ಸ್ಪೇಸ್ ಕಾಲೋನಿಯಲ್ಲಿ ಕುಳಿತಿರುವ ಪುಟ್ಟ ಯಂತ್ರದ ಮುಖಾಂತರ ಲವ್‌ಲೀನಾ ಕಿವಿಗೆ ಮುಟ್ಟಿದವು ''ಎಸ್... ದಿಸ್... ಈಸ್... ಐಯಾನ್...'' ಹೃದಯದ ಮೂಲಕ ಹೇಳಿಕೊಂಡಂತೆ ಹೇಳಿದ.

''ಹಲೋ... ಹಲೋ ನಾನ್ ಯಾರು...? ಹೇಳು?'' ಎಂದಳು ಲವ್‌ಲೀನಾ.

ಹ್ಯಾಮ್ ಮುಖಾಂತರ ಸಂಪರ್ಕ ಪಡೆಯುವುದೆಂದರೆ ಪ್ರಪಂಚದ ಅದ್ಭುತಗಳಲ್ಲಿ ಒಂದು. ಈಕೆ ಯಾರು... ಅದೂ ಕನ್ನಡದಲ್ಲಿ ನಾನು ಯಾರು ಅಂತ ಕೇಳ್ತಾಳಲ್ಲ? ಆಕೆ ನನಗೆ ಗೊತ್ತಿರುವವಳೆ ಇರಬೇಕು. ಇರಲಿ ತರಂಗಗಳು ಬಹಳ ಫೀಬಲ್ ಆದ್ದರಿಂದ, ''ನನ್ಹೆಸರು ಐಯಾನ್.''

''ಐ... ಫಾರ್ ಇಂಡಿಗೊ ಓ... ಫಾರ್ ಆಕ್ಸಿಜನ್, ಎನ್... ಫಾರ್ ನೇಷನ್. ಫ್ರಮ್ ಬೆನ್ ಸಿಟಿ. ಯುಎಸ್‌ಐ'' ಎಂದ.

ಇವು ಹ್ಯಾಮ್ ಕಾರ್ಯಕರ್ತರು ಪರಸ್ಪರ ಮಾತನಾಡುವ ರೀತಿ. ಬೇರೆ ಬೇರೆ ದೇಶಗಳ

ಜನರ ಉಚ್ಚಾರಣಾ ರೀತಿಯ ವ್ಯತ್ಯಾಸದಿಂದ ಅರ್ಥ ವ್ಯತ್ಯಾಸವಾಗದಂತೆ ಮುನ್ನೆಚ್ಚರಿಕೆ ವಹಿಸುವ ವಿಧಾನ. ಲವ್‌ಲೀನಾ ಕಿಲಕಿಲನೆ ನಕ್ಕಳು.

ತುಸು ತಬ್ಬಿಬ್ಬಾದ ಐಯಾನ್ ಕೆಲವು ಕ್ಷಣಗಳು ಧ್ವನಿ ಕಳೆದುಕೊಂಡವನಂತೆ ಸುಮ್ಮನಾದ. ಮತ್ತೆ ಎಲ್ಲಿ ಸಂಪರ್ಕ ಕಡಿದು ಹೋಗುವುದೊ ಎಂದು ''ನನ್ನೆಸರು ಐಯಾನ್'' ಕೆಲವು ಕ್ಷಣಗಳು ಧ್ವನಿ ಕಳೆದುಕೊಂಡವನಂತೆ ಮತ್ತೆ ಸುಮ್ಮನಾದ. ಮತ್ತೆ ಎಲ್ಲಿ ಸಂಪರ್ಕ ಕಡಿದು ಹೋಗುವುದೊ ಎಂದು ''ನನ್ನೆಸರು ಐಯಾನ್... ಬೆನ್ ಸಿಟಿ... ಯುಎಸ್‌ಐ...'' ಎಂದ.

''ಅದು ನನ್ಗೆ ಗೊತ್ತು. ನಾನು ಯಾರೂ ಅಂತ ಹೇಳು?'' ಎಂದಿತು ಧ್ವನಿ. ಸ್ಪೇಸ್ ಕಾಲೋನಿಯಿಂದ ಭೂಮಿಗೆ ಧಾವಿಸಿ ಬರುವ ತರಂಗಗಳು ತಾವಾಗಿಯೆ ಧ್ವನಿಯನ್ನು ತುಸು ಬದಲಿಸಿಕೊಂಡಂತೆ ತೋರುವುದರ ಜೊತೆಗೆ ಲವ್‌ಲೀನಾ ಐಯಾನ್‌ಗೆ ತನ್ನ ಗುರುತು ದೊರಕಬಾರದೆಂದು ಧ್ವನಿ ಬದಲಿಸಿಕೊಂಡು ಮಾತನಾಡುತ್ತಿದ್ದಳು.

ಐಯಾನ್ ''... ಆರ್ ಯು ಶಮಿ...? ಟ್ರಾನ್ಸ್...? ಕನ್ಯಾ...'' ಹೀಗೆ ನಾಲ್ಕಾರು ಹೆಸರುಗಳನ್ನು ಹೇಳಿದ.

''ಯಾರೂ ಅಲ್ಲ. ಅವರೆಲ್ಲ ಭೂಮಿಯ ಮೇಲೆ ಇರುವವರು'' ಲವ್‌ಲೀನಾಗೆ ಗೊತ್ತಿಲ್ಲದೆ ಆ ಮಾತುಗಳು ಆತುರದಲ್ಲಿ ಅವಳ ತುಟಿಗಳಿಂದ ಹೊರ ಬಿದ್ದಿದ್ದವು. ಐಯಾನ್ ಒಮ್ಮೆಲೆ ''ಲವ್‌ಲೀನಾ...?'' ಎಂದು ಆಕಾಶದ ಕಡೆಗೆ ನೋಡಿದ. ನಕ್ಷತ್ರಗಳು ನಗುತ್ತಿವೆ. ಇವುಗಳ ನಡುವೆ ಸ್ಪೇಸ್ ಕಾಲೋನಿ ಎಲ್ಲಿದೆ...? ಎಂದುಕೊಂಡು ಐಯಾನ್' ''ಹೇಗಿದ್ದೀಯಾ ಲವ್‌ಲೀನಾ?'' ಕೇಳಿದ.

''ಚೆನ್ನಾಗಿದ್ದೀನಿ. ಆದರೆ ಅಂತರಿಕ್ಷದಲ್ಲಿ ಒಂಟಿಯಾಗಿದ್ದೀನಿ... ವಂಡರ್‌ಫುಲ್. ನಾನ್ ನೋಡ್ತಾ ಇರೋದ್ನೆಲ್ಲ ಯಾರಿಗಾದರೂ ಹೇಳ್ಕೊಬೇಕಲ್ಲ... ಥ್ಯಾಂಕ್ಸ್ ನೀನು ಸಿಕ್ಕಿದಕ್ಕೆ''

''ನೀನ್ ಹ್ಯಾಮ್ ಸದಸ್ಯ ಅಂತ ಅಂತರಿಕ್ಷದಿಂದಲೆ ನಿನ್ನನ್ನು ಸಂಪರ್ಕಿಸ್ಬೇಕು ಅಂದುಕೊಂಡೆ. ಇಲ್ಲಿಗೆ ಬಂದಾಗಿಂದ್ಲೂ ಟ್ರೈ ಮಾಡ್ತಾನೆ ಇದ್ದೀನಿ. ಈ ದಿನ ಸಂಪರ್ಕ ಸಿಕ್ಕಿತು ನೋಡು. ಇವೊತ್ತೂ ಸಂಪರ್ಕ ಸಿಕ್ಕಲಿಲ್ಲ ಅಂದಿದ್ದರೆ ಈ ಹ್ಯಾಮ್ನಾ ಭೂಮಿ ಕಡೆಗೆ ಬಿಸಾಕ್ತಾಯಿದ್ದೆ. ಸ್ಪೇಸ್ ಕಸದ ತೊಟ್ಟಿಯಲ್ಲಿ ಹೊರಟೋಗ್ತಾ ಇತ್ತು. ಥ್ಯಾಂಕ್ಸ್ ಟು ದಿಸ್ ಸ್ಮಾಲ್ ಹ್ಯಾಮ್'' ಎಂದು ಅದಕ್ಕೆ ಒಂದು ಮುತ್ತಿಟ್ಟಳು. ಅದು ಐಯಾನ್ ಕಿವಿಗಳಲ್ಲಿ ಪ್ರತಿಧ್ವನಿಸಿತು.

''ಹೇಳು ಲವ್‌ಲೀನಾ... ಯಾವಾಗ ಬರ್ತೀಯಾ...''

''ಈಗ್ಲೆ ಬರ್ಬೇಕು ಅಂತಿದ್ದೆ. ಆದರೆ ಬರೋಕೆ ಆಗೋದಿಲ್ಲವಲ್ಲ. ಇಲ್ಲಿಂದ ಯಾವಾಗ

ಸ್ಪೇಸ್ ಬಸ್ ಬರುತ್ತೋ ಆವಾಗ್ ಬರ್ತೀನಿ. ಭೂಮಿ ಮೇಲೆ ಇಳಿದ ದಿನವೆ ನಿನ್ನ ಮುಂದೆ ನಿಂತಿರ್ತೀನಿ'' ಲವ್‌ಲೀನಾ ಹೇಳಿದಳು.

''ನನ್ಗೆ ಮೋಸ ಮಾಡಿಬಿಟ್ಟೆ ನೀನ್ ಒಂದು ಮಾತು ಸ್ಪೇಸ್ಗೆ ಹೋಗ್ತಾ ಇದ್ದೀನಿ ಅಂತ ಎರಡು ದಿನ ಮೊದ್ಲು ಹೇಳಿದ್ದರೆ ನಿನ್ನಿಂದೇನೆ ಬಂದು ಬಿಡ್ತಾ ಇದ್ದೆ. ಅಂಟಾರ್ಕ್‌ಟಿಕಾಗೆ ಹೋದ್ಮೇಲೆ ಹೇಳಿದರೆ ಏನ್ ಪ್ರಯೋಜನ?''

''ನನ್ನ ಜೀವನದಲ್ಲಿ ಸ್ಪೇಸ್ ಕಾಲೋನಿಗೆ ಹೋಗ್ಬೇಕು ಅನ್ನೊ ಮಹದಾಸೆ ಇತ್ತು. ಅದು ಯಾವುದೇ ರೀತಿಯೂ ಮಿಸ್ ಆಗ್ಬಾರದು. ಅದಕ್ಕೆ ಹಾಗ್ ಮಾಡ್ದೆ. ಸಾರಿ...'' ಎಂದಳು ಲವ್‌ಲೀನಾ.

''ಹೇಗಿದೆ ಸ್ಟಾರ್ ವರ್ಲ್ಡ್?''

''ಗ್ರೇಟ್... ವಂಡರ್‌ಫುಲ್. ಇನ್ನು ಮೇಲೆ ನಾನು ಸತ್ತೋದರೂ ಪರವಾಗಿಲ್ಲ. ಐಯಾವ್ ಅಚ್ಚೀವ್ಡ್ ಸಮ್‌ಥಿಂಗ್'' ಎಂದಳು.

''ಬಟ್ ಐ ಯಾವ್ ಮಿಸ್ಸಡ್ ಯು'' ಐಯಾನ್ ನೊಂದುಕೊಳ್ಳುತ್ತ ಹೇಳಿದ.

''ಎಲ್ಲಾದಕ್ಕೂ ಸಮಯ ಬರುತ್ತೆ...? ಲೆಟ್ ಅಸ್ ಹೋಪ್ ವಿ ವಿಲ್ ಮೀಟ್ ಶ್ಯಾರ್ಟ್ಲಿ?''

''ಐ ಲವ್ ಯು... ಲವ್‌ಲೀನಾ. ನಿಜವಾಗಿಯೂ ನಾನ್ ಯಾವ ಹುಡ್ಗೀನ್ ನೋಡಿದಾಗಲೂ ಇಷ್ಟೊಂದು ತಲೆ ಕೆಡಿಸ್ಕೊಂಡಿಲ್ಲ. ಐ ವಾಂಟು ಯು ಇಮಿಡಿಯಟ್ಲಿ'' ಆಯಾನ್ ಅಂಗಲಾಚಿದ. ''ಐ ಟು...?'' ಎನ್ನುವ ಪದಗಳು ಐಯಾನ್ ಕಿವಿಯನ್ನು ತಲುಪುವ ಮುನ್ನವೆ ಸಂಪರ್ಕ ತುಂಡರಿಸಿಕೊಂಡಿತು. ಸಂಪರ್ಕ ಹೊಂದಿದ್ದ ತರಂಗಗಳ ಮೇಲೆ ಕಾಸ್ಮಿಕ್ ಕಿರಣಗಳು ದಿಢೀರನೆ ಮಳೆಗೆರೆದುಬಿಟ್ಟವು. ಮತ್ತೆ ಸಂಪರ್ಕಕ್ಕಾಗಿ ಎರಡೂ ಕಡೆಯಿಂದ ಎರಡು ಹೃದಯಗಳು ಹಾತೊರೆಯುತ್ತಿವೆ.

ಎಷ್ಟೊತ್ತಾದರೂ ಮತ್ತೆ ಸಂಪರ್ಕ ಸಾಧ್ಯವಾಗಲಿಲ್ಲ. ಹ್ಯಾಮ್ ಸಂಪರ್ಕ ಎನ್ನುವುದು ಕೋಟಿಗೊಬ್ಬರಿಗೆ. ಯಾವುದೊ ಸಮಯದಲ್ಲಿ ದೊರಕುವ ಸಂಪರ್ಕ. ಐಯಾನ್ ಆಕಾಶದ ಕಡೆಗೆ ಒಮ್ಮೆ ದಿಟ್ಟಿಸಿ ನೋಡಿದ. ನಕ್ಷತ್ರಗಳು ಅದೇ ರೀತಿಯಾಗಿ ನಗುತ್ತಿವೆ. ತನ್ನ ಕೈಯಲ್ಲಿದ್ದ ಪುಟ್ಟ ಯಂತ್ರದ ಬಗ್ಗೆ ಮೆಚ್ಚುಗೆಯಾಗಿ ಅದನ್ನು ಬೆರಳುಗಳಲ್ಲಿ ತಡುವುತ್ತಾ ಬಾರವಾದ ಹೃದಯವನ್ನೊತ್ತು ಮೆಟ್ಟಿಲಿಳಿಯುತ್ತ ಕೆಳಗೆ ಬಂದ. ಬಂದವನೆ ತನ್ನ ಬೆಡ್‌ರೂಂ ಒಳಕ್ಕೆ ಬಂದು ಹಾಸಿಗೆ ಮೇಲೆ ಕುಳಿತುಕೊಂಡ.

ಕೆಲವೇ ಕ್ಷಣಗಳಲ್ಲಿ ಇಬ್ಬರೂ ಮತ್ತೆ 36 ಸಾವಿರ ಕಿಲೋಮೀಟರುಗಳು ದೂರವಾಗಿಬಿಟ್ಟರು. ಅಶ್ವಿನಿ ಪಕ್ಕಕ್ಕೆ ಉರುಳಿ ''ಏನ್ರಿ... ಏನಾಯಿತು?'' ಎಂದಳು.

"ಏನೂ ಇಲ್ಲ ಕಣೆ... ಹ್ಯಾಮ್ ಫ್ರೆಂಡೊಬ್ಬರು ಸಿಕ್ಕಿದ್ದರು" ಎಂದ.

"ಹೆಣ್ಣೊ ಗಂಡೊ...?" ಮೊದಲ ಬಾರಿಗೆ ಐಯಾನ್ ತನ್ನ ಪತ್ನಿಗೆ ಸುಳ್ಳು ಹೇಳಿ ನಿಧಾನವಾಗಿ ಹಾಸಿಗೆ ಮೇಲೆ ಉರುಳಿಕೊಂಡ. ಲವ್‌ಲೀನಾ ನಕ್ಷತ್ರಗಳ ಮಧ್ಯ ಒಬ್ಬಳೆ ಕುಳಿತಿದ್ದಾಳೆ. ಆದರೆ ಇಬ್ಬರೂ ಒಬ್ಬರ ಜೊತೆಗೆ ಇನ್ನೊಬ್ಬರು ಹತ್ತಿರ ಕುಳಿತುಕೊಂಡು ಮಾತನಾಡಿಕೊಳ್ಳುವಂತೆ ಐಯಾನ್ ಇಲ್ಲಿ, ಲವ್‌ಲೀನಾ ಅಲ್ಲಿ ಮಾತನಾಡಿಕೊಳ್ಳುತ್ತಿದ್ದರು.



ಬೆನ್‌ನಗರದ ಮುಖ್ಯ ವಲಯಗಳು ಮತ್ತು ಅವುಗಳ ನಡುವಿನ ಸಂಪರ್ಕ ರಸ್ತೆಗಳು... ಸಂಕೀರ್ಣಗಳು... ಹೋಟಲುಗಳು... ಆಟದ ಮೈದಾನಗಳು... ಮೆಟ್ರೊ ಬಸ್‌ನಿಲ್ದಾಣ... ಮಾನೋ, ಮೆಟ್ರೋ ರೈಲ್ವೆ ನಿಲ್ದಾಣಗಳು... ಶಾಲೆ ಕಾಲೇಜು ಆವರಣಗಳು ಎಲ್ಲವು ಕನ್ನಡಿಗಳಂತೆ ತಳತಳ ಹೊಳೆಯುತ್ತಿವೆ. ಯಾರೇ ಆಗಲಿ ಒಂದೇ ಒಂದು ಚೂರು ಪೇಪರನ್ನು ಸಹ ಕೆಳಕ್ಕೆ ಹಾಕುವಂತಿಲ್ಲ. ಹಾಗೇನಾದರೂ ಮಾಡಿದರೆ ಅವರನ್ನು ಅಲ್ಲಿ ಯಾರೂ ಕೇಳುತ್ತಿರಲಿಲ್ಲ.

ಅವರ ಗುರುತು ಹಿಡಿಯುವ ಹಿಡನ್ ಕ್ಯಾಮರಾಗಳು ವಿಷಯವನ್ನು ಮಾಸ್ಟರ್ ಕಂಪ್ಯೂಟರ್ ಕಂಟ್ರೋಲ್ ರೂಮಿಗೆ ರವಾನಿಸುತ್ತವೆ. ಅವರ ವಿಳಾಸವನ್ನು ಕಂಡು ಹಿಡಿಯುವ ಮಾಸ್ಟರ್ ಕಂಟ್ರೋಲ್ ಅವರ ಬ್ಯಾಂಕ್ ಖಾತೆಯಿಂದ ತಕ್ಷಣವೇ ಅಪರಾಧಕ್ಕೆ ತಕ್ಕ ಹಾಗೆ ಹಣವನ್ನು ಮುರಿದುಕೊಳ್ಳಲಾಗುತ್ತಿದ್ದು ಬ್ಯಾಂಕ್ ಖಾತೆ ಇಲ್ಲದ ಹದಿನಾರು ವರ್ಷದೊಳಗಿನವರಾದರೆ ಅವರ ಪರವಾಗಿ ಅವರ ಪೋಷಕರ ಖಾತೆಯಿಂದ ಹಣವನ್ನು ಮುರಿದುಕೊಳ್ಳಲಾಗುತ್ತಿತ್ತು.

ಬೆನ್‌ನಗರದ ಪ್ರತಿಯೊಬ್ಬ ನಿವಾಸಿಯು ತಮ್ಮ ಖಾತೆಯಲ್ಲಿ ನಿಗದಿತ ಹಣವನ್ನು ಇಡಲೇ ಬೇಕಾಗಿತ್ತು. ಹೊರಗಡೆಯಿಂದ ಬರುವವರು ಮೊದಲೆ ತಮ್ಮ ವಿಳಾಸ, ವಿವರಗಳ ಜೊತೆಗೆ ನಿಗದಿತ ಹಣವನ್ನು ಜಮಾ ಮಾಡಿ ತಮ್ಮ ವಿಳಾಸ, ವಿವರಗಳ ಜೊತೆಗೆ ನಿಗದಿತ ಹಣವನ್ನು ಇಡಬೇಕಾಗಿತ್ತು. ಎಲ್ಲಾ ಕಡೆಯೂ ಎಲ್ಲಾ ರೀತಿಯ ವಸ್ತುಗಳನ್ನು ಹಾಕಲು ವಿಶೇಷ ಸ್ಥಳಗಳನ್ನು ನಿಗದಿಪಡಿಸಲಾಗಿತ್ತು. ಅವರು ಅಲ್ಲಿಯೇ ಹಾಕಬೇಕು.

ಸರಕಾರ ನೀಡುವ ವಿನ್ಯಾಸಗಳ ರೀತಿಯೆ ಮನೆಗಳನ್ನು ಕಟ್ಟಬೇಕಾಗಿತ್ತು. ಯಾವುದೇ ರೀತಿಯಲ್ಲೂ ತುಸುವೆ ಮಾರ್ಪಾಟುಗಳಿದ್ದರೂ ಅದನ್ನು ಕೆಡವಿ ಭಾರಿ ಫೈನ್ ಹಾಕುತ್ತಿತ್ತು. ಮನೆಗಳ ಮುಂದೆ ಹಿಂದೆ ಇಷ್ಟು ಭಾಗದಲ್ಲಿ ಇಷ್ಟು ತೋಟ ಇರಲೇಬೇಕಾಗಿತ್ತು. ಅಲ್ಲಿ ಬೆಳೆಯುವ ಹೂವು, ಗಿಡ, ಮರ ಎಲ್ಲವನ್ನೂ ಸರಿಯಾಗಿ ಹಾರೈಕೆ ಮಾಡದೆ ಹೋದಲ್ಲೂ ಮನೆ ಒಡೆಯರಿಗೆ ಫೈನ್ ಹಾಕುತ್ತಿತ್ತು. ಪದೇ ಪದೇ ಕಟ್ಟುನಿಟ್ಟುಗಳನ್ನು ಪಾಲಿಸದೆ ಹೋದಲ್ಲಿ ಸಿಟಿ ಕೌನ್ಸಿಲ್‌ನವರು ಅವರನ್ನು ನಗರದಿಂದ ಹೊರಗೆ ಹಾಕುವ ಅಧಿಕಾರವನ್ನು ಹೊಂದಿದ್ದರು. ಹಾಗಾಗಿ ನಗರ ಯಾವಾಗಲೂ ಸ್ವಚ್ಛವಾಗಿ ಕಂಗೊಳಿಸುತ್ತಿತ್ತು.

ಇನ್ನು ತೆರಿಗೆ ಬಗ್ಗೆ ಎಷ್ಟು ಕಟ್ಟುನಿಟ್ಟೆಂದರೆ ಒಂದೇ ಒಂದು ರೂಪಾಯಿಯನ್ನು ತೆರಿಗೆಯಲ್ಲಿ ಕಡಿಮೆ ಮಾಡಿದರೂ ಭಾರಿ ತೊಂದರೆಗೆ ಒಳಗಾಗಬೇಕಿತ್ತು. ಎಲ್ಲಾ ವ್ಯವಹಾರಗಳನ್ನು ಬ್ಯಾಂಕಿನ ಮೂಲಕವೇ ಮಾಡಬೇಕಾದ್ದರಿಂದ ಒಂದೇ ಒಂದು ರೂಪಾಯಿಯನ್ನು ತೆರಿಗೆ ಲೆಕ್ಕದಿಂದ ತಪ್ಪಿಸಿಕೊಳ್ಳಲಾಗುತ್ತಿಲ್ಲ.

ಬೆನ್ ನಗರದ ಯಾವುದೇ ಬಾರಾಗಲಿ, ರೆಸ್ಟಾರೆಂಟಾಗಲಿ, ದಿನಸಿ ಅಂಗಡಿಯಾಗಲಿ, ಬಟ್ಟೆ ಅಂಗಡಿಯಾಗಲಿ, ಐಸ್‌ಕ್ರೀಂ ಅಂಗಡಿ, ಜ್ಯುವೆಲರಿ ಅಂಗಡಿಯಾಗಲಿ ಕೊನೆಗೆ ಹೇರ್ ಕಟ್ಟಿಂಗ್ ಸಲೂನಾಗಲಿ ಕಾರ್ಡ್ ಇನ್‌ಸರ್ಟ್ ಮಾಡಿಯೇ ತೀರಬೇಕು. ಎಲ್ಲವೂ ನಿಗದಿತ ಬೆಲೆ. ಹಣ ಕೊಡುವುದಾಗಲಿ, ತೆಗೆದುಕೊಳ್ಳುವುದಾಗಲಿ ಇಲ್ಲವೆ ಇಲ್ಲ. ಇದು ನಗರದ ಒಂದು ರೀತಿಯ ವೈಶಿಷ್ಟ್ಯವಾದರೆ ನಗರದ ಇನ್ನೊಂದು ವೈಶಿಷ್ಟ್ಯ ಮತ್ತೊಂದು ರೀತಿಯದು.

ರಸ್ತೆಗಳಲ್ಲಿ, ಮೈದಾನಗಳಲ್ಲಿ, ಶಾಪಿಂಗ್ ಸಂಕೀರ್ಣ, ಕ್ಲಬ್‌ಗಳಲ್ಲಿ, ರೆಸ್ಟಾರೆಂಟ್‌ಗಳಲ್ಲಿ ಸಿನಿಮಾ ಹಾಲುಗಳಲ್ಲಿ, ಹೋಟೆಲ್ ಲಾನ್‌ಗಳಲ್ಲಿ ಅರೆಕೊರೆ ಬಟ್ಟೆಗಳನ್ನು ಧರಿಸಿರುವ ಯುವಕ ಯುವತಿಯರು ಒಬ್ಬರನ್ನೊಬ್ಬರು ತಬ್ಬಿಕೊಂಡು ಓಡಾಡುತ್ತಿರುತ್ತಾರೆ. ಎಲ್ಲೆಂದರೆ ಅಲ್ಲಿ ಚುಂಬಿಸುತ್ತಿರುತ್ತಾರೆ. ಅಲ್ಲಲ್ಲಿ ತೋಟಗಳಲ್ಲಿ ಗಿಡಗಳ ಕೆಳಗೆ ಕುಳಿತಿರುವ ಯುವಕ ಯುವತಿಯರು ಮೈಮರೆತು ಹೋಗಿದ್ದಾರೆ. ಓಡಾಡುವ ಸಾರ್ವಜನಿಕರು ತಮಗೂ ಇವರಿಗೂ ಯಾವುದೇ ಸಂಬಂಧ ಇಲ್ಲ ಎನ್ನುವಂತೆ ತಮ್ಮ ಪಾಡಿಗೆ ತಾವು ಓಡಾಡುತ್ತಿರುತ್ತಾರೆ.

ಯುವಕರು ಯುವತಿಯರು, ಮಧ್ಯವಯಸ್ಸಿನವರು, ಮುದುಕರು ಯಾವುದೇ ವಯಸ್ಸಿನ ಭೇದಭಾವ ಇಲ್ಲದೆ ಆಲ್ಕೋಹಾಲ್ ಅಂಗಡಿಗಳಲ್ಲಿ ಕುಳಿತು ಕುಡಿಯುತ್ತ ಹರಟೆ ಹೊಡೆಯತ್ತಿದ್ದಾರೆ. ಸೆಕ್ಸ್ ಭೇದವಿಲ್ಲದೆ ಹೆಣ್ಣು ಗಂಡೆನ್ನದೆ ಎಲ್ಲರೂ ಸಮನಾಗಿ ಸಂತೋಷವನ್ನು ಅನುಭವಿಸುತ್ತಿದ್ದಾರೆ.

ಸಮಯ ಸಾಯಂಕಾಲ ಏಳು ಗಂಟೆ.

ಸೂರ್ಯನು ಪಶ್ಚಿಮದ ಕಡೆಗೆ ವಾಲುತ್ತಿದ್ದಂತೆ ಬೆನ್ ನಗರ ಮೇಕಪ್ ಸೆಟ್ಟಿನ ಮುಂದೆ ನಿಂತುಕೊಂಡು ಸಿಂಗರಿಸಿಕೊಳ್ಳುತ್ತಿರುವಂತೆ ತೋರುತ್ತಿದೆ. ಅನಂತರ ನಿಧಾನವಾಗಿ ತನ್ನ ದೇಹವನ್ನು ಬಣ್ಣಗಳಲ್ಲಿ ಅದ್ದಿಕೊಳ್ಳುತ್ತ ಸರಾಗವಾಗಿ ಮೈ ಕೊಡವಿಕೊಂಡು ಆಕಾಶಕ್ಕೆ ಏಣಿ ಹಾಕಿ ನಿಂತುಕೊಂಡಿತು.

ನಗರದ ನ್ಯೂಕ್ಲಿಯಸ್ ಮೈದಾನದ ಮಧ್ಯದಲ್ಲಿರುವ ಪೆರ್ಸ್ನೆಟ್ ಭವನ ಲೇಜರ್ ಕಿರಣಗಳಿಂದ ಕಂಗೊಳಿಸುತ್ತಿದೆ. ಭವನದ ಮಧ್ಯದಲ್ಲಿರುವ ಸ್ಟೇಜಿನ ಸುತ್ತಲೂ ಜನಜಂಗುಳಿ ಒಂದೇ ಸಮನೆ ಕೂಗುತ್ತಿದೆ. ಎಲ್ಲರ ಕೈಗಳಲ್ಲೂ ಪ್ಲೇಕಾರ್ಡುಗಳು ಗಾಳಿಯಲ್ಲಿ ಹಾರಾಡುತ್ತಿವೆ. ಸ್ಟೇಜ್ ಮೇಲೆ ಮಸುಕಟ್ಟಾದ ದೇಹದಾರ್ಢ್ಯವಿರುವ ಕುಸ್ತಿಪಟುಗಳು ಕೈಕಾಲು ಮುಖ ಯಾವುದನ್ನೂ ನೋಡದೆ ಹೊಡೆದಾಡುತ್ತಿದ್ದಾರೆ. ನೋಡುತ್ತಿರುವವರು ತಮ್ಮ ಇಷ್ಟವಾದ ರಜ್ಲರ್ಸ್ ಮೇಲೆ ಬೆಟ್ ಕಟ್ಟಿಕೊಂಡಿದ್ದಾರೆ. ಮಕ್ಕಳು, ಯುವಕರು, ಮಧ್ಯಮ

ವಯಸ್ಸಿನವರು; ಮುದುಕರು ಎಲ್ಲರೂ ಒಂದೇ ಉತ್ಸಾಹದಿಂದ ಕುಸ್ತಿಯನ್ನು ಎಂಜಾಯ್ ಮಾಡುತ್ತಿದ್ದಾರೆ.

ಗಂಡಸರು ಹೆಚ್ಚಾಗಿ ಪ್ಯಾಂಟು, ನಿಕ್ಕರ್, ಟಿಶರ್ಟ್, ಬನಿಯನ್ ಇತ್ಯಾದಿ ಕ್ಯಾಶುಯಲ್ಸ್ ತೊಡುಗೆಗಳಲ್ಲಿ, ಯುವತಿಯರು ಲಂಗ, ನಿಕ್ಕರ್, ಜೀನ್ಸ್, ಅರೆಕೊರೆ ಬನೀನು, ಬ್ರಾಗಳನ್ನು ಧರಿಸಿದ್ದಾರೆ. ತಲೆಯ ಮೇಲೆ ಚಿತ್ರ ವಿಚಿತ್ರವಾದ ಬಣ್ಣಬಣ್ಣದ ಹ್ಯಾಟುಗಳು, ಕೈಗಳಲ್ಲಿ ಗಡಿಯಾರಗಳು, ಕುತ್ತಿಗೆಯಲ್ಲಿ ಹಲವು ರೀತಿಯ ಹಾರಗಳು ನೇತಾಡುತ್ತಿವೆ.

ಯುವತಿಯರ ನಗ್ನ ಬೆನ್ನಿನ ಹಿಂದಿನಿಂದ ಒಂದು ತುಂಡು ದಾರ ಎದೆಗಳ ಮುಂದಿರುವ ಬ್ರಾಗಳನ್ನು ಹಿಡಿದುಕೊಂಡಿವೆ. ತುಸು ಬಗ್ಗಿದರೆ ಸಾಕು ಎದೆಗಳು ಹೊರಕ್ಕೆ ಬೀಳುತ್ತವೆ. ಯುವತಿಯರ ಜೊತೆಗೆ ಯುವಕರು, ಯುವಕರ ಜೊತೆಗೆ ಯುವತಿಯರು ಹಣೆದುಕೊಂಡು ಕುಳಿತಿದ್ದಾರೆ. ಮಧ್ಯೆ ಮಧ್ಯೆ ಚುಂಬನಗಳು ವಿನಿಮಯವಾಗುತ್ತಿವೆ. ಹೆಣ್ಣು-ಗಂಡಿನ ಮಧ್ಯೆದ ಸ್ಪರ್ಶಕ್ಕೆ ಇಲ್ಲಿ ಬೆಲೆಯೆ ಇಲ್ಲದೆ ಆಗಿಬಿಟ್ಟಿದೆ. ಗಂಡು ಹೆಣ್ಣಿನ ನಡುವೆ ಅಪರೂಪವಾಗಿ ಸ್ಪರ್ಶ ನಡೆದರೆ ಅದಕ್ಕೊಂದು ವಿಶೇಷವಿರುತ್ತದೆ. ಆದರೆ ಇಲ್ಲಿ 24 ಗಂಟೆಗಳು ಸ್ಪರ್ಶವೆ. ಅದಕ್ಕೆ ವಿಶೇಷ ಎನ್ನುವ ಕಾರಣವೆ ಇಲ್ಲ.

ಈ ಗುಂಪಿನಲ್ಲಿ ಅಶ್ವಿನಿ, ಐಯಾನ್, ಶಮಿ ಮತ್ತು ತೇಜಸ್ ಕೂಡ ಅದೇ ರೀತಿಯ ಉಡುಗೆಗಳಲ್ಲಿ ಕುಳಿತುಕೊಂಡಿದ್ದಾರೆ. ಸ್ಮಾರ್ಟ್ ಮನೆಗಳಿಂದ ಹೊರಬಂದರೆ ಸಾಕು ಎಂಬುದಾಗಿ ಆಗಾಗ ಈ ರೀತಿಯಾಗಿ ಜನರ ಗುಂಪಿನಲ್ಲಿ ಸೇರಿಕೊಂಡುಬಿಡುತ್ತಿದ್ದರು. ರೋಮ್‌ನಲ್ಲಿದ್ದಾಗ ರೋಮನ್ಸ್ ತರಹ ಇರಬೇಕು ಎನ್ನುವುದು ಒಂದು ನಾಣ್ಣುಡಿ. ಇಲ್ಲಿಯೂ ಅದೇ ಆಗಿದೆ. ಎಲ್ಲರೂ ರೋಮಾಂಚನದಲ್ಲಿ ಇದ್ದಾರೆ. ಮಗು ತಾಯಿಯ ಹೊಟ್ಟೆಯಲ್ಲಿದ್ದಾಗ ತಾಯಿ ಸಂತೋಷವಾಗಿ ಇರಬೇಕೆಂದು ಶಮಿಗೆ ವೈದ್ಯರು ಹೇಳಿದ್ದಾರೆ.

ಶಮಿಯ ಗರ್ಭದಲ್ಲಿರುವ ಮಗುವಿಗೆ ಒಂದೂವರೆ ತಿಂಗಳಾಗಿದೆ. ಅವಳ ಪ್ರತಿಯೊಂದು ಹಾವಭಾವಗಳನ್ನು ತೇಜಸ್ ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಿದ್ದಾನೆ. ಅವಳ ಹೊಟ್ಟೆ ಮೊದಲಿಗಿಂತ ತುಸುವೆ ಉಬ್ಬಿಕೊಂಡಂತೆ ಕಾಣಿಸುತ್ತಿದೆ. ಈ ವಿಷಯವನ್ನು ತೇಜಸ್ ಶಮಿಗೆ ಹೇಳಿದಾಗ ಅವಳ ಹೊಟ್ಟೆಯನ್ನು ತಡವಿಕೊಳ್ಳುತ್ತ ನಾಚಿಕೆ ವ್ಯಕ್ತಪಡಿಸಿದ್ದಾಳೆ. ಐಯಾನ್ ಮತ್ತು ಅಶ್ವಿನಿ ಟಿನ್ ಬೀರು ಕೈಯಲ್ಲಿ ಹಿಡಿದುಕೊಂಡು ಕುಸ್ತಿಪಟುಗಳ ಕಡೆಗೆ ನೋಡುತ್ತಿದ್ದಾರೆ. ತೇಜಸ್ ಕೂಡ ಬೀರು ಕುಡಿಯುತ್ತಿದ್ದಾನೆ. ಆದರೆ ಶಮಿ ಮಾತ್ರ ಕುಡಿಯುತ್ತಿಲ್ಲ . ಆದರಿಂದ ಮಗುವಿಗೆ ತೊಂದರೆ ಎಂದು ಸುಮ್ಮನಿದ್ದಾಳೆ. ಶಮಿ ಆಗಲೇ ಒಂದೆರಡು ಬೀರು ಬೇಕೆಂದಾಗ ತೇಜಸ್ ಬೇಡ ಎಂದಿದ್ದಾನೆ.

ಶಮಿಗೆ ಈ ವಾತಾವರಣದಲ್ಲಿ ಒಂದು ಸಿಪ್ ಕುಡಿಯಲೇಬೇಕು ಎನಿಸುತ್ತಿದೆ. ತೇಜಸ್ ನೋಡದಂತೆ ಶಮಿ ಐಯಾನ್ ಕೈಯಲ್ಲಿದ್ದ ಟಿನ್ ತೆಗೆದುಕೊಂಡು ಆಗಲೆ ಒಂದೆರಡು ಸಿಪ್ ಕುಡಿದಿದ್ದಾಳೆ. ತೇಜಸ್ ನೋಡಿ ನೋಡದಂತೆ ಕುಳಿತಿದ್ದಾನೆ. ಅಶ್ವಿನಿ ಕೈಯಲ್ಲಿರುವುದನ್ನು

ತೇಜಸ್ ತೆಗೆದುಕೊಂಡು ಕುಡಿದಿದ್ದಾನೆ. ಐಯಾನ್ ಮತ್ತು ಅಶ್ವಿನಿ ಮತ್ತೆ ಒಂದೊಂದು ಟಿನ್ ಬೀರುಗಳನ್ನು ತೆಗೆದುಕೊಂಡಿದ್ದೆ ತೇಜಸ್ ಕೂಡ ಶಮಿಗೂ ತನಗೂ ಒಂದೊಂದು ತೆಗೆದುಕೊಂಡ. ಶಮಿ ಈಗ ಸ್ವಲ್ಪ ಸ್ವಲ್ಪವೇ ಕುಡಿಯುತ್ತಾ ಎಂಜಾಯ್ ಮಾಡುತ್ತಿದ್ದಾಳೆ. ಎಲ್ಲರಿಗೂ ಸಣ್ಣದಾಗಿ ಕಿಕ್ ಏರಿದೆ. ಕುಸ್ತಿಯ ಭಯಂಕರ ತಿರುವುಗಳಿಂದ ಎಲ್ಲರೂ ಓ ಎಂದು ಕೂಗಾಡುತ್ತಿದ್ದಾರೆ. ಎಲ್ಲಿ ನೋಡಿದರೂ ಅರೆನಗ್ನವಾಗಿರುವ ಯುವತಿಯರು, ಯುವಕರು... ಒಂದೇ ಕೂಗಾಟ. ಬಣ್ಣ ಬಣ್ಣಗಳ ಲೇಜರ್ ಕಿರಣಗಳ ಓಕುಳಿ. ಶಮಿ–ತೇಜಸ್, ಐಯಾನ್-ಅಶ್ವಿನಿ ಅವರ ಕೈಗಳಿಗೂ ಸ್ಪರ್ಶ, ತುಟಿಗಳಿಗೆ ಮುತ್ತು ಬೇಕೆನಿಸುತ್ತಿದೆ. ಅವರಿಗೆ ಅಲ್ಲಿ ಅಡ್ಡಿ ಯಾವುದೂ ಇಲ್ಲ. ಅದಕ್ಕೂ ಮುಂದೆ ಹೋಗಬೇಕೆಂದರೆ ಅಲ್ಲಿಂದ ಬೇರೆ ಕಡೆಗೆ ಹೋಗಬೇಕು. ಇಲ್ಲ ಮನೆ ಸೇರಿಕೊಳ್ಳಬೇಕು.

ಅಷ್ಟರಲ್ಲಿ ಒಂದು ವಿಚಿತ್ರವಾದ ಘಟನೆ ನಡೆದುಹೋಯಿತು. ಮೈಕಲ್ ಹುಡ್ ಎಂಬ ಪ್ರಖ್ಯಾತ ರಸ್ಲರ್ ಪ್ರೇಕ್ಷಕರ ಕಡೆಗೆ ನೋಡುತ್ತ'' ನನಗೆ ಒಂದು ಸುಂದರವಾದ ಹೆಣ್ಣಿನ ಕಂಪನಿ ಬೇಕಿದೆ. ನಿಮ್ಮಲ್ಲಿ ಸುಂದರವಾದ ಒಬ್ಬಳ್ನ ಆಯ್ಕೆ ಮಾಡಿಕೋಳ್ತೀನಿ'' ಎಂದು ಯುವತಿಯರ ಕಡೆಗೆ ಕಣ್ಣು ಹಾಯಿಸಿದ.

ಮುಂದೆ ಕುಳಿತಿದ್ದ ಯುವತಿಯರೆಲ್ಲ ಅವನನ್ನು ಆಕರ್ಷಿಸಲು ಎದ್ದು ನಿಂತು ಬಿಟ್ಟರು. ಈ ಯುವತಿಯರಿಗೆ ಏನಾಗಿದೆ ಎನ್ನುತ್ತಿದ್ದಂತೆ ಅಶ್ವಿನಿ ಮತ್ತು ಶಮಿ ಕೂಡ ಎದ್ದು ನಿಂತುಬಿಟ್ಟರು.

ಬೆಕ್ಕಸ ಬೆರಗಾದ ಐಯಾನ್ ಮತ್ತು ತೇಜಸ್ ಅವರಿಬ್ಬರ ಕಡೆಗೆ ನೋಡತೊಡಗಿದರು. ಒಂದು ವೇಳೆ ರಜ್ಲರ್ ಸ್ಟೇಜ್‌ನಿಂದ ಇಳಿದು ಬಂದರೆ ಅವನನ್ನು ಯುವತಿಯರು ಕಚ್ಚಿ ಕಚ್ಚಿ ಕೊಂದೆಬಿಡುತ್ತಾರೆ. ಅವನು ಸ್ಟೇಜ್ ಮುಂದೆ ನಿಂತುಕೊಂಡು "ಏಯ್... ಯು?" ಯುವತಿಯೊಬ್ಬಳ ಕಡೆಗೆ ನೋಡುವುದು ನೋಡಿ ಐಯಾನ್ ಮತ್ತು ತೇಜಸ್ ಕುತ್ತಿಗೆಗೆ ನೇಣು ಹಾಕಿಕೊಂಡವರಂತೆ ತಮ್ಮ ಪತ್ನಿಯರ ಕಡೆಗೆ ನೋಡಿದರು.

ಊಹುಂ... ಅವರು ತಮ್ಮ ಗಂಡಸರ ಕಡೆಗೆ ಲಕ್ಷ್ಯವೆ ಕೊಡಲಿಲ್ಲ. ಅವರ ಮುಂದೆ ನಿಂತುಕೊಂಡಿದ್ದ ಇನ್ನೊಬ್ಬಳು ಯುವತಿ "ಮಿ... ಮಿ...?" ನನ್ನನ್ನೇ ಕರೆಯುತ್ತಿರುವುದು ಎಂದು ತಿಳಿದುಕೊಂಡ ಮೇಲೆ ಅವನ ಕಡೆಗೆ ಧಾವಿಸಿ ಹೊರಟಳು. ನೋಡು ನೋಡುತ್ತಿದ್ದಂತೆ ಆ ಯುವತಿ ರಸ್ಲರ್ ತೋಳುಗಳಲ್ಲಿ ಸೇರಿಕೊಂಡುಬಿಟ್ಟಳು. ಅಶ್ವಿನಿ ಮತ್ತು ಶಮಿ ನಿರಾಶೆಗೊಂಡು ತಮ್ಮ ಸೀಟುಗಳಲ್ಲಿ ಕುಕ್ಕುರು ಕುಳಿತರು. ರಜ್ಲರ್ ಅವಳನ್ನು ಭುಜದ ಮೇಲೆ ಹಾಕಿಕೊಂಡು ಹೊರಟುಹೋದ. ಐಯಾನ್ ಮತ್ತು ತೇಜಸ್ ಒಬ್ಬರೊನ್ನೊಬ್ಬರು ನೋಡಿಕೊಂಡರು. ಇವರು ಸಮಯ ಬಂದರೆ ನಮ್ಮನ್ನು ತೊರೆದು ಹೋಗಿಬಿಡುತ್ತಾರೆ ಎನ್ನುವಂತಿತ್ತು ಇಬ್ಬರ ನೋಟ.

ನಮಗೆ ಇಷ್ಟವಾದವರ ಜೊತೆಗೆ ಒಂದು ರಾತ್ರಿ ಕಳೆಯುವ ಹಕ್ಕು ನಮಗಿದೆ ಎಂಬಂತಿದೆ

ಅಶ್ವಿನಿ ಮತ್ತು ಶಮಿ ನೋಟ. ''ಆದರೂ ನಿಮ್ಮನ್ನ ಬಿಟ್ಟು ಹೋಗುತ್ತೇವೆಯೆ ಡಾರ್ಲಿಂಗ್?'' ಎಂದರು. ಇಬ್ಬರೂ ಒಂದೇ ಸಲ, ತಮ್ಮ ಪ್ರಿಯತಮೆಯರನ್ನು ನೋಡುತ್ತ ''ನೀವು ನಮ್ಮನ್ನು ಬಿಟ್ಟು ಹೋಗೋದಿಲ್ಲ ಬಿಡಿ'' ಎಂದು ನಕ್ಕರು ಶ್ರೀಮಾನ್ ಪ್ರಿಯತಮರು.

ಕುಸ್ತಿ ಮುಗಿದುಹೋಗಿದ್ದು ಎಲ್ಲರೂ ಎದ್ದು ಹೊರಟರು. ಐಯಾನ್ ಅಶ್ವಿನಿಯನ್ನು ತಬ್ಬಿಕೊಂಡು, ತೇಜಸ್ ಶಮಿಯನ್ನು ತಬ್ಬಿಕೊಂಡು ತಮ್ಮ ಕಾರುಗಳ ಕಡೆಗೆ ನಡೆದರು.



ಪೊಲೀಸ್ ಕಚೇರಿಯ ಒಂದು ಸಿಕ್ರೆಟ್ ಕೋಣೆಯಲ್ಲಿ ಸಂಶೋಧನೆಗಳು ನಡೆಯುತ್ತಿವೆ. ಕಂಪ್ಯೂಟರ್ ಮುಂದೆ ಕುಳಿತಿರುವ ಪೊಲೀಸ್ ತಜ್ಞನೊಬ್ಬ ಅಪರಾಧಿಗಳ ದೇಹ ಮತ್ತು ಮುಖಗಳನ್ನು ಮೂರು ಕೋನಗಳಲ್ಲಿ ಅಭಿವೃದ್ಧಿ ಪಡಿಸುತ್ತಿದ್ದಾನೆ. ಮುಖಕ್ಕೆ ಸುತ್ತಿಕೊಂಡಿದ್ದ ಕವಚಗಳನ್ನು ನಿಧಾನವಾಗಿ ಒಂದೊಂದೆ ಪ್ರತ್ಯೇಕಿಸುತ್ತಿದ್ದಾನೆ. ಹೀಗೆ ಪ್ರತ್ಯೇಕಿಸುತ್ತ ಹೋದಂತೆ ಅವರ ಮುಖದ ಮೇಲಿನ ಮೂಳೆಗಳು ಮಾತ್ರ ಉಳಿದುಕೊಂಡವು. ಮಧ್ಯ ಮಧ್ಯ ಕಂಪ್ಯೂಟರ್‌ಗೆ ಹಲವು ನಿರ್ದೇಶನಗಳನ್ನ ನೀಡುತ್ತಿದ್ದಾನೆ.

ಕಂಪ್ಯೂಟರ್ ತನಗೆ ಬೇಕಾದ ಕಮ್ಯಾಂಡ್‌ಗಳನ್ನು ಕೇಳಿ ಪಡೆದುಕೊಳ್ಳುತ್ತಿದೆ. ಅಪರಾಧಿಗಳ ಮುಖದ ಎಲುಬುಗಳ ಆಧಾರದ ಮೇಲೆ ಮತ್ತೆ ಚರ್ಮವನ್ನು ತುಂಬಲಾಯಿತು. ಅಪರಾಧಿಗಳ ಎನ್‌ಲಾರ್ಜ್‌ಡ್ ಮುಖಗಳನ್ನು ಕಂಪ್ಯೂಟರ್ ತೋರಿಸುತ್ತಿದ್ದಂತೆ ಅವುಗಳನ್ನು ಕಂಪ್ಯೂಟರ್‌ನಲ್ಲಿ ಶೇಖರಿಸಲಾಯಿತು. ಆ ಮುಖಗಳ ಜೊತೆಗೆ ಹಲವು ಹತ್ತಿರದ ಮುಖಚರ್ಯೆಗಳನ್ನು ಸೃಷ್ಟಿಸಲಾಯಿತು.



ಐಯಾನ್ ತನ್ನ ಪತ್ನಿ ಅಶ್ವಿನಿ ಮತ್ತು ಮಗಳಾದ ಕಾಸ್ಮೋರಾ ಜೊತೆಗೆ ಯುಎಸ್‌ಐನ ಡಿ, ಇ ವಲಯ ಮತ್ತು ಹಳ್ಳಿ ಪಟ್ಟಣ ಪ್ರದೇಶಗಳಲ್ಲಿ ಕೆಲವು ದಿನಗಳು ಸುತ್ತಾಡಿ ಬರಲು ತಯಾರಿ ನಡೆಸಿದ್ದಾರೆ. ಅವರಿಗೆ ಎ ವಲಯದ ಜೀವನದಿಂದ ಬೇಸತ್ತು ಹೋಗಿದೆ. ಕುಳಿತ ಕಡೆಯೇ ಜೀವನ ಮಾಡಿ ಪ್ರತಿಯೊಂದಕ್ಕೂ ರೋಬೋಟ್‌ಗಳನ್ನು ಕಂಪ್ಯೂಟರ್ ಇಂಟರ್‌ನೆಟ್‌ಗಳನ್ನು ಅವಲಂಬಿಸಿ ಕುಳಿತಿದ್ದರಿಂದ ಲವಲವಿಕೆ, ಚುರುಕುತನವನ್ನೇ ಕಳೆದುಕೊಂಡಿದ್ದರು. ಹಾಗಾಗಿ ಕನಿಷ್ಠ ವರ್ಷಕ್ಕೊಂದು ಸಲವಾದರೂ ಒಂದು ತಿಂಗಳು ಕಾಲ ದೇಶದ ಡಿ,ಇ ವಲಯಗಳು ಮತ್ತು ಹಳ್ಳಿ ಪಟ್ಟಣ ಪ್ರದೇಶಗಳಲ್ಲಿ ಸುತ್ತಿಬರಲು ವೈದ್ಯರು ಸಲಹೆ ನೀಡಿದ್ದರು.

ಎ ವಲಯದಲ್ಲಿ ತಮ್ಮ ಸ್ಮಾರ್ಟ್ ಮನೆ ಮತ್ತು ಸೂಪರ್ ಟೌನ್‌ಶಿಪ್‌ನಲ್ಲಿ ಎಲ್ಲರದ್ದೂ ಯಂತ್ರೋಪಾಯ ಜೀವನ ಸಾಗುತ್ತಿತ್ತು. ಅವರ ದೇಹದಲ್ಲಿ ಯಾವುದೇ ಸಣ್ಣ ಏರುಪೇರಾದರೂ ಯಂತ್ರೋಪಕರಣಗಳು ತಿಳಿಸಿ ಬಿಡುತ್ತಿದ್ದವು.

ಅದಕ್ಕೆ ತಕ್ಕ ಹಾಗೆ ತಕ್ಷಣವೇ ದೇಹಕ್ಕೆ ಬೇಕಾದ ಮುತುವರ್ಜಿಯನ್ನು ತೆಗೆದುಕೊಂಡು ಬಿಡುತ್ತಿದ್ದರು. ಅದು ಮನೆಯಲ್ಲಿ ತುಂಬಿರುವ ಆಮ್ಲಜನಕದ ಅಂಶವಾಗಲಿ, ಸುತ್ತಲಿನ ವಾತಾವರಣ ಏರುಪೇರಾಗಲಿ, ದೇಹಕ್ಕೆ ತೆಗೆದುಕೊಳ್ಳುವ ಪೌಷ್ಠಿಕಾಂಶದ ಆಹಾರವಾಗಲಿ, ಖನಿಜಗಳಾಗಲಿ, ತಾವು ಕುಡಿಯುವ ಪ್ರತಿಯೊಂದು ಖನಿಜಾಂಶಗಳ ಬಗ್ಗೆಯೂ ಎಚ್ಚರಿಕೆಗಳನ್ನು ತೆಗೆದುಕೊಳ್ಳುತ್ತಿದ್ದರು.

ಆದರೆ ಡಿ ಮತ್ತು ಈ ವಲಯಗಳಲ್ಲಿ ಪ್ರಯಾಣ ಮಾಡುವಾಗ ಈ ಸೌಕರ್ಯಗಳು ಕಡಿಮೆ. ಏನೇ ಆದರೂ ಎಲ್ಲವನ್ನೂ ನೈಸರ್ಗಿಕವಾಗಿ ಪಡೆಯುವುದು ಒಳ್ಳೆಯದು ಎನ್ನುವುದು ವೈದ್ಯರ ಸಲಹೆ. ಆದರೂ ಟಿನ್ ಆಹಾರ, ನೀರು ಇನ್ನಿತರ ವಸ್ತುಗಳನ್ನು ಜೊತೆಗೆ ಕೊಂಡೊಯ್ಯುತ್ತಿದ್ದರು. ಪ್ರಯಾಣದ ಸಮಯದಲ್ಲಿ ಏನಾದರೂ ಅನಾಹುತಗಳು ನಡೆದುಬಿಟ್ಟರೆ? ಅಶ್ವಿನಿ ಈ ಪ್ರದೇಶದಲ್ಲಿ ಪ್ರಯಾಣ ಮಾಡುವಾಗ ಭೀತಿಗೊಳಗಾಗುತ್ತಿದ್ದಳು. ಈ ವಲಯಗಳಲ್ಲಿ ಹೆಚ್ಚೆಚ್ಚು ಅಪಘಾತಗಳು ಸಂಭವಿಸುತ್ತಿದ್ದವು. ಎ ಮತ್ತು ಬಿ ವಲಯಗಳಲ್ಲಿ ಎಲ್ಲಾ ಯಂತ್ರಗಳನ್ನು ರಿಮೋಟ್ ಕಮಟ್ರೋಲ್‌ನಿಂದ ನಡೆಸುವುದರಿಂದ ಅಪಘಾತಗಳು ತೀರಾ ಕಡಿಮೆ.

ಒಟ್ಟಿನಲ್ಲಿ ಎಲ್ಲಾ ವಲಯಗಳಲ್ಲೂ ಕೆಲವು ಪಾಸಿಟೀವ್ ಮತ್ತು ನೆಗೆಟೀವ್ ಅಂಶಗಳು ಇದ್ದೆ ಇವೆ. ಇತ್ತೀಚಿನ ಸಂಶೋಧನೆಗಳ ಪ್ರಕಾರ ಎಬಿ ಮತ್ತು ಸಿ ವಲಯಗಳಲ್ಲಿ ಜೀವನ ನಡೆಸುವವರು ವರ್ಷಕ್ಕೊಮ್ಮೆ ಕನಿಷ್ಠ ಒಂದು ತಿಂಗಳಾದರು ಡಿ.ಇ ಮತ್ತು ಹಳ್ಳಿ ಪಟ್ಟಣ ಪ್ರದೇಶಗಳಲ್ಲಿ ಓಡಾಡಿ ಬಂದರೆ ಆರೋಗ್ಯಕ್ಕೆ ಒಳ್ಳೆಯದೆಂದು ತಿಳಿಯಲಾಗಿದೆ.

ಐಯಾನ್ ಈ ವಲಯಗಳಲ್ಲಿ ಓಡಾಡಲು ಒಂದು ವಿಶೇಷವಾದ ವಾಹನವನ್ನು ಇಟ್ಟುಕೊಂಡಿದ್ದಾನೆ. ಅದರ ಹೆಸರು ಸಿಗ್ಮಾ ಎಸ್3. ಆ ವಾಹನದಲ್ಲಿ ಒಂದು ತಿಂಗಳಿಗಾಗುವಷ್ಟು ಆಹಾರ, ನೀರು, ಆರೋಗ್ಯ ಪರೀಕ್ಷಿಸಿಕೊಳ್ಳುವ ಯಂತ್ರೋಪಕರಣಗಳು, ಇಂಟರ್‌ನೆಟ್ ಸಂಪರ್ಕ ಸಿನಿಮಾ ನೋಡಲು ಪ್ಲಾಸ್ಮ ಟಿವಿ ಪರದೆ, ಕಂಪ್ಯೂಟರು, ನಿದ್ದೆ ಬಂದಾಗ ಒಂದು ಬಟನ್ ಒತ್ತಿದರೆ ಹಾಸಿಗೆ, ಧ್ವನಿ ನಿಯಂತ್ರಣ, ಹೀಗೆ ಎಲ್ಲಾ ಸೌಕರ್ಯಗಳು ಆ ವಾಹನದಲ್ಲಿದೆ. ಕಾಶ್ಮೋರಾ ಆಡಿಕೊಳ್ಳಲು ಒಂದು ಕಂಪ್ಯೂಟರ್, ಅವಳನ್ನು ಆಡಿಸಲು ನಾಲ್ಕಾರು ರೋಬೋಟ್‌ಗಳು ಕೂಡ ಇವೆ.

ಒಂದು ದಿನ ಬೆಳಗ್ಗೆ ಆ ವಾಹನ ಐಯಾನ್ ಫ್ಯಾಮಿಲಿಯನ್ನು ಹೊತ್ತುಕೊಂಡು ಪ್ರಯಾಣ ಹೊರಟಿತು. ಅವರ ತಮ್ಮ ಸ್ಮಾರ್ಟ್ ಮನೆ ಬಿಡುವ ಮುಂಚೆ ಮನೆ ಮತ್ತು ಮನೆಯ ಒಳಗಿರುವ ಎಲ್ಲಾ ವಸ್ತುಗಳ ಮೇಲೆ ಪೂರ್ಣ ವಿಮೆ ಮಾಡಿಸಿದ್ದಾರೆ. ಮನೆಯ ಒಳಗೆ ಮತ್ತು ಹೊರಗೆ ಎರಡು ರೋಬೋಟ್‌ಗಳು ಕಾವಲು ಕಾಯುತ್ತಿವೆ. ಇದು ಸಾಲದೆಂಬಂತೆ ಮನೆಯ ಹೊರಗೆ ಎರಡು ರೋಬೋಟ್‌ಗಳು ಕಾವಲು ಕಾಯುವ ಒಂದು ಮಲ್ಟಿ ಐ ಕ್ಯಾಮರಾ ಇದೆ.

ಯಾರಾದರೂ ಮನೆಯ ಹತ್ತಿರಕ್ಕೆ ಬಂದರೆ ಸಾಕು, ರೋಬೋಟ್ ಅವರಿಗೆ ಬೇಕಾದ ಮಾಹಿತಿ ನೀಡುತ್ತದೆ. ಮಾಹಿತಿ ನೀಡುವ ಮುನ್ನ ಬಂದಿರುವವರು ಯಾರು? ಇವರು ಮೊದಲೆ ಐಯಾನ್ ಕುಟುಂಬವನ್ನು ಸಂಧಿಸಲು ಬಂದಿದ್ದರೆ? ಎಂದು ತನ್ನ ಸ್ಮೃತಿಪಟಲದ ಮೇಲಿರುವ ವಿಚಾರಗಳನ್ನು ಮೆಲುಕು ಹಾಕಿಕೊಳ್ಳುತ್ತದೆ. ಗೊತ್ತಾದವರಾಗಿದ್ದರೆ ಅವರಿಗೆ ಬೇಕಾದ ಮಾಹಿತಿಗಳನ್ನು ಕೊಡುತ್ತದೆ. ಹೊಸಬರಾದರೆ ಅವರನ್ನು ಪ್ರಶ್ನಿಸಿ ಪರೀಕ್ಷಿಸುತ್ತದೆ. ಜೊತೆಗೆ ಅವರ ಚಿತ್ರವನ್ನು ಸೆರೆ ಹಿಡಿದುಕೊಂಡು ಮಾಹಿತಿ ಸಂಗ್ರಹಿಸುತ್ತದೆ. ಅನಂತರ ಪ್ರತಿಯೊಂದು ಘಟನೆಯನ್ನು ತನ್ನ ಒಡೆಯನಿಗೆ ತಿಳಿಸಿ ಒಡೆಯನ ಆದೇಶದಂತೆ ವರ್ತಿಸುತ್ತದೆ.

ತನ್ನ ಒಡೆಯ ಪೊಲೀಸರಿಗೆ, ಇಲ್ಲ ಬೇಹುಗಾರರಿಗೆ ಏನಾದರೂ ತಿಳಿಸು ಎಂದರೆ ತಿಳಿಸುತ್ತದೆ ಇಲ್ಲ ಯಾವ ರೀತಿಯ ವಿವರಗಳು ಬೇಕಾದರೂ ಒಡೆಯನಿಂದ ಪಡೆದು ಅವರಿಗೆ ತಲುಪಿಸುತ್ತದೆ. ಹೀಗೆ ಮನೆಯ ಮುಂದೆ, ಮನೆಯ ಒಳಗೆ ನಡೆಯುವ ಪ್ರತಿಯೊಂದು ಸಣ್ಣ ಘಟನೆಯನ್ನು ಒಡೆಯನಿಗೆ ರೋಬೋಟ್‌ಗಳು ತಲುಪಿಸುತ್ತವೆ.

ವಾಹನ ಎ ವಲಯ ದಾಟುವವರೆಗೂ ರಿಮೋಟ್ ಕಂಟ್ರೋಲ್‌ನಲ್ಲಿ ಸಾಗಿ ಮುಖ್ಯ ಬಾಗಿಲಲ್ಲಿ ನಿಂತುಕೊಂಡಿತು. ಐಯಾನ್ ತನ್ನ ಕಾರ್ಯಕ್ರಮವನ್ನು ಮೊದಲೆ ತಿಳಿಸಿದ್ದರಿಂದ ಬಾಗಿಲಲ್ಲಿದ್ದ ಕಂಪ್ಯೂಟರ್ ಮುಂದೆ ತನ್ನ ವಾಹನವನ್ನು ನಿಲ್ಲಿಸಿದ. ಅನಂತರ ಒಂದು ರೋಬೋಟ್ ಹತ್ತಿರಕ್ಕೆ ಬಂದಿದ್ದೆ ಐಯಾನ್ ತನ್ನ ಕೈಯಲ್ಲಿದ್ದ ಮೂರು ಪ್ಲಾಟಿನಮ್ ಕಾರ್ಡ್‌ಗಳನ್ನು ಅದರ ಕೈಗೆ ನೀಡಿದ. ಆ ರೋಬೋಟ್ ಕಾರ್ಡ್‌ಗಳನ್ನು ತೆಗೆದು ಕೊಂಡೋಗಿ ಉದ್ದಕ್ಕಿದ್ದ ಸಾಲು ಸಾಲು ಮಾಸ್ಟರ್ ಕಂಪ್ಯೂಟರ್ ಬಾಯಲ್ಲಿಟ್ಟಿತು. ಅದು ಕಾರ್ಡ್‌ಗಳನ್ನು ಗುರುತಿಸಿ ಹಿಂದೆಯೇ ತಿಳಿಸಿದ್ದ ಕಾರ್ಯಕ್ರಮವನ್ನು ಪರಿಶೀಲಿಸಿ ಹಿಂದಕ್ಕೆ ತಳ್ಳಿತು. ಅನಂತರ ಎದುರಲ್ಲಿದ್ದ ವಿಶಾಲ ಪರದೆಯ ಮೇಲೆ ಮತ್ತು ಸ್ಪೀಕರ್ಸ್‌ಗಳಲ್ಲಿ ಏಕಕಾಲಕ್ಕೆ ಹಸಿರು ನಿಶಾನೆ ನೀಡಿತು. ಜೊತೆಗೆ "ನಿಮ್ಮ ಪ್ರಯಾಣ ಸುಖವಾಗಿರಲಿ" ಎಂದು ಉಲಿಯಿತು.

ಸಿಗ್ಮ ಎಸ್3 ವಾಹನ ಎ ವಲಯದ ಬಾಗಿಲು ದಾಟಿ ಪ್ರಯಾಣ ಬೆಳೆಸಿತು. ಅಶ್ವಿನಿ ಮತ್ತು ಐಯಾನ್ ಪಕ್ಕಪಕ್ಕದಲ್ಲಿ ಕುಳಿತಿದ್ದಾರೆ. ಐಯಾನ್ ರಿಮೋಟ್ ಕಂಟ್ರೋಲ್‌ನ್ನು ಕೈಯಲ್ಲಿ ಹಿಡಿದುಕೊಂಡು ಬಟನ್‌ಗಳನ್ನು ಒತ್ತುತ್ತಿದ್ದಾನೆ. ವಾಹನ ಸರಾಗವಾಗಿ 300 ಕಿಲೋ ಮೀಟರುಗಳ ವೇಗದಲ್ಲಿ ಸಾಗುತ್ತಿದೆ. ನಾಲ್ಕಾರು ಗೆರೆಗಳಿರುವ ರಸ್ತೆಯಲ್ಲಿ ವಾಹನಗಳು ಸರ್ರನೆ ಓಡುತ್ತಿವೆ.

ಕಾಸ್ಮೋರಾ ಹಿಂದಿನ ಸೀಟಿನಲ್ಲಿ ಒರಗಿಕೊಂಡು ತನ್ನ ಖಾಸಗಿ ಸಿಂಪ್ಯೂಟರ್ ಜೊತೆಗೆ ಆಡಿಕೊಳ್ಳುತ್ತಿದ್ದಾಳೆ. ಸಿಂಪ್ಯೂಟರ್ ಪರದೆಯ ಮೇಲೆ ರೇಬಾನ್ ಕಡ್ಡಿಯಲ್ಲಿ ಚಿತ್ರಗಳನ್ನು ಬಿಡಿಸುತ್ತಿದ್ದಾಳೆ. ಕಾಸ್ಮೋರಾ ಬಿಡಿಸುತ್ತಿರುವ ಪ್ರತಿಯೊಂದು ಚಿತ್ರದ ಬಗ್ಗೆ ವಿವರಗಳನ್ನು

ಸಿಂಪ್ಯೂಟರ್ ತನ್ನದೇ ಧ್ವನಿಯಲ್ಲಿ ಕಾಸ್ಮೋರಾಗೆ ವಿವರಿಸುತ್ತಿದೆ. ಕಾಸ್ಮೋರಾ ತನ್ನ ಪುಟ್ಟ ಸಿಮ್ ಕಾರ್ಡ್ ತೆಗೆದು ಸಿಂಪ್ಯೂಟರ್‌ನ ತಲೆಯಲ್ಲಿ ತೂರಿಸಿ, ಬಟನ್ ಒತ್ತುತ್ತಾಳೆ.

ಕಾಸ್ಮೋರಾ ತನ್ನ ತಾಯಿಯ ಗರ್ಭದಿಂದ ಹೊರಕ್ಕೆ ಬಂದ ದಿನದಿಂದ ಹಿಡಿದು ಇಂದಿನವರೆಗೆ ರೆಕಾರ್ಡ್ ಮಾಡಿದ ತನಗೆ ಇಷ್ಟವಾದ ಆಲ್ಬಮ್‌ನ ಚಿತ್ರಗಳನ್ನು ಆಯ್ದುಕೊಂಡು ನೋಡಿ ನೋಡಿ ಆನಂದಿಸುತ್ತಿದ್ದಾಳೆ. ಅನಂತರ ಬಟನ್ ಒತ್ತಿ ಆ ಸಿಮ್ ಕಾರ್ಡ್‌ನ್ನು ಹೊರಕ್ಕೆ ತೆಗೆದು ಸಿಂಪ್ಯೂಟರನ್ನು ಅಂತರಜಾಲಕ್ಕೆ ಸೇರಿಸಿ ತನ್ನ ಮನೆಯಲ್ಲಿರುವ ಮಾಸ್ಟರ್ ರೋಬೋಟ್ ಜೊತೆಗೆ ಸಂಭಾಷಣೆ ನಡೆಸತೊಡಗಿದಳು.

"ಹಲೊ... ರೋಬೋ... ನಾನು ಕಾಸ್ಮೋ. ಏನ್ ಮಾಡ್ತಾ ಇದ್ದೀಯಾ?"

"ಓ... ಕಾಸ್ಮೋರಾ ನಾನ್ ಸುಮ್ಮನೆ ನಿಂತಿದ್ದೀನಿ. ಮನೆಯಲ್ಲಿ ಏನೂ ಕೆಲಸ ಇಲ್ಲ. ಏನಾದರೂ ಕೆಲಸ ಹೇಳು. ಮಾಡ್ತಾ ಇರ್ತೀನಿ. ನೀನೂ... ಅಪ್ಪ... ಅಮ್ಮ ಯಾರೂ ಇಲ್ಲದೆ ನನ್ಗೆ ತುಂಬಾ ಬೋರ್ ಆಗ್ತಾ ಇದೆ. ನೀವು ಬರೋವರ್ಗೆ ಏನು ಮಾಡೋದು? ನನ್ನ ಫ್ರೆಂಡ್ಸ್ ಜೊತೆಗೆ ಸಿನಿಮಾ ನೋಡ್ತೀನಿ" ಎಂದಿತು ಸೀನಿಯರ್ ರೋಬೋಟ್.

"ನನ್ನ ಡಾಲ್ಸ್‌ನ ಸರಿಯಾಗಿ ನೋಡ್ಕೊ. ನನ್ನ ಫ್ರೆಂಡ್ ಯಾರಾದರೂ ಫೋನು... ಮೇಲ್... ಫೋನ್ ಇನ್ ಟಿವಿಯಲ್ಲಿ ಬಂದಿದ್ದರಾ?"

"ಯಾರೂ ಬಂದಿಲ್ಲ. ಎಲ್ಲದರಲ್ಲೂ ನಿಮ್ಮ ಕಾರ್ಯಕ್ರಮ ಫೀಡ್ ಮಾಡಿ ಇಟ್ಟಿದ್ದೀವಲ್ಲ?" ರೋಬೋಟ್ ಹೇಳಿತು.

"ಓ! ಹೌದಲ್ಲ? ನಾನು ಮರೆತೆ ಹೋದೆ...?" ಕಾಸ್ಮೋ ಹೇಳಿದಳು.

ಅಷ್ಟರಲ್ಲಿ ಹಿಂದಕ್ಕೆ ತಿರುಗಿ ನೋಡಿದ ಅಶ್ವಿನಿ "ಏನು ಕಾಸ್ಮೋ ಯಾರ ಜೊತೆ ಮಾತನಾಡ್ತಾ ಇದ್ದೀಯಾ?" ಕಾಸ್ಮೋರಾ ತಾಯಿಯ ಕಡೆಗೆ ತಿರುಗಿ ನೋಡಿದಳು. ಕಾರು ಎ ಮತ್ತು ಬಿ ವಲಯದಲ್ಲಿ ಸರ್ರನೆ ಇಂಟರ್ ಕಾರಿಡಾರ್ ರಸ್ತೆಯಲ್ಲಿ ಸಾಗುತ್ತಿತ್ತು. ಎ ಮತ್ತು ಬಿ ವಲಯದಲ್ಲಿ ನೆಲೆಸಿರುವವರು ತಮ್ಮ ವಾಹನಗಳು ಓಡಾಡಲು ಎಲ್ಲೆಲ್ಲೂ ವಿಶೇಷವಾದ ಕಾರಿಡಾರ್ ರಸ್ತೆಗಳನ್ನು ಮಾಡಿಕೊಂಡಿದ್ದಾರೆ. ಈ ರಸ್ತೆಗಳಲ್ಲಿ ವಲಯಗಳ ಕೆಳಗಿನವರ ವಾಹನಗಳು ಓಡಾಡಬೇಕಾದರೆ ತೆರಿಗೆ ಕಟ್ಟಿ ವಿಶೇಷ ಪರವಾನಗಿ ಪಡೆದುಕೊಳ್ಳಬೇಕಾಗುತ್ತದೆ.

"ಕಾಸ್ಮೋ ತಿನ್ನೋದಕ್ಕೆ ಏನಾದರೂ ಕೊಡ್ಲಾ?" ಅಶ್ವಿನಿ ಕೇಳಿದಳು.

"ವಾಹನ ಎಲ್ಲಾದರೂ ನಿಲ್ಲಿಸಲಾ...?" ಐಯಾನ್ ಅಶ್ವಿನಿಯ ಕಡೆಗೆ ನೋಡುತ್ತ ಕೇಳಿದ.

"ಎಲ್ಲಾದರು ಒಳ್ಳೆ ರೆಸ್ಟಾರೆಂಟಿನಲ್ಲಿ ನಿಲ್ಲಿಸಿ?" ಎಂದಳು ಅಶ್ವಿನಿ.

''ಹಿಲ್ ರೆಸಾರ್ಟ್ ಅಂತಿದೆ. ನಾವು ಒಂದು ಸಲ ಹೋಗಿದ್ದವಲ್ಲ, ಅಲ್ಲಿ ನಿಲ್ಲಿಸ್ತೀನಿ'' ಎಂದ ಐಯಾನ್ ರಿಮೋಟ್ ಕಂಟ್ರೋಲ್ ಬಟನ್‌ಗಳನ್ನು ಒತ್ತಿ ವಾಹನವನ್ನು ಕಾರಿಡಾರ್ ರಸ್ತೆಯಿಂದ ಪಕ್ಕಕ್ಕೆ ತಿರುಗಿಸಿ ರೆಸ್ಟಾರೆಂಟ್ ಕಡೆಗೆ ಓಡಿಸಿದ.

''ಕಾಸ್ಮೋ... ವಾಹನ ನಿಲ್ಲಲಿ. ತಿನ್ನೋಣ'' ಅಶ್ವಿನಿ ಹೇಳಿದಳು.

ಅಷ್ಟರಲ್ಲಿ ವಾಹನ ''ಹಿಲ್ ರೆಸ್ಟಾರೆಂಟ್'' ಎಂಬ ಹೆಸರನ್ನು ಹಣೆಯಲ್ಲಿ ಮೆತ್ತಿಸಿಕೊಂಡಿರುವ ರೆಸ್ಟಾರೆಂಟ್ ಒಳಕ್ಕೆ ಪ್ರವೇಶಿಸುತ್ತಿದ್ದಂತೆ ವಾಹನ ತನ್ನ ಒಡಲಿನಲ್ಲಿನ ಎಲ್ಲವನ್ನು ಮುಚ್ಚಿಕೊಂಡು ಸ್ತಬ್ದಗೊಂಡಿತು. ಕಾಸ್ಮೋರಾ ತನ್ನ ಪುಟ್ಟ ಸಿಂಪ್ಯೂಟರ್‌ನ್ನು ಕೈಯಲ್ಲಿ ಹಿಡಿದುಕೊಂಡು ತಾಯಿಯ ಹಿಂದೆ ಬರುತ್ತಿದ್ದಳು.

ಬಾಗಿಲು ಮುಂದೆ ನಿಂತಿರುವ ಸ್ವಾಗತಕಾರ ಬಾಗಿಲು ತೆಗೆದು ಒಳಕ್ಕೆ ಬರಮಾಡಿಕೊಂಡ. ಮೂವರು ವಿಶೇಷವಾದ ಕೋಣೆ ಒಂದರಲ್ಲಿ ಕುಳಿತುಕೊಂಡರು. ಸುಂದರವಾದ ಯುವತಿಯೊಬ್ಬಳು ತುಟಿಗಳ ಮೇಲೆ ನಗುವನ್ನು ಸಿಕ್ಕಿಸಿಕೊಂಡು ವೈಯ್ಯಾರದಿಂದ ಬಳುಕುತ್ತ ಬಂದು ''ಏನ್ ಸಾರ್...'' ಎಂದು ಪಕ್ಕದಲ್ಲಿ ನಿಂತುಕೊಂಡಳು.

''ನಾವು ನಮ್ಮ ಜತೆ ತಂದಿರುವ ಸ್ನ್ಯಾಕ್ಸ್ ತಿನ್ನಬಹುದು ತಾನೆ...?'' ಅಶ್ವಿನಿ ಕೇಳಿದಳು.

''ಎಸ್ ಮೇಡಂ, ತಿನ್ನಬಹುದು. ಆದರೆ ಕೋಣೆಗೆ ಚಾರ್ಜ್ ಮಾಡ್ತೀವಿ'' ಎನ್ನುತ್ತಿದ್ದಂತೆ ಐಯಾನ್ ಆಕೆಯ ಕಡೆಗೆ ನೋಡುತ್ತ ''ಆಗಬಹುದು'' ಎಂದ. ಐಯಾನ್ ಕಣ್ಣುಗಳಲ್ಲೇ ಅವಳನ್ನು ಅಳತೆ ಮಾಡಿದ. ಅಶ್ವಿನಿ ಐಯಾನ್ ಕಡೆ ನೋಡಿದಳು. ಐಯಾನ್ ಏನೂ ಗೊತ್ತಿಲ್ಲದವನಂತೆ ಎದುರಿಗೆ ಗೋಡೆ ಮೇಲಿದ್ದ ಚಿತ್ರದ ಕಡೆಗೆ ನೋಡುತ್ತ ''ನೈಸ್'' ಎಂದ. ಅಶ್ವಿನಿ ಸ್ನ್ಯಾಕ್ಸ್ ಇದ್ದ ಚೀಲದಿಂದ ತಿಂಡಿ ಪಾಕೆಟ್ಟುಗಳನ್ನು ತೆಗೆದು ವೈಟರ್ ಕೈಗೆ ನೀಡಿದಳು. ವೈಟರ್ ಎದುರಿಗಿದ್ದ ಮೈಕ್ರೋ ಓವನ್‌ನಲ್ಲಿಟ್ಟು ಕೆಲವೇ ನಿಮಿಷಗಳಲ್ಲಿ ತಂದುಕೊಟ್ಟಳು. ಅಶ್ವಿನಿ ತಟ್ಟೆ ಮತ್ತು ಹೊರ ತೆಗೆದ ತಿಂಡಿಗಳನ್ನು ಕಾಸ್ಮೋರಾ ಮತ್ತು ಐಯಾನ್‌ಗೆ ಹಾಕಿಕೊಟ್ಟಳು. ಚೀಲದಲ್ಲಿದ್ದ ಮಲ್ಟಿ ಮಿನರಲ್ ಪ್ಯಾಕ್‌ನ್ನು ತೆಗೆದು ಮುಂದಿಟ್ಟಳು. ಕಾಸ್ಮೋರಾ ತನ್ನ ಸಿಂಪ್ಯೂಟರ್‌ನಲ್ಲಿ ಆಡಿಕೊಳ್ಳುತ್ತಿದ್ದರೆ ಅಶ್ವಿನಿ ಚಮಚಾದಲ್ಲಿ ಅವಳಿಗೆ ತಿನ್ನಿಸುತ್ತಿದ್ದಳು.

ಐಯಾನ್ ಕಣ್ಣುಗಳ ಮುಂದೆ ವೈಟರ್ ಓಡಾಡುತ್ತಿದ್ದಾಳೆ. ಕಾಸ್ಮೋರಾಗೆ ತಿನ್ನಿಸಿದ ಅಶ್ವಿನಿ ತಾನು ಸ್ವಲ್ಪ ತಿಂದು ಪೌಷ್ಟಿಕಾಂಶದ ಒಂದು ಮಾತ್ರೆಯನ್ನು ನುಂಗಿ ನೀರು ಕುಡಿದಳು. ಒಂದು ಕಾಲಕ್ಕೆ ಆಹಾರವನ್ನು ಹೆಚ್ಚೆಚ್ಚು ಮಾತ್ರೆಗಳ ಮೂಲಕ ತಿಂದು ತಿಂದು ಎ, ಬಿ ವಲಯ ಜನರ ಜೀರ್ಣಕ್ರಿಯೆ ತೊಂದರೆಗೊಳಗಾಗಿ ಹೋಗಿತ್ತು. ಈಗೀಗ ಎಲ್ಲರೂ ಟಿನ್ ಆಹಾರವನ್ನು ತೆಗೆದುಕೊಳ್ಳಲು ಪ್ರಾರಂಭಿಸಿದ್ದರು.

ಮೂವರು ತಿಂಡಿ ತಿಂದು ಮುಗಿಸಿ ಹಣ ಕೊಟ್ಟು ಹೊರಕ್ಕೆ ಬಂದು ವಾಹನದಲ್ಲಿ

ಕುಳಿತರು. ವಾಹನ ಎಂಟು ಗೆರೆಗಳ ಕಾರಿಡಾರ್ ರಸ್ತೆಯಲ್ಲಿ ಸರಾಗವಾಗಿ ಓಡುತ್ತಿದೆ. ಎರಡೂ ಕಡೆ ಹಸಿರು ಮರಗಳು ಆಮ್ಲಜನಕವನ್ನು ಹೊರ ಹೊಮ್ಮಿಸುತ್ತ ರಸ್ತೆಯನ್ನು ತಂಪಾಗಿಸಿವೆ. ಐಯಾನ್ ವಾಹನದ ಒಳಗಿದ್ದ ಆಮ್ಲಜನಕ ಸಿಲೆಂಡರನ್ನು ಆಫ್ ಮಾಡಿ ನೈಸರ್ಗಿಕ ಆಮ್ಲಜನಕವನ್ನು ಪಡೆಯಲು ಸ್ವಿಚ್ ಒತ್ತಿದ. ಎರಡೂ ಕಡೆ ಕಿಟಕಿಗಳಿಂದ ಗಾಳಿ ಫಿಲ್ಟರಾಗಿ ತಂಪಾಗಿ ವಾಹನದ ಒಳಕ್ಕೆ ತೂರಿಬರುತ್ತದೆ.

"ಪ್ಯೂರ್ ಆಕ್ಸಿಜನ್" ಐಯಾನ್ ಹೇಳಿದ. ಅವರ ದೇಹಗಳನ್ನು ತಂಪಾದ ಕೈಗಳು ತಡವಿದಂತಾಗುತ್ತಿತ್ತು. ಅಶ್ವಿನಿಗೆ ಕಚಗುಳಿ ಇಟ್ಟಂತಾಗಿ ಮುಗುಳುನಗುತ್ತಾ ಐಯಾನ್ ಕಡೆಗೆ ನೋಡಿದಳು. ಐಯಾನ್ ಅಶ್ವಿನಿಯ ಕೆನ್ನೆಯನ್ನು ಸವರಿದ. ಅಶ್ವಿನಿಯ ತುಟಿಗಳು ರೈಮ್ ಹೇಳುತ್ತಿದ್ದವು. ಇಬ್ಬರೂ ಹಿಂದಕ್ಕೆ ತಿರುಗಿ ನೋಡಿದರು. ಕಾಸ್ಮೋರಾ ಕಣ್ಣುಮುಚ್ಚಿ ನಿದ್ದೆಗೆ ಜಾರಿಕೊಂಡಿದ್ದಳು. ಅವಳ ಮಡಿಲಲ್ಲಿರುವ ಸಿಂಪ್ಯೂಟರ್ ಅವಳಿಗೆ ಯಾವುದೋ ಕಥೆಯನ್ನು ಗೊಣಗುತ್ತಿದೆ. ಐಯಾನ್ ರಿಮೋಟ್ ಕಂಟ್ರೋಲ್‌ನಲ್ಲಿ ವಾಹನಕ್ಕೆ ನಿರ್ದೇಶನ ನೀಡುತ್ತಿದ್ದಾನೆ. ಅಶ್ವಿನಿ ನಿಧಾನವಾಗಿ ಐಯಾನ್ ಕೈಯನ್ನು ಹಿಡಿದುಕೊಂಡಳು.



ಒಂದೆರಡು ಕಡೆ ಹಾಲ್ಟ್ ಮಾಡಿ ತಿಂಡಿ, ಊಟ ಮುಗಿಸಿದ ಐಯಾನ್ ಕುಟುಂಬದವರು ಸಾಯಂಕಾಲ ಆರು ಗಂಟೆಗೆ ಇ ವಲಯದ ಒಂದು ಹೋಟಲಿನಲ್ಲಿ ವಿಶ್ರಾಂತಿ ಪಡೆದುಕೊಳ್ಳುತ್ತಿದ್ದಾರೆ. ಆ ಪ್ರದೇಶ ಅರವತ್ತು ಎಪ್ಪತ್ತು ವರ್ಷಗಳ ಹಿಂದಿನ ಪ್ರದೇಶದಂತಿದೆ. ಡಿ, ಇ ಮತ್ತು ಹಳ್ಳಿಗಾಡು ಪ್ರದೇಶಗಳಲ್ಲಿ ಅಡ್ಡಾಡುವುದೆಂದರೆ ಅಶ್ವಿನಿಗೆ ಎಲ್ಲಿಲ್ಲದ ತಾತ್ಸಾರ. ಆದರೆ ವೈದ್ಯರು, ಎ ಮತ್ತು ಬಿ ವಲಯದವರು ಆಗಾಗ ಹಳ್ಳಿಗಾಡು ಪ್ರದೇಶಗಳಲ್ಲಿ ಓಡಾಡಬೇಕು. ಇಲ್ಲವೆಂದರೆ ಆರೋಗ್ಯ ತೀರ ಸೂಕ್ಷ್ಮವಾಗುವ ಪರಿಸ್ಥಿತಿ ಇದ್ದು ಸಣ್ಣಪುಟ್ಟ ಕಾಯಿಲೆಗಳು ಬಂದರೂ ದೇಹ ತಡೆದುಕೊಳ್ಳುವುದಿಲ್ಲ ಎನ್ನುತ್ತಾರೆ.

ಐಯಾನ್ ಒಂದು ತಿಂಗಳಲ್ಲಿ ಎಲ್ಲೆಲ್ಲಿಗೆ ಹೋಗಬೇಕು? ಎಲ್ಲೆಲ್ಲಿ ಉಳಿದು ಕೊಳ್ಳಬೇಕು? ಏನೇನು ನೋಡಬೇಕು? ಏನೇನು ತಿನ್ನಬೇಕು? ಎನ್ನುವುದರ ಜೊತೆಗೆ ಇಡೀ ನಕ್ಷೆಯ ಜೊತೆಗೆ ಕಾರ್ಯಕ್ರಮದ ಪಟ್ಟಿಯನ್ನು ಮಾಡಿಕೊಂಡು ಬಂದಿದ್ದಾನೆ.

ಆ ಸಾಯಂಕಾಲ ಐದು ಗಂಟೆಗೆ ಅಲ್ಲಿಂದ ಐವತ್ತು ಕಿಲೋಮೀಟರುಗಳ ದೂರದಲ್ಲಿರುವ ಒಂದು ಪುಟ್ಟ ಹಳ್ಳಿಗೆ ಅವರು ತಲುಪಬೇಕು. ಐಯಾನ್ ಕುಟುಂಬ ಭೇಟಿ ನೀಡಲಿರುವ ಆ ಹಳ್ಳಿ ಯುಎಸ್‌ಐನ ಒಂದು ಟಿಪಿಕಲ್ ಹಳ್ಳಿಯ ಪ್ರತಿರೂಪ. ಎ ಮತ್ತು ಬಿ ವಲಯದ ನಾಗರಿಕರಿಗೆ ಮಾತ್ರ ಅಲ್ಲಿ ಪ್ರವೇಶವಿದೆ. ಹಳ್ಳಿಗಾಡು ಪ್ರದೇಶಗಳು ತೀರಾ ಹಿಂದುಳಿದಿದ್ದು ಇಂದಿಗೂ ಈ ಪ್ರದೇಶಗಳಲ್ಲಿರುವ ಜನರಿಗೆ ಸರಕಾರ ಯಾವ ಸೌಕರ್ಯಗಳನ್ನು ಒದಗಿಸಲಿಲ್ಲ. ಜೊತೆಗೆ ಶ್ರೀಮಂತರು ಆ ಪ್ರದೇಶಗಳಿಗೆ ಭೇಟಿ ನೀಡಿದರೆ ಹಲವಾರು ರೋಗಗಳು ಮುತ್ತಿಕೊಳ್ಳುತ್ತವೆ ಎನ್ನುವುದಾಗಿ ತಿಳಿದುಕೊಂಡಿದ್ದಾರೆ.

ಒಂದು ಕಾಲದಲ್ಲಿ ಅಭಿವೃದ್ಧಿ ಹೊಂದಿದ ದೇಶಗಳ ಪ್ರಜೆಗಳು ಇಂಡಿಯಾದ ಯಾವುದೇ ಪ್ರದೇಶಕ್ಕೆ ಬರಲು ನಿರಾಕರಿಸುತ್ತಿದ್ದರು. ಪ್ರಖ್ಯಾತ ಸಿನಿಮಾ ನಟರು, ಕ್ರೀಡಾಪಟುಗಳು, ಸಂಗೀತಗಾರರು, ವಿಜ್ಞಾನಿಗಳು, ಶ್ರೀಮಂತರು, ರಾಜಕಾರಣಿಗಳು, ಅಧಿಕಾರಿಗಳು ಹೀಗೆ ಯಾರೂ ಆಗಿನ ಇಂಡಿಯಾದ ಯಾವುದೇ ಪಟ್ಟಣ, ಹಳ್ಳಿ ಪ್ರದೇಶಗಳಿಗೆ ಬರುತ್ತಿರಲಿಲ್ಲ. ಎ ಮತ್ತು ಬಿ ವಲಯಗಳಲ್ಲಿ ನೆಲಸಿಯೇ ತಮ್ಮ ಕಾರ್ಯಕ್ಷೇತ್ರಗಳನ್ನು ನಡೆಸುತ್ತಿದ್ದರು.

ಹಳ್ಳಿಗಳು ಮತ್ತು ಪಟ್ಟಣಗಳ ಪ್ರತಿರೂಪಗಳನ್ನು ಹೊಂದಿರುವ ಸುಸಜ್ಜಿತ ಪ್ರದೇಶಗಳನ್ನು ಈಗ ಅಲ್ಲಲ್ಲಿ ನಿರ್ಮಿಸಿದ್ದಾರೆ. ಹಾಗಾಗಿ ಇಲ್ಲಿಗೆ ಬರುವ ಮೇಲಿನ ವಲಯಗಳ ಜನ ಒಂದೆರಡು ದಿನಗಳನ್ನು ಕಳೆಯುತ್ತಾರೆ. ಇವರು ಇಲ್ಲಿಗೆ ಬರಬೇಕಾದರೆ ಮೊದಲೆ ಬುಕ್ ಮಾಡಬೇಕಾಗುತ್ತದೆ. ಇಲ್ಲಿನ ವಿಶೇಷವೆಂದರೆ ಹಳ್ಳಿಯ ಒಳಗೆ ಪ್ರವೇಶಿಸಬೇಕಾದರೆ ಎಲ್ಲಾ ರೀತಿಯ ಆಧುನಿಕ ಉಪಕರಣಗಳನ್ನು ಹೊರಗಡೆಯೆ ಬಿಟ್ಟು ಬರಬೇಕು ಎನ್ನುವುದು ನಿಯಮ. ಆದರೆ ಅದನ್ನು ಅಷ್ಟೊಂದು ಸ್ಟ್ರಿಕ್ಟಾಗಿ ಪಾಲಿಸುತ್ತಿರಲಿಲ್ಲ. ಹಳ್ಳಿಯ ಒಳಗೆ ಕಳೆಯುವುದಕ್ಕೆ ಮೊದಲು ಹಣವನ್ನು ಪಡೆದುಕೊಂಡುಬಿಡುತ್ತಾರೆ. ಕಾರು ಆ ಹಳ್ಳಿಯ ಹತ್ತಿರ ಬಂದು ನಿಂತುಕೊಂಡಿತು.

ಕಾಸ್ಮೋರಾ ಸಿಗ್ಮ ಎಸ್3 ವಾಹನದಲ್ಲಿದ್ದ ತನ್ನ ಸಿಂಪ್ಯೂಟರ್ ಮತ್ತು ಪುಟ್ಟ ಪುಟ್ಟ ರೋಬೋಟ್‌ಗಳನ್ನು ತಬ್ಬಿಕೊಂಡು ಕೆಳಗಿಳಿದರು. ಹಳ್ಳಿಯಲ್ಲಿ ಜೀವಂತ ಪ್ರಾಣಿಗಳನ್ನು ತೋರಿಸುವುದಾಗಿ ಅಶ್ವಿನಿ, ಕಾಸ್ಮೋರಾಗೆ ಹೇಳುತ್ತ ಬರುತ್ತಿದ್ದಳು. ಐಯಾನ್ ವಾಹನವನ್ನು ಹಳ್ಳಿಯ ಮುಂದೆ ಸೆಲ್ಲಾರ್ ನಿಲ್ದಾಣದಲ್ಲಿ ನಿಲ್ಲಿಸಿದ್ದ. ಮೂವರು ಕೆಳಗೆ ಇಳಿದರು. ಅನಂತರ ತಮಗೆ ಬೇಕಾದ ಸಾಮಾನುಗಳನ್ನು ಮಾತ್ರ ಆಳುಗಳು ಕೈಯಲ್ಲಿ ತೆಗೆದುಕೊಂಡು ಬಂದರು.

ಹಳ್ಳಿಯ ಬಾಗಿಲು ಪ್ರವೇಶಿಸುವ ಮುನ್ನ ತಮ್ಮಲ್ಲಿದ್ದ ಟಿಕೆಟ್‌ಗಳನ್ನು ಹೊರಗಿದ್ದ ಅಧಿಕಾರಿಗಳಿಗೆ ತೋರಿಸಿ ಒಳಗೆ ನಡೆದರು. ಇನ್ನೊಂದು ಬಾಗಿಲಿನಲ್ಲಿ ನಿಂತಿದ್ದವರು ಅವರ ಟಿಕೆಟ್‌ಗಳನ್ನು ಮತ್ತೊಮ್ಮೆ ಪರಿಶೀಲಿಸಿ ಅವರಿಗಾಗಿ ಕಾದಿರಿಸಿರುವ ಮನೆ ಕಡೆಗೆ ಗೈಡ್ ಕರೆದುಕೊಂಡು ನಡೆದ. ಅದೊಂದು ಹೆಂಚಿನ ಪುಟ್ಟ ಮನೆ. ಬಾಗಿಲು ತೆಗೆದು ಎಲ್ಲವನ್ನೂ ತೋರಿಸಿ ಗೈಡ್ ಸಾಯಂಕಾಲದ ಆರು ಗಂಟೆಗೆ ತಾವು ಹಳ್ಳಿಯನ್ನು ನೋಡಲು ಹೋಗಬಹುದು ಎಂದ.

ಇವರು ಮಾತನಾಡುತ್ತಿದ್ದ ಭಾಷೆ ಕನ್ನಡವಾದರೂ ಅಶ್ವಿನಿಗೆ ಅರ್ಥವಾಗುತ್ತಿರಲಿಲ್ಲ. ಕಾಸ್ಮೋರಾ ಅಂತೂ ಅವರನ್ನು ಬೇರೆ ಗ್ರಹಗಳ ಜನರನ್ನು ನೋಡುವಂತೆ ನೋಡುತ್ತಿದ್ದಳು. ಅವರು ಹೊರಗೆ ಹೋದ ಮೇಲೆ ಅಶ್ವಿನಿ ಮಗಳ ಜೊತೆಗೆ ಎಲ್ಲವನ್ನೂ ಮತ್ತೆ ನೋಡುತ್ತ ಹೋದಳು. ಮೂರು ಕೋಣೆಗಳ ಆ ಮನೆಯಲ್ಲಿ ವಿಶಾಲ ಲೀವಿಂಗ್ ಕೋಣೆ, ಎರಡು ಬೆಡ್ ರೂಮುಗಳು ಇವೆ. ಹಾಸಿಗೆಗಳ ಮೇಲೆ ಸುಂದರವಾದ ಬಣ್ಣ ಬಣ್ಣದ ಬೆಡ್ ಶೀಟುಗಳನ್ನು ಹಾಸಿದ್ದಾರೆ.

ಗೋಡೆಗಳಲ್ಲಿ ಹಲವು ರೀತಿಯ ಪ್ರಾಣ ಪಕ್ಷಿಗಳ ಚಿತ್ರಗಳಿವೆ. ಡೈನಿಂಗ್ ಟೇಬಲಿನ ಮೇಲೆ ತಟ್ಟೆ ಗ್ಲಾಸು, ಚಮಚಾ, ಸೌಟು, ಚಾಕು, ನೀರಿನ ಮಗ್ಗು ಇತ್ಯಾದಿ ಸಾಮಾನುಗಳಿವೆ. ಹಾಗೆ ಊಟದ ಜೊತೆಗೆ ಉಪಯೋಗಿಸುವ ಉಪ್ಪಿನಕಾಯಿ, ಚಟ್ನಿ , ಉಪ್ಪು , ಮೆಣಸಿನ ಪುಡಿ ಇತ್ಯಾದಿ ಇವೆ. ಒಂದು ಮೂಲೆಯಲ್ಲಿ ಫ್ರಿಡ್ಜ್ ಇದ್ದು ಅದನ್ನು ಅಶ್ವಿನಿ ತೆಗೆದು ನೋಡುತ್ತಾಳೆ. ವಿಧವಿಧ ಹಣ್ಣುಗಳ ಜ್ಯೂಸು ಬಾಟಲುಗಳಿವೆ.

ಮನೆಯಲ್ಲಿದ್ದ ಹಲವು ವಸ್ತುಗಳ ಹೆಸರುಗಳು ಗೊತ್ತಾಗದೆ ಅಶ್ವಿನಿ ಬೆಡ್ ರೂಮಿನಲ್ಲಿದ್ದ ಐಯಾನ್‌ನನ್ನು ಕೂಗಿ ಕೇಳಿದಳು. ಐಯಾನ್ ಎದ್ದು ಬಂದು ಮನೆಯಲ್ಲಿದ್ದ ಎಲ್ಲಾ ವಸ್ತುಗಳನ್ನು ಹೇಳುತ್ತಾ ಹೋದ.

ಕಾಸ್ಮೋರಾ ''ಡ್ಯಾಡಿ ಮೊದ್ಲು ಕಾಲದಲ್ಲಿ ಅಜ್ಜಿ ತಾತ ಇದೆ ತರಹ ಮನೆಗಳಲ್ಲಿ ಇದ್ದರಂತೆ ಹೌದಾ?'' ಎನ್ನುತ್ತಿದ್ದಂತೆ ''ಯಾರು ಹೇಳಿದರು ಕಾಸ್ಮೋ?'' ಐಯಾನ್ ಪ್ರಶ್ನಿಸಿದ.

''ಇನ್ಯಾರು ಮಮ್ಮಿ'' ಎಂದು ಉತ್ತರಿಸಿದಳು.

''ಜಾಣೆ ನೀನು...!'' ಐಯಾನ್ ಅವಳ ಭುಜದ ಮೇಲೆ ತಟ್ಟುತ್ತ ''ನಿನ್ನ ಅಜ್ಜಿ ಅಜ್ಜ ಅಲ್ಲಮ್ಮ.. ಅವರ ಅಜ್ಜಿ ಅಜ್ಜ.. ಇಂತ ಮನೆಗಳಲ್ಲಿ ಇದ್ದದ್ದು. ನಿನ್ನ ಅಜ್ಜಿ ಅಜ್ಜ ಸ್ಮಾರ್ಟ್ ಮನೆಗಳಲ್ಲೆ ಇದ್ದಾರಲ್ಲ !''

''ರೀ ಐಯಾನ್... ಎಲ್ಲಾ ಸರಿ. ಇವಳಿಗೆ ಈ ನೀರಿನಲ್ಲಿ ಸ್ನಾನ ಮಾಡಿ ಏನಾದರೂ ತೊಂದರೆ ಆದರೆ?'' ಅಶ್ವಿನಿ ಹೇಳುತ್ತಿದ್ದಂತೆ.

''ಈ ನೀರಿನಲ್ಲಿ ಸ್ನಾನ ಮಾಡಿದರೆ ಆರೋಗ್ಯಕ್ಕೆ ಒಳ್ಳೇದು'' ಐಯಾನ್ ಮಾತಿಗೆ

''ಏನೋ ನನಗೆ ತುಂಬಾ ಭಯ ಆಗುತ್ತೆ'' ಎಂದಳು ಅಶ್ವಿನಿ. ಐಯಾನ್ ಅಷ್ಟರಲ್ಲಿ ಬಟ್ಟೆ ಬಿಚ್ಚಿ ಸೊಂಟಕ್ಕೆ ಟವಲ್ ಸುತ್ತಿಕೊಂಡು ಬಹಳ ಖುಷಿಯಿಂದ ಸ್ನಾನ ಮಾಡಲು ಸೀಟಿ ಹಾಕುತ್ತ ಬಾತ್ ರೂಮಿಗೆ ಹೊರಟು ಹೋದ.

''ಭದ್ರ ಐಯಾನ್, ನಿಧಾನವಾಗಿ ಹೋಗು. ಜಾರಿ ಬಿದ್ದುಬಿಟ್ಟೀಯಾ?'' ಅಶ್ವಿನಿ ಹಿಂದಿನಿಂದ ಎಚ್ಚರಿಸಿದಳು. ಐಯಾನ್ ಹಲ್ಲುಜ್ಜಿ ಒಳ್ಳೆ ಸಾಬೂನು ಹಚ್ಚಿಕೊಂಡು ಬಿಸಿ ನೀರಿನಲ್ಲಿ ಸ್ನಾನ ಮಾಡಿ ಬೆಡ್‌ರೂಮಿಗೆ ಬಂದು ಮತ್ತೆ ಬಟ್ಟೆಗಳನ್ನು ಧರಿಸಿದ. ಅಶ್ವಿನಿಗೆ ಏನು ಮಾಡಬೇಕೋ ಅರ್ಥವಾಗದೆ ಹಾಗೆ ಕುಳಿತಿದ್ದಾಳೆ. ಪ್ರಯಾಣ ಮಾಡಿ ಬಳಲಿ ಹೋಗಿರುವ ಅಶ್ವಿನಿಗೆ ಸ್ನಾನ ಮಾಡಬೇಕು ಎಂದುಕೊಂಡರೂ ಭಯವಾಗುತ್ತಿದೆ. ಈ ನೀರಿನಲ್ಲಿ ಏನೇನು ಇದೆಯೋ? ಯಾವ ಕಾಯಿಲೆ ಬರುತ್ತದೊ? ಆದರೂ ಫ್ಯಾಮಿಲಿ ವೈದ್ಯರು ಹೇಳಿರುವುದು ಜ್ಞಾಪಕಕ್ಕೆ ಬಂದು ಸ್ನಾನ ಮಾಡಿ ಬರುತ್ತಾಳೆ. ಅವಳು ಮೊದಲೆ ಯೋಚಿಸಿದಂತೆ ಬಟ್ಟೆಗಳನ್ನು

ಧರಿಸಲು ಪ್ರಾರಂಭಿಸಿದಳು. ಇದಕ್ಕೆ ಮುಂಚೆಯೂ ಹೀಗೆ ಹಳ್ಳಿ ಪ್ರದೇಶಗಳನ್ನು ನೋಡಲು ಹೋದಾಗಲೂ ಇದೇ ರೀತಿ ಪ್ರಯತ್ನ ಪಟ್ಟಿದ್ದಳು.

ಈಗ ಐಯಾನ್ ಎದ್ದು ಬಂದು ಅಶ್ವಿನಿಗೆ ಸೀರೆ ಕುಪ್ಪಸವನ್ನು ಹೇಗೆ ಧರಿಸಬೇಕು ಎಂದು ತೋರಿಸಿಕೊಟ್ಟ. ಈ ಹಳ್ಳಿಯಲ್ಲಿ ಇರುವವರೆಗೂ ಇದೇ ರೀತಿಯ ಉಡುಪುಗಳನ್ನು ಧರಿಸಬೇಕು ಎಂದು ಅಶ್ವಿನಿ ತೀರ್ಮಾನಿಸಿದ್ದಳು. ಕೊನೆಯದಾಗಿ ಕಾಸ್ಮೋರಾ ಸರದಿ. ಅವಳಿಗೆ ಏನೇನೊ ಹೇಳಿ ಸ್ನಾನ ಮಾಡಿಸಿ ಬಟ್ಟೆಗಳನ್ನು ಬದಲಿಸಿದಳು. ಅಷ್ಟರಲ್ಲಿ ಐಯಾನ್ ಕರೆಗಂಟೆ ಒತ್ತಿ ಅಲ್ಲಿ ದೊರಕುತ್ತಿದ್ದ ಕೆಲವು ತಿಂಡಿಗಳನ್ನು ತರುವಂತೆ ತಿಳಿಸಿದ್ದ. ಡೈನಿಂಗ್ ಟೇಬಲ್ ಮೇಲೆ ತಿಂಡಿಗಳು ಕುಳಿತಿದ್ದವು. ಮೂವರು ಡೈನಿಂಗ್ ಟೇಬಲ್ ಮುಂದೆ ಕುಳಿತುಕೊಂಡರು.

"ಇದು ಇಡ್ಲಿ... ಇದು ವಡೆ... ಇದು ದೋಸೆ..." ಎನ್ನುತ್ತಾ ತಿಂಡಿಗಳನ್ನು ತಂದಿದ್ದವನು ಮೂರು ತಟ್ಟೆಗಳಿಗೂ ಹಾಕಿಕೊಟ್ಟ. ಜೊತೆಗೆ ಚಟ್ನಿ ಸಾಂಬಾರು ಹಾಕಿ ತಟ್ಟೆಗೆರಡೆರಡು ಚಮಚಾಗಳನ್ನು ಇಟ್ಟ. ಅಶ್ವಿನಿ ಚಮಚಾದಲ್ಲಿ ತಿನ್ನುತ್ತಿದ್ದಂತೆ "ಕೈಯಲ್ಲಿ ತಿಂದರೇನೆ ರುಚಿ...?" ನಿಂತಿದ್ದವನು ಹೇಳಿದ.

"ಅಯ್ಯಯ್ಯೊ ತು..." ಎಂದಳು ಕಾಸ್ಮೋರಾ. ಐಯಾನ್ ಮತ್ತು ಅಶ್ವಿನಿ ನಕ್ಕರು. ಅಶ್ವಿನಿ ಮತ್ತು ಐಯಾನ್ ತಿನ್ನುತ್ತಾ "ಚೆನ್ನಾಗಿದೆ... ಆದರೆ ಸ್ವಲ್ಪ ಕಾರ" ಎಂದು ಮಾತನಾಡಿಕೊಂಡರು.

"ಕಾರ ಸ್ವಲ್ಪ ಇರ್ಲೇ ಬೇಕು. ಇಲ್ಲ ಅಂದರೆ ರುಚಿ ಹೇಗಿರುತ್ತೆ? ಜೀರ್ಣ ಹೇಗಾಗುತ್ತೆ?" ನಿಂತಿದ್ದವನು ಪ್ರಶ್ನಿಸಿದ.

ಮೂವರು ತಿಂದು ಮುಗಿಸಿ ಒಂದೊಂದು ಬ್ಯಾಗನ್ನು ನೇತಾಕಿಕೊಂಡು ಹಳ್ಳಿಯ ಕಡೆಗೆ ಹೊರಟು ನಿಂತರು. ಗೈಡ್ "ಸಾರ್ ಯಾವುದಕ್ಕೂ ಜತೆಯಲ್ಲಿ ಒಂದೊಂದು ಶಾಲು ತೆಗೆದ್ಕೊಂಡೋಗಿ ಚಳಿ ಇರುತ್ತೆ" ಎಂದ.

ಅವನು ಹೇಳೂದು ಸರಿ ಎಂದು ಶಾಲುಗಳನ್ನು ತೆಗೆದುಕೊಂಡರು.



ಐಯಾನ್ ಆ ಹಳ್ಳಿಯ ಪ್ರಾಸ್‌ಫೆಕ್ಟಸ್ ಎಲ್ಲವನ್ನೂ ಸಂಕ್ಷಿಪ್ತವಾಗಿ ಗ್ರಹಿಸಿಕೊಂಡ. ಆ ಹಳ್ಳಿ ಕೆಲವು ನೂರು ಎಕರೆಗಳಲ್ಲಿ ಹರಡಿಕೊಂಡಿರುವ ಒಂದು ಹಳ್ಳಿಯ ಪ್ರತಿರೂಪ. ಆ ರಾತ್ರಿಯನ್ನು ಆಹ್ಲಾದಕರವಾಗಿ ಕಳೆಯಲು ಯುಸ್‌ಐನ ಹಲವಾರು ವಲಯಗಳಿಂದ ನೂರಾರು ಕೋಟ್ಯಾಧಿಪತಿಗಳು ಬಂದಿದ್ದರು. ಜತೆಗೆ ಆ ಹಳ್ಳಿಯಲ್ಲಿ ನಿಜವಾಗಿಯೇ ಜೀವನ ನಡೆಸುತ್ತಿರುವ ಹಳ್ಳಿಯ ಜನರೂ ಇದ್ದರು.

ಕಾಸ್ಮೋರಾ ತನ್ನ ಪುಟ್ಟ ರೋಬೋಟುಗಳು, ಸಿಂಪ್ಯೂಟರು ಇನ್ನಿತರ ವಸ್ತುಗಳಿರುವ ಬ್ಯಾಗನ್ನು ಭುಜಕ್ಕೆ ನೇತಾಕಿಕೊಂಡು ಪುಟ್ಟ ಪುಟ್ಟ ಹೆಜ್ಜೆಗಳಿಟ್ಟು ಅಪ್ಪನ ಹಿಂದೆ ನಡೆಯುತ್ತಿದ್ದಾಳೆ. ಅವಳ ಹಿಂದೆ ಅಶ್ವಿನಿ ಬರುತ್ತಿದ್ದಾಳೆ. ಅದೊಂದು ಹಳ್ಳಿಬಾಗಿಲು. ಬಾಗಿಲು ಮೇಲೆ ತಳಿರು ತೋರಣಗಳು... ದೇವರ ಮೂರ್ತಿಗಳು... ಪಕ್ಕದಲ್ಲೆಲ್ಲ ವಿಧ ವಿಧ ಮರಗಳು... ಕಾಸ್ಮೋರಾ ತಲೆ ಎತ್ತಿ ಬಾಗಿಲನ್ನು ಆಶ್ಚರ್ಯಚಕಿತಳಾಗಿ ನೋಡುತ್ತಿದ್ದಾಳೆ.

ಬಾಗಿಲಿನಲ್ಲಿ ಅತಿಥಿಗಳನ್ನು ಅತಿ ಆದರದಿಂದ ಬರ ಮಾಡಿಕೊಂಡರು. ಹೆಣ್ಣು ಮಕ್ಕಳು ಅವರ ಮೇಲೆ ಪನ್ನೀರು ಚೆಲ್ಲಿ ಹಣೆಗೆ ಕುಂಕುಮವಿಟ್ಟು ಚಂಡು ಹೂವಿನ ಹಾರಗಳನ್ನು ಹಾಕುತ್ತಿದ್ದಂತೆ ಕಾಸ್ಮೋರಾ ತನ್ನ ಬ್ಯಾಗಿನಲ್ಲಿದ್ದ ರೋಬೋಟುಗಳನ್ನು ಹೊರಕ್ಕೆ ತೆಗೆದು ತೋರಿಸಿದಳು. ತರುಣಿಯರು ನಗುತ್ತ ರೋಬೋಟುಗಳ ಮೇಲೆ ಪನ್ನೀರು ಚೆಲ್ಲಿ ಹಣೆಗೆ ಬೊಟ್ಟು ಇಟ್ಟು ಹೂವಿನ ಹಾರಗಳನ್ನು ಹಾಕಿದರು. ಕಾಸ್ಮೋರಾ ಒಮ್ಮೆಲೆ ಖುಷಿಯಾಗಿ ಬಿಟ್ಟಳು.

ಮೂವರನ್ನು ಹಳ್ಳಿಯ ಒಳಕ್ಕೆ ಆಹ್ವಾನಿಸಲಾಯಿತು. ಎಲ್ಲರೂ ಬೀದಿಯಲ್ಲಿ ನಡೆದು ಬರುತ್ತಿದ್ದರೆ ಅವರು ಯಾವುದೊ ವಿಶೇಷವಾದ ವಾತಾವರಣದಲ್ಲಿ ನಡೆಯುತ್ತಿದ್ದಂತೆ ತೋರಿತು. ಬೀದಿಗಳ ಉದ್ದಕ್ಕೂ ಎರಡೂ ಕಡೆ ಬೆಳದಿಂಗಳನ್ನೇ ಚೆಲ್ಲುತ್ತಿರುವ ವಿದ್ಯುತ್ ದೀಪಗಳು, ಎರಡೂ ಕಡೆಯೂ ಹೆಂಚು ಮನೆಗಳು... ಸೋಗೆ ಗುಡಿಸಿಲುಗಳು, ಹೊರಗೆ ಒಳಗೆ ಬುಡ್ಡಿ ದೀಪಗಳು ಮಂದಬೆಳಕಿನಲ್ಲಿ ದೈನಂದಿನ ಕೆಲಸಗಳಲ್ಲಿ ತೊಡಗಿಕೊಂಡಿರುವ ಹಳ್ಳಿ ಜನ. ಉರಿಯುತ್ತಿರುವ ಬೆಂಕಿ ಒಲೆಗಳು... ಬೆಂಕಿಯ ಮೇಲೆ ಕೊತಕೊತನೆ ಕುದಿಯುತ್ತಿರುವ ಸಾರು, ಪಲ್ಯಗಳು. ಮನೆಯ ಮಧ್ಯ ಬುಡ್ಡಿ ದೀಪದ ಸುತ್ತಲೂ ಕುಳಿತು ಓದಿಕೊಳ್ಳುತ್ತಿರುವ ಮಕ್ಕಳು.

ಗೋಡೆಗಳಿಗೆ ನೇತಾಕಿರುವ ದೇವರ ಪಟಗಳು. ಮೂಲೆಗಳಲ್ಲಿ, ಮಡಿಕೆಗಳಲ್ಲಿ ತುಂಬಿಟ್ಟಿರುವ ದವಸ ಧಾನ್ಯಗಳು. ನಾಯಿ... ಬೆಕ್ಕುಗಳು... ಮನೆಯ ಹೊರಗೆ ಜಗಲಿಯ ಮೇಲೆ ಕುಳಿತು ಹರಟುತ್ತಿರುವ ಹಳ್ಳಿ ಜನರು. ಮನೆಯ ವರಾಂಡಗಳಲ್ಲಿ ಕಟ್ಟಾಕಿರುವ ಹಸು, ಎತ್ತು ಎಮ್ಮೆಗಳು... ದೊಡ್ಡಿಗಳಲ್ಲಿ ಕುರಿ ಮೇಕೆ ಹಿಂಡುಗಳು. ಇವುಗಳಿಗೆ ಯಾವ ರೋಗಗಳು ಬರದಂತೆ ಔಷಧಿ ಚುಚ್ಚುಮದ್ದುಗಳನ್ನು ನೀಡಿ ನೋಡಿಕೊಳ್ಳಲಾಗಿತ್ತು.

ಹಳ್ಳಿಯ ಮಧ್ಯದಲ್ಲಿ ಒಂದು ದೇವಸ್ಥಾನ. ಹೊರಗೆ ಶಾಸ್ತ್ರ ಹೇಳುವ ಪೂಜಾರಿ ಕುಳಿತಿದ್ದಾನೆ. ಒಳಗೆ ಶೃಂಗಾರಗೊಂಡಿರುವ ದೇವರ ಮೂರ್ತಿ. ಮೈತುಂಬಾ ಹೂವು, ಒಡವೆ, ವಸ್ತ್ರಗಳ ಅಲಂಕಾರ. ಒಳಗೆ ಗಮ್ಮೆನ್ನುವ ಹೂವು ಗಂಧ ಕರ್ಪೂರದ ವಾಸನೆ. ದೇವರಿಗೆ ಅರ್ಚನೆ ಮಾಡಿ ಆರತಿ ಕೊಡುತ್ತಿರುವ ಪೂಜಾರಿ. ಸುತ್ತಲೂ ನಿಂತು ಪ್ರಸಾದ, ತೀರ್ಥ ಪಡೆಯುತ್ತಿರುವ ಜನರು. ದೇವಾಲಯವನ್ನು ಸುತ್ತಿಸುತ್ತಿ ಎಲ್ಲವನ್ನೂ ನೋಡುತ್ತ ಹೋಗುತ್ತಿದ್ದಂತೆ, "ಅಮ್ಮ ನನ್ಗೆ ಕಾಲು ನೋಯ್ತಾಯಿದೆ?" ಕಾಸ್ಮೋರಾ ರಾಗ ತೆಗೆದಳು.

ಐಯಾನ್ ಅವಳ ಕೈಯಲ್ಲಿದ್ದ ಬ್ಯಾಗನ್ನು ಅಶ್ವಿನಿ ಕೈಗೆ ತೆಗೆದುಕೊಟ್ಟು ತಾನು ಕಾಸ್ಮೋರಾಳನ್ನು ಭುಜದ ಮೇಲಕ್ಕೆ ಏರಿಸಿಕೊಂಡ. ಒಂದೆರಡು ಕ್ಷಣಗಳು ಸುಮ್ಮನಿದ್ದ ಕಾಸ್ಮೋರಾ ''ಅಮ್ಮ ಬ್ಯಾಗು ನನ್ಗೆ ಕೊಡು. ನೀನ್ ಕಳೆದುಬಿಡ್ತಿಯಾ'' ಎಂದು ತನ್ನ ಭುಜಕ್ಕೆ ನೇತಾಕಿಕೊಂಡಳು.

ಐಯಾನ್ ವಿಧಿ ಇಲ್ಲದೆ ನಡೆಯತೊಡಗಿದ.

ಅಲ್ಲೊಂದು ಅರಳಿಕಟ್ಟೆ. ಕಟ್ಟೆಯ ಮಧ್ಯದಲ್ಲಿ ದೊಡ್ಡದಾದ ಅರಳಿ ಮರ ಮತ್ತು ಬೇವಿನ ಮರವಿದೆ. ಮರಗಳಲ್ಲಿ ಹಕ್ಕಿಗಳ ಕಲರವ. ಕಟ್ಟೆಯ ಮೇಲೆ ಹಿರಿಯರು ಕುಳಿತಿದ್ದರೆ ಕೆಳಗೆ ಕಿರಿಯರು, ಹಳ್ಳಿಯ ಜನ ಸುತ್ತಲೂ ಕುಳಿತು ನಿಂತಿದ್ದಾರೆ. ಐಯಾನ್ ಕಾಸ್ಮೋರಾಳನ್ನು ಕೆಳಗೆ ಇಳಿಸಿ ಮೂವರು ಅಲ್ಲಿಗೆ ಬಂದು ನಿಂತುಕೊಳ್ಳುತ್ತಾರೆ.

ಒಬ್ಬ ಯುವಕ ಮತ್ತು ಒಬ್ಬ ಯುವತಿಯನ್ನು ಹಿರಿಯರು ಪ್ರಶ್ನಿಸುತ್ತಿದ್ದಾರೆ. ಹಿರಿಯರು ಕೇಳಿದ ಪ್ರಶ್ನೆಗಳಿಗೆ ಯುವಕ, ಯುವತಿ ಉತ್ತರಿಸುತ್ತಿದ್ದಾರೆ. ಹಳ್ಳಿಯಲ್ಲಿನ ಪ್ರೇಮಕಥೆ ಇರಬಹುದು ಎಂದು ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಂದ ಮೂವರು ಮುಂದಕ್ಕೆ ನಡೆದರು.

ಹಳ್ಳಿಯ ಮಧ್ಯ ಒಂದು ಮೈದಾನ. ಮೈದಾನದಲ್ಲಿ ಒಂದು ಕಡೆ ಕೋಲಾಟ ನಡೆಯುತ್ತಿದೆ. ಇನ್ನೊಂದು ಕಡೆ ಹುಡುಗರು ಕಬಡ್ಡಿ... ಕಬಡ್ಡಿ ಎಂದು ಕಬಡಿ ಆಟ ಆಡುತ್ತಿದ್ದಾರೆ. ಮತ್ತೊಂದು ಕಡೆ ಗಿಲಿದಾಂಡು ಆಟ. ಹಳ್ಳಿಯ ಜನ ಸುತ್ತಲೂ ನಿಂತು ನೋಡುತ್ತಿದ್ದಾರೆ. ಅವರ ಮಧ್ಯ ಹಳ್ಳಿಯನ್ನು ನೋಡಲು ಬಂದಿರುವ ಶ್ರೀಮಂತ ಅತಿಥಿಗಳಿದ್ದಾರೆ. ಕಾಸ್ಮೋರಾ ತಂದೆಯ ಭುಜದ ಮೇಲೆ ಕುಳಿತುಕೊಂಡು ''ಇದು ಯಾವ ಆಟ? ಅದು ಯಾವ ಆಟ'' ಎಂದು ಪ್ರಶ್ನಿಸುತ್ತಿದ್ದಾಳೆ. ಐಯಾನ್ ಹೇಳುತ್ತಲೇ ಹೋಗುತ್ತಿದ್ದಾನೆ.

ಬೀದಿಯ ಉದ್ದಕ್ಕೂ ಹಲವು ರೀತಿಯ ಕುಶಲ ಕರ್ಮಿಗಳು ವಸ್ತುಗಳನ್ನು ತಯಾರಿಸುತ್ತಿದ್ದಾರೆ. ಕುಂಬಾರ ಚಕ್ರವನ್ನು ಕೋಲಿನಲ್ಲಿ ಗಿರಗಿರ ತಿರುಗಿಸಿ ಮಡಿಕೆಗಳನ್ನು ಮಾಡುತ್ತಿದ್ದಾರೆ, ಕಂಬಾರ ಕುಲುಮೆಯ ಮುಂದೆ ಕುಳಿತು ಗಾಳಿಯ ತಿದಿಯನ್ನು ಒತ್ತುತ್ತ ಬೆಂಕಿಯಲ್ಲಿ ಕಬ್ಬಿಣದ ಸಾಮಾನುಗಳನ್ನು ತಯಾರಿಸುತ್ತಿದ್ದಾನೆ. ಹಾಗೆ ಹೋದರೆ ಬೀದಿಯ ಉದ್ದಕ್ಕೂ ಎರಡೂ ಕಡೆ ಹಳ್ಳಿಯಲ್ಲಿ ತಯಾರಾಗುವ ಮತ್ತು ದೊರಕುವ ಎಲ್ಲಾ ವಸ್ತುಗಳನ್ನು ಮಾರುತ್ತಿದ್ದಾರೆ.

ಅಲ್ಲೇ ಮುಂದೆ ಜನರು ಗುಂಪಾಗಿ ನಿಂತು ನೋಡುತ್ತಿದ್ದಾರೆ. ಮಧ್ಯದಲ್ಲಿ ಒಬ್ಬ ಕೋತಿಯನ್ನು ಆಡಿಸುತ್ತಿದ್ದಾನೆ, ಒಬ್ಬಳು ಢಂ... ಢಂ... ಎಂದು ಮದ್ದಳೆ ಬಾರಿಸುತ್ತಿದ್ದಾಳೆ. ಐಯಾನ್ ಭುಜದ ಮೇಲೆ ಕುಳಿತಿರುವ ಕಾಸ್ಮೋರಾ ಒಮ್ಮೆಲೆ ''ಮಮ್ಮಿ... ಮಮ್ಮಿ... ಮಂಕಿ ಮಂಕಿ'' ಎಂದು ಅಪ್ಪನ ಎದೆಯ ಮೇಲೆ ತುಳಿಯುತ್ತ ಕೂಗಾಡತೊಡಗಿದಳು. ಕಾಸ್ಮೋರಾಳನ್ನು ಹೊತ್ತು ಹೊತ್ತು ಸುಸ್ತಾಗಿ ಹೋಗಿದ್ದ ಐಯಾನ್ ಇದೇ ಒಳ್ಳೆಯ ಸಮಯ

ಎಂದು ಗುಂಪಿನ ಮಧ್ಯಕ್ಕೆ ನುಗ್ಗಿ ಕಾಸ್ಮೋರಾಳನ್ನು ಕೋತಿಯ ಮುಂದೆ ನಿಲ್ಲಿಸಿದ. ಕೋತಿಯನ್ನು ಮೊದಲ ಬಾರಿಗೆ ನೇರವಾಗಿ ನೋಡಿದ ಕಾಸ್ಮೋರಾ ಒಮ್ಮೆಲೆ ಚಕಿತಳಾಗಿ ಅದರ ರೂಪ, ಹಾವಭಾವಗಳನ್ನು ತದೇಕಚಿತ್ತದಿಂದ ನೋಡತೊಡಗಿದಳು.

ಸಣ್ಣ ಮುಖ, ಮುಖದ ಮೇಲೆ ಬೊಡಸು ಉಬ್ಬುಗಳು, ಗುಳಿಬಿದ್ದ ಕೆನ್ನೆಗಳು ಸಣ್ಣ ಹಣೆ. ನಿಮಿರಿನಿಂತ ಕೂದಲು, ಕಿವಿಗಳಲ್ಲಿ ಉಂಗುರಗಳು. ಕತ್ತಿನಲ್ಲಿ ಗೆಜ್ಜೆ, ಬಣ್ಣ ಬಣ್ಣದ ಶರ್ಟಿನ ಕೆಳಗೆ ಉದ್ದನೆ ಬಾಲ. ನಿಂತ ಕಡೆ ನಿಲ್ಲದೆ ಚೇಷ್ಟೆ ಮಾಡುತ್ತಿರುವ ಕೈಗಳು. ಕ್ಷಣ ಕ್ಷಣಕ್ಕೂ ವಿಚಿತ್ರವಾಗಿ ಗುರುಗುಡುತ್ತಿರುವ ಕೋತಿ ತನ್ನ ಒಡೆಯ ಹೇಳಿದಂತೆ ಸರ್ಕಸ್ ಮಾಡುತ್ತಿತ್ತು. ಎಲ್ಲರಿಗೂ ನಮಸ್ಕಾರ ಮಾಡುವುದು, ಪಲ್ಟಿ ಹೊಡೆಯುವುದು ಮಾಡುತ್ತಿತ್ತು. ಕೊನೆಯದಾಗಿ ತನ್ನ ಒಡೆಯನ ಆಜ್ಞೆಯಂತೆ ಒಂದು ತಟ್ಟೆ ತೆಗೆದುಕೊಂಡು ಎಲ್ಲರ ಮುಂದೆ ಎರಡು ಕಾಲಿನಲ್ಲಿ ನಿಂತು ಹಣ ಹಾಕುವಂತೆ ಕೇಳುತ್ತಿತ್ತು.

ಕಾಸ್ಮೋರಾ ತನ್ನ ಬ್ಯಾಗಿನಿಂದ ಹಣ ತೆಗೆದು ತಟ್ಟೆಗೆ ಹಾಕಿ, ತನ್ನ ತಂದೆ ತಾಯಿಗೂ ಹಾಕುವಂತೆ ಆಜ್ಞಾಪಿಸಿದಳು. ಒಂದು ರೌಂಡ್ ಆಟ ಮುಗಿಸಿದ ಕೋತಿ ಸ್ವಲ್ಪ ವಿಶ್ರಾಂತಿ ಪಡೆದುಕೊಳ್ಳುತ್ತಿದ್ದಂತೆ ಐಯಾನ್, ಕಾಶ್ಮೋರಾ ಮತ್ತು ಅಶ್ವಿನಿಯನ್ನು ಕರೆದುಕೊಂಡು ಮುಂದೆ ಕಾಣಿಸುತ್ತಿದ್ದ ರಂಗುಲರಾಟ್ನದ ಕಡೆಗೆ ನಡೆದ. ಅಲ್ಲಿ ಸುತ್ತುತ್ತಿದ್ದ ಬಣ್ಣ ಬಣ್ಣದ ಕುದುರೆ ಮತ್ತು ತೊಟ್ಟಿಲುಗಳಲ್ಲಿ ಕುಳಿತುಕೊಂಡರು. ಅವು ಗಿರಗಿರ ತಿರುಗುತ್ತಿದ್ದಂತೆ ಗಾಳಿ ತಣ್ಣಗೆ ಬೀಸುತ್ತಿತ್ತು. ಕಾಶ್ಮೋರಾ ತೊಟ್ಟಿಲಲ್ಲಿ ಕುಳಿತು ಹಗ್ಗಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಳು.

ಅಲ್ಲಿಂದ ಎದುರಿಗಿದ್ದ ಒಂದು ಮರದ ಕೆಳಗೆ ಉಯ್ಯಾಲೆ ಆಡುತ್ತಿದ್ದ ಮಕ್ಕಳನ್ನು ನೋಡುತ್ತ ಮರದ ಕೆಳಗೆ ಹಾಸಿದ ಕಲ್ಲು ಚಪ್ಪಡಿಗಳ ಮೇಲೆ ಕುಳಿತುಕೊಂಡರು. ಬಣ್ಣ ಬಣ್ಣದ ಬೆಲೂನುಗಳನ್ನು ಮಾಡುವವರು ಬಂದು ಎದುರಿಗೆ ನಿಂತುಕೊಂಡ ಐಯಾನ್ ಅವನನ್ನು ಕರೆದು ಕಾಸ್ಮೋರಾಗೆ ಬೇಕಾದ ಬಣ್ಣಗಳ ಬೆಲೂನುಗಳನ್ನು ಕೊಡಿಸಿದ. ಕಾಸ್ಮೋರಾ ಮೊದಲ ಬಾರಿಗೆ ಹಿರಿಹಿರಿ ಹಿಗ್ಗಿ ಹೋಗಿದ್ದಳು. ಯಾವುದನ್ನು ಬಿಡುವುದು ಎನ್ನುವುದು ಅವಳಿಗೆ ತೋರಲಿಲ್ಲ.

"ಡ್ಯಾಡಿ... ಡ್ಯಾಡಿ... ದಿನಾಗಲೂ ಇಲ್ಲಿಗೆ ಬರೋಣ ಡ್ಯಾಡಿ" ಎಂದಳು ಕಾಶ್ಮೋರಾ."

"ಬರೋಣ. ಆದರೆ ಒಂದು ಶರತ್ತು" ಎಂದ ಐಯಾನ್

"ಏನು?" ಕಾಸ್ಮೋರಾ ತುಟಿಗಳನ್ನು ಮುಂದಕ್ಕೆ ತಳ್ಳಿ ಪ್ರಶ್ನಿಸಿದಳು.

"ನನ್ನ ಭುಜದ ಮೇಲೆ ಹತ್ಕೋಬಾರ್ದು"

"ಸರಿ ತೋಳಿನಲ್ಲಿ ಎತ್ತಿಕೊ" ಕಾಸ್ಮೋರಾ ಮಾತಿಗೆ ಇಬ್ಬರು ನಕ್ಕರು. ಎಲ್ಲರೂ ಅಲ್ಲಿ

ಸ್ವಲ್ಪ ಹೊತ್ತು ಸುಧಾರಿಸಿಕೊಂಡರು. ಬ್ಯಾಗಿನಲ್ಲಿದ್ದ ಚಾಕೊಲೆಟ್ ಬಿಸ್ಕತ್‌ಗಳನ್ನು ತಿಂದು, ನೀರು ಕುಡಿದರು.

ಅಲ್ಲೊಂದು ಆನೆಗಳ ಹಿಂಡು ಬರುತ್ತಿದೆ. ಸುತ್ತಲೂ ಮಕ್ಕಳು ಬರುತ್ತಿದ್ದಾರೆ. ಒಂದಷ್ಟು ಜನರು ಆನೆಗಳ ಜೊತೆಗೆ ಫೋಟೊ ತೆಗೆದುಕೊಳ್ಳುತ್ತಿದ್ದಾರೆ. ಐಯಾನ್ ಆಗಲೆ ಕ್ಯಾಮರಾ ಮೂಲಕ ಆ ಹಳ್ಳಿಯ ಸೊಬಗನ್ನು ಚಿತ್ರಿಸಿಕೊಂಡಿದ್ದಾನೆ. ಇನ್ನೊಂದು ಕಡೆಯಿಂದ ಉದ್ದನೆಯ ಗೋಣ ಡುಬ್ಬಿನ ಒಂಟೆಗಳು ಕಾಲುಗಳನ್ನು ಎತ್ತಿ ಎತ್ತಿ ಇಡುತ್ತ ಬರುತ್ತಿದೆ. ಅಲ್ಲೊಬ್ಬ ಕರಡಿಯನ್ನು ಆಡಿಸುತ್ತಿದ್ದಾನೆ. ನವಿಲುಗಳು, ಜಿಂಕೆಗಳು, ಪಾರಿವಾಳಗಳು ಅಡ್ಡಾಡುತ್ತಿವೆ.

''ಇವುಗಳನ್ನು ಎಲ್ಲಿಂದ ತಂದರು?'' ಕಾಶ್ಮೋರಾ ಪ್ರಶ್ನೆ.

''ಕಾಡಿನಿಂದ...'' ಐಯಾನ್ ಉತ್ತರ.

''ಹಾಗಾದರೆ ನಾನು ಕಾಡಿಗೋಗ್ಬೇಕು''

''ಹೋಗೋಣ''

''ಕಾಡು ಎಲ್ಲಿದೆ''

''ಇಲ್ಲೇ ಪಕ್ಕದಲ್ಲೇ ಇದೆ''

''ಮತ್ತೆ ನಡಿ ಹೋಗೋಣ''

''ಬೆಳಿಗ್ಗೆ ಹೋಗೋಣ. ಈಗ ಕಾಡಿನಲ್ಲಿ ಹುಲಿ... ಸಿಂಹ ಎಲ್ಲಾ ಇರುತ್ತೆ...!''



ಮೂವರಿಗೂ ಓಡಾಡಿ ಓಡಾಡಿ ಕಾಲುಗಳಲ್ಲಿ ನೋವು ಕಾಣಿಸಿಕೊಂಡಿತು. ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದುಕೊಂಡು ಊಟದ ಮನೆ ಕಡೆಗೆ ಹೊರಟರು. ಆ ಹಳ್ಳಿಯ ಒಳಗೆ ಹೋದವರಿಗೆ ಹಳ್ಳಿಯ ಶೈಲಿಯಲ್ಲಿ ಮೂರು ಹೊತ್ತು ತಿಂಡಿ ಊಟ ಬಡಿಸುತ್ತಿದ್ದರು. ಊಟದ ಮನೆಯ ಹೊರಗೆ ಹೆಣ್ಣುಮಕ್ಕಳು ಬಂದವರಿಗೆಲ್ಲ ಹಿತ್ತಾಳೆ ಚೆಂಬುಗಳಲ್ಲಿ ನೀರು ಕೊಡುತ್ತಿದ್ದಾರೆ. ಎಲ್ಲರೂ ಕೈಕಾಲು ಮುಖ ತೊಳೆದುಕೊಂಡು ಒಳಗೆ ನೆಲದ ಮೇಲೆ ಹಾಸಿರುವ ಚಾಪೆಗಳ ಮೇಲೆ ಕುಳಿತುಕೊಳ್ಳುತ್ತಾರೆ. ಮುಂದೆ ಒಂದು ಸಣ್ಣ ಮಣೆ ಹಾಕಿ ಮೇಲೆ ಎಲೆ ಹಾಕಿದರು.

ಸುತ್ತಲು ಮಂದ ಬೆಳಕಿನ ಲಾಂದ್ರಗಳು ಉರಿಯುತ್ತಿವೆ. ದೇಶಿ ಶೈಲಿಯ ತಿಂಡಿಗಳನ್ನು ಮರದ ಸೌಟುಗಳಲ್ಲಿ ಬಡಿಸುತ್ತ ಹೋಗುತ್ತಿದ್ದಾರೆ. ಸಿಹಿ, ಹುಳಿ, ಹಪ್ಪಳ, ತುಪ್ಪ ಅನ್ನ ಪಲ್ಯ, ರಸ, ರೊಟ್ಟಿ ಸಾಂಬಾರು, ಬಾಳೆಹಣ್ಣು ತಾಂಬೂಲ ಹೀಗೆ. ಎಲ್ಲರೂ ಬೇಡವೆಂದರೂ

ಪ್ರೀತಿಯಿಂದ ಒತ್ತಾಯ ಮಾಡಿ ಬಡಿಸುತ್ತಿದ್ದಾರೆ. ಸಂತೋಷದಿಂದ ಊಟ ಮಾಡಿದ ಜನ ಹೊರಕ್ಕೆ ಬಂದು ಕೈತೊಳೆದುಕೊಳ್ಳುತ್ತಿದ್ದಾರೆ.

ಎದುರಿಗೆ ಹಳ್ಳಿ ಸಂತೆ. ಎಲ್ಲರೂ ಮತ್ತೊಮ್ಮೆ ಹಳ್ಳಿಯ ಸಂತೆಯೊಳಗೆ ಸೇರಿಹೋದರು. ಐಯಾನ್ ಕುಟುಂಬ ಸಂತೆಯಲ್ಲಿ ಸುತ್ತಾಡಿ ಕೊನೆಗೆ ತಾವು ತಂಗಿದ್ದ ಮನೆ ಸೇರಿಕೊಂಡು ಹಾಸಿಗೆ ಮೇಲೆ ಉರುಳಿಕೊಂಡರು.

ಹಳ್ಳಿಯಲ್ಲಿ ರಾತ್ರಿಯೆಲ್ಲ ಗಲಾಟೆ ನಡೆದೇ ಇತ್ತು. ಕೆಲವು ಕಾರ್ಯಕ್ರಮಗಳು ರಾತ್ರಿ ಒಂದು ಗಂಟೆಗೆ ಮುಗಿದಿದ್ದರೆ ಇನ್ನೂ ಕೆಲವು ಬೆಳಗಿನವರೆಗೂ ನಡೆದೇ ಇದ್ದವು. ಐಯಾನ್ ಕುಟುಂಬದ ಸದಸ್ಯರು ಮರುದಿನ ಬೆಳಗ್ಗೆ ಒಬ್ಬೊಬ್ಬರಾಗಿ ಸ್ನಾನ ಮಾಡಿ ಬಟ್ಟೆ ಬದಲಿಸಿ ತಯಾರಾಗಿ ಕುಳಿತುಕೊಳ್ಳುತ್ತಿದ್ದಂತೆ ಸೇವಕ ಬಂದು ಅಂದಿನ ಕಾರ್ಯಕ್ರಮದ ಬಗ್ಗೆ ತಿಳಿಸಿದ. ಹಳ್ಳಿಯ ಸುತ್ತಮುತ್ತಲೂ ಪ್ರದೇಶವನ್ನು ನೋಡಲು ಎಂಟು ಗಂಟೆಗೆ ಎಲ್ಲರೂ ಹೊರಡಬೇಕಾಗಿತ್ತು. ಮನೆಗೆ ಬೀಗ ಹಾಕಿ ಹೊರಗೆ ಬಂದ ಐಯಾನ್ ಕುಟುಂಬವನ್ನು ಅಲ್ಲಿಯ ಅಡಿಗೆ ಮನೆಗೆ ಆಹ್ವಾನಿಸಲಾಯಿತು. ಅಲ್ಲಿ ಅವರನ್ನು ಕೂರಿಸಿ ಎಲೆಹಾಕಿ ಅವರಿಗೆ ಬೇಕಾದ ತಿಂಡಿಗಳನ್ನು ಬಡಿಸಿದರು. ಕಾಫಿ ಚಹ ಹಾಲು ಯಾವುದು ಬೇಕೋ ಅದನ್ನು ನೀಡಿದರು. ಅನಂತರ ನಾಲ್ಕಾರು ಗುಂಪುಗಳನ್ನು ಮಾಡಿ ಎಲ್ಲರಿಗೂ ಪರಿಚಯ ಮಾಡಿ ಕೊಡಲಾಯಿತು. ಎಲ್ಲರೂ ಪರಿಚಯ ಮಾಡಿಕೊಳ್ಳುತ್ತ ಕೈಕೈ ಕುಲುಕಿದರು. ಎಲ್ಲರನ್ನು ಹೊಲ ಬಯಲುಗಳ ಕಡೆಗೆ ಕರೆದುಕೊಂಡು ಹೊರಟರು. ಎಲ್ಲರೂ ಭುಜಗಳ ಮೇಲೆ ಬ್ಯಾಗುಗಳನ್ನು ಏರಿಸಿಕೊಂಡರು.

ಬ್ಯಾಗುಗಳಲ್ಲಿ ಅವರಿಗೆ ಬೇಕಾದ ಸಾಮಾನುಗಳಿದ್ದವು. ಅವರ ಉಡುಪುಗಳು, ಅವರು ನಡೆಯುತ್ತಿರುವ ಪರಿ, ಅವರ ಸೌಂದರ್ಯ ರೂಪಗಳು ನೋಡುವಂತಿದ್ದವು. ತಮ್ಮ ದೇಹಗಳನ್ನು ಕೈಯಲ್ಲಿ ಹಿಡಿದುಕೊಂಡು ಕಾಲುಗಳನ್ನು ನೆಲದ ಮೇಲೆ ಇಡಬೇಕೊ ಬೇಡವೊ, ಇಟ್ಟರೆ ಏನಾಗಿಬಿಡುತ್ತದೊ ಏನೋ ಎನ್ನುವಂತೆ ನಡೆಯುತ್ತಿದ್ದಾರೆ. ಹಳ್ಳಿಗರು ಇವರು ಯಾವ ಲೋಕದಿಂದ ಬಂದಿರುವ ಜನ ಎಂದು ಅವರನ್ನೇ ನೋಡುತ್ತಿದ್ದಾರೆ.

ಎಲ್ಲಿ ನೋಡಿದರೂ ಹಚ್ಚ ಹಸಿರು ಹೊಲ ಗದ್ದೆ ತೋಟಗಳು, ಗಿಡ ಮರಗಳ ಮಧ್ಯೆ ಮಧ್ಯೆ ಹೂತೋಟಗಳು, ದೂರದಲ್ಲಿ ಹಸಿರು ಹೊದ್ದುಕೊಂಡಿರುವ ತಪ್ಪಲುಗಳು... ಗಿಡ ಮರಗಳು ಮಧ್ಯೆ ಮಧ್ಯೆ ಹಳ್ಳ ಕೊಳ್ಳ ಕಲ್ಲು ಬಂಡೆಗಳು. ಎಲ್ಲರೂ ನಡೆಯುತ್ತಿದ್ದಾರೆ. ಎಲ್ಲರದೂ ಒಂದೇ ಉದ್ಗಾರ.

ಇಲ್ಲಿ ವಾಸಿಸುತ್ತಿರುವ ಜನರು ಎಷ್ಟು ಅದೃಷ್ಟವಂತರೊ ಕಣ್ಣಿಗೆ ಹಸಿರಾಗಿ ಕಾಣಿಸುವ ಗಿಡಮರಗಳು... ಮೈ ಪುಳಕಗೊಳಿಸುವ ತಣ್ಣನೆಗಾಳಿ... ಪಳ ಪಳ ಹರಿಯುತ್ತಿರುವ ನೀರಿನ ಝರಿಗಳು... ಹಸಿ ಹಸಿ ಮಣ್ಣು... ನಿರ್ಮಲ ಆಕಾಶ. ವಿಜ್ಞಾನ ಮನುಷ್ಯರಿಗೆ ವರವೊ ಶಾಪವೊ ಒಬ್ಬರು ಉದ್ಗಾರ ಎಳೆದರು.

ಗಂಡಸರು, ಹೆಂಗಸರು, ಮಕ್ಕಳು, ಪ್ರಿಯ ಪ್ರಿಯತಮೆಯರು ಕೈಕೈ ಹಿಡಿದುಕೊಂಡು ನಡೆಯುತ್ತಿದ್ದಾರೆ. ಮುಂದೆ ಹೋಗುತ್ತಿದ್ದ ಗೈಡ್ ಅಲ್ಲಲ್ಲಿ ನಿಲ್ಲಿಸಿ ''ಇದು ರಾಗಿ ಪೈರು, ಇದು ಭತ್ತದ ಪೈರು, ಇದು ತೊಗರಿ, ಕಬ್ಬು , ಟೊಮೋಟ, ಮೆಣಸಿನಕಾಯಿ, ಇದು ಮಲ್ಲಿಗೆ ಹೂ, ಇದು ಸೇವಂತಿಗೆ, ಇದು ತೆಂಗಿನ ಮರ, ಇದು ಅಡಿಕೆ ಮರ' - ಹೀಗೆ ಪ್ರತಿಯೊಂದನ್ನು ವಿವರಿಸುತ್ತಾ ಹೋಗುತ್ತಿದ್ದಾನೆ. ಎಲ್ಲರೂ ''ಹೌದಾ! ಹೀಗಿರುತ್ತ?'' ಎಂದು ಪ್ರಪಂಚದ ಅದ್ಭುತಗಳನ್ನು ನೋಡುತ್ತಿದ್ದಂತೆ ನೋಡುತ್ತಿದ್ದಾರೆ. ''ಇದನ್ನೆಲ್ಲ ನಾವು ತಿನ್ನುತ್ತೀವ?'' ಎಂದು ಪ್ರಶ್ನಿಸುತ್ತಿದ್ದಾರೆ.

ಸಣ್ಣ ಮಕ್ಕಳಿಗಂತೂ ಆಶ್ಚರ್ಯವೊ ಆಶ್ಚರ್ಯ. ಎಳೆ ಬಿಸಿಲಿನಿಂದ ಎಲ್ಲರ ಮೈಯಲ್ಲೂ ಬೆವರು ಹೊಡೆಯುತ್ತಿದೆ. ಅವರ ದೇಹಗಳಲ್ಲಿ ಬೆವರು ಕಾಣಿಸಿಕೊಂಡಿದ್ದೆ ಎಲ್ಲರೂ ಸಂಭ್ರಮಗೊಂಡರು. ಮೈಯಿಂದ ಬೆವರು ಹೋಗಬೇಕು. ಅದು ಕೆಟ್ಟ ನೀರು. ಅದು ಹೊರಗೆ ಹೋಗುವುದರಿಂದ ಆರೋಗ್ಯಕ್ಕೆ ಒಳ್ಳೆಯದು. ಕೆಲವರಂತೂ ಮಮ್ಮಿ ಡಾಡಿ ನನಗೆ ಬೆವರು ಬಂದು ಸುಸ್ತಾಗಿ ಬಿದ್ದುಬಿಟ್ಟರೆ ಹೇಗೆ ಎನ್ನುವ ಆಲೋಚನೆಯಲ್ಲಿ ಸಿಲುಕಿಕೊಂಡರು. ವಯಸ್ಸಾದವರು ಕೆಲವರು ಹೃದಯ ನಿಂತು ಹೋದರೆ ಹೇಗೆ ಎಂಬುದಾಗಿ ಯೋಚಿಸತೊಡಗಿದರು.

ಆದರೂ ಎಲ್ಲರೂ ಯಾವುದೋ ಒಂದು ಲೋಕಕ್ಕೆ ಬಂದಂತೆ ವಿಸ್ಮಯರಾಗಿದ್ದರು. ಎಲ್ಲರೂ ಮರಗಳ ಕೆಳಗೆ ಸ್ವಲ್ಪ ಸಮಯ ಕುಳಿತು, ನಿಂತು ಸುಧಾರಿಸಿಕೊಂಡರು. ಅನಂತರ ಅಲ್ಲಿಂದ ಸ್ವಲ್ಪ ದೂರದಲ್ಲಿದ್ದ ಒಂದು ದೇವಸ್ಥಾನಕ್ಕೆ ಕರೆದುಕೊಂಡು ಹೋಗಲಾಯಿತು. ಅದು ಗಣಪತಿ ದೇವಸ್ಥಾನ. ಪ್ರಪಂಚದಾದ್ಯಂತ ಲಕ್ಷಾಂತರ ಗಣಪತಿ ದೇವಸ್ಥಾನಗಳು ತುಂಬಿಹೋಗಿವೆ. ಗಣಪತಿ ಯಾವ ರೂಪದಲ್ಲಿ ಇರಬಹುದು? ಯಾವ ಆಕಾರ ಹೊಂದಿರಬಹುದು ಎಂದುಕೊಳ್ಳುತ್ತಿದ್ದರೆ ಗೈಡ್ ''ಶಕ್ತಿ ಗಣಪತಿ ಈ ಪ್ರದೇಶದಲ್ಲಿಯೆ ಹೆಸರುವಾಸಿಯಾದ ದೇವರು'' ಎಂದು ಗಣಪತಿಯ ಬಗ್ಗೆ ಸ್ತುತಿಸತೊಡಗಿದ. ಹಳೆ ದೇವಸ್ಥಾನ ಹಜಾರೆ ಸ್ವಚ್ಛವಾಗಿದೆ. ಒಳಗೆ ಗಂಧ ಊದುಕಡ್ಡಿ , ಕರ್ಪೂರ, ವಿಭೂತಿ, ಹರಿಶಿನ - ಕುಂಕುಮ ವಾಸನೆ. ಗರ್ಭ ಗುಡಿಯಲ್ಲಿ ಪೂಜಾರಿ ಓಂ... ನಮಃ ಶಿವಾಯ... ಓಂ... ಗಣಪತಿ ನಮಃ ಎಂದು ಮಂತ್ರ ಹೇಳುತ್ತ ಅರ್ಚನೆ ಮಾಡಿ ಆರತಿ ತಟ್ಟೆಯೊಂದಿಗೆ ಹೊರಗೆ ಬಂದರು. ಕೆಲವರಿಗೆ ಏನು ಮಾಡಬೇಕೊ ಗೊತ್ತಾಗಲಿಲ್ಲ. ಗೈಡ್ ಹೇಳಿಕೊಟ್ಟ ಮೇಲೆ ಕೆಲವರು ಹಾಗೆ ಮಾಡಿದರು. ಅನಂತರ ತಟ್ಟೆಯಲ್ಲಿ ಕಾಣಿಕೆಯನ್ನು ಹಾಕುವಂತೆ ಗೈಡ್ ತಿಳಿಸಿದ.

ಜನರಿಗೆ ದೇವರ ಮೇಲೆ ಭಕ್ತಿಯೇ ಹೊರಟು ಹೋಗಿದೆ ಎಂದು ಗೊಣಗಿಕೊಂಡರು ಕೆಲವರು. ಮಕ್ಕಳು, ಯುವಕರು ದೇವರ ವಿಗ್ರಹವನ್ನು ನೋಡುತ್ತ ನೋಡುತ್ತ ವಿಚಿತ್ರ ಪ್ರಶ್ನೆಗಳನ್ನು ಕೇಳುತ್ತಿದ್ದರು. ಸರಿಯಾದ ಉತ್ತರವನ್ನು ಯಾರೂ ನೀಡಲಿಲ್ಲ. ದೇವಸ್ಥಾನದ

ಆವರಣದಲ್ಲಿ ಸ್ವಲ್ಪ ಕಾಲ ಕಳೆದ ಮೇಲೆ ಗೈಡ್ ಎಲ್ಲರನ್ನೂ ಒಂದು ಸಣ್ಣ ತಪ್ಪಲಿನ ಕಡೆಗೆ ಕರೆದುಕೊಂಡು ನಡೆದ. ಕಾರ್ಯಕ್ರಮದ ವಿವರ ಮೊದಲೇ ತಿಳಿಸಿರುವುದರಿಂದ ಯಾರೂ ಗೊಣಗುವಂತೆ ಇರಲಿಲ್ಲ. ಎಲ್ಲರೂ ನಿಧಾನವಾಗಿ ಬೆವರು ಸುರಿಸುತ್ತಾ ತಪ್ಪಲು ದಾರಿಯಲ್ಲಿ ನಡೆಯುತ್ತಿದ್ದಾರೆ. ಸುಂದರವಾದ ನೋಟ ಸಣ್ಣ ಸಣ್ಣ ಮಕ್ಕಳು ಅವರ ತಂದೆಯು ಭುಜಗಳ ಮೇಲೆ ಕುಳಿತಿದ್ದಾರೆ. ಕೆಲವರು ತಮ್ಮ ಮಕ್ಕಳನ್ನು ಕೂಲಿ ಆಳುಗಳ ಮೇಲೆ ಏರಿಸಿದ್ದಾರೆ. ಕಾಶ್ಮೀರ ತನ್ನ ಭುಜಕ್ಕೆ ಬ್ಯಾಗನ್ನು ನೇತಾಕಿಕೊಂಡು ಐಯಾನ್ ಭುಜದ ಮೇಲೆ ಕುಳಿತಿದ್ದಾಳೆ.

ಈಗ ಎಲ್ಲರೂ ಪರಿಚಿತರಂತೆ ಮಾತನಾಡಿಕೊಳ್ಳುತ್ತಿದ್ದಾರೆ. ಮಹನಿಯರು ಮಹಿಳೆಯರ ಕಣ್ಣುಗಳಲ್ಲಿ, ಮಹಿಳೆಯರು ಮಹನೀಯರ ಕಣ್ಣುಗಳಲ್ಲಿ ನೋಟ ನೆಟ್ಟು ನಡೆಯುತ್ತಿದ್ದಾರೆ. ಒಳಗೊಳಗೆ ಅರ್ಧ ಮೃಗ ಅರ್ಧ ಮನುಷ್ಯನ ಆಲೋಚನೆಗಳು ಅವರ ತಲೆಯಲ್ಲಿ ತೇಲುತ್ತಿವೆ. ಎ ವಲಯದಲ್ಲಿ ಹೀಗೆ ಗಂಡು ಹೆಣ್ಣನ್ನು, ಹೆಣ್ಣು ಗಂಡನ್ನು ಸಂಧಿಸಿದ್ದರೆ ಇಷ್ಟೊತ್ತಿಗೆ ಎಷ್ಟೋ ಮಾತುಗಳ ಜೊತೆಗೆ ಅಪ್ಪಿಗೆ ಸ್ಪರ್ಶ ಹತ್ತಾರು ಮುತ್ತುಗಳು ವಿನಿಮಯವಾಗಿ ಬಿಡುತ್ತಿದ್ದವು. ಡೇಟಿಂಗ್ ಅಂದರೆ ದಿನಾಂಕಗಳು ಫಿಕ್ಸಾಗುತ್ತಿದ್ದವು.

ಪರಿಚಯವಾದ ಕೆಲವರು ಮಾತ್ರ ಓ... ನೀವು ಅಲ್ಲಿ ಇದ್ದೀರಾ? ನಮಗೆ ಬಹಳ ಹತ್ತಿರದಲ್ಲೇ ಇದ್ದೀರಿ ಎಂದು ಕಣ್ಣುಗಳನ್ನು ಹಾರಿಸುತ್ತಿದ್ದರು. ಗಂಡಸರಿಗೆ ಗೊತ್ತಿಲ್ಲದೆ ಹೆಂಗಸರು, ಹೆಂಗಸರಿಗೆ ಗೊತ್ತಿಲ್ಲದೆ ಗಂಡಸರು ಕಣ್ಣುಗಳಲ್ಲೇ ಮಾತನಾಡಿಕೊಳ್ಳುತ್ತಿದ್ದರು. ಇನ್ನು ಮದುವೆ ಆಗದೆ ಇರುವ ಯುವಕರು ಮತ್ತು ಯುವತಿಯರಂತೂ ಕೈ ಕೈ ಹೆಣೆದುಕೊಂಡು ಹಕ್ಕಿಗಳಂತೆ ಹಾರಾಡುತ್ತಿದ್ದಾರೆ. ಮಧ್ಯ ವಯಸ್ಸಿನವರು ಅವರ ಕಡೆಗೆ ನೋಡಿ ನೋಡದಂತೆ ಒಳಗೊಳಗೆ ಅವರನ್ನು ನೋಡಿ ಹಳೆ ಕನಸುಗಳಲ್ಲಿ ತೇಲಾಡುತ್ತಿದ್ದಾರೆ. ಆದರೆ ಈಚೆಗಂತು ಸೆಕ್ಸ್ ವಿಷಯದಲ್ಲಿ ವಯಸ್ಸಿನ ಅಂತರವಿಲ್ಲ.



ರಾಮಾಯಣ ಮಹಾಭಾರತ ಇನ್ನಿತರ ಹಿಂದೂ ಪುರಾಣಗಳಲ್ಲಿ ಜನರು ಇನ್ನೂರು ಮುನ್ನೂರು ವರ್ಷಗಳ ಕಾಲ ಜೀವಿಸುತ್ತಿದ್ದರು ಎನ್ನುವ ಉಲ್ಲೇಖಗಳು ದೊರಕುತ್ತವೆ. ಅದೇ ರೀತಿಯಾಗಿ ಈ ಕಾಲದಲ್ಲಿ ಜನರಿಗೆ ಇಷ್ಟು ಸೌಕರ್ಯಗಳಿದ್ದರು ಅಷ್ಟು ವರ್ಷಗಳು ಯಾಕೆ ಬದುಕುತ್ತಿಲ್ಲ ಎನ್ನುವ ಪ್ರಶ್ನೆಗಳಿಗೆ ಉತ್ತರ ಹುಡುಕಲು ವಿಜ್ಞಾನಿಗಳು ಪ್ರಪಂಚದಾದ್ಯಂತ ಹಲವು ರೀತಿಯ ಸಂಶೋಧನೆಗಳಲ್ಲಿ ತೊಡಗಿಕೊಂಡಿದ್ದಾರೆ.

ಐಶ್ವರ್ಯವಂತರು ಈಗೀಗ ಜೀನ್ಸ್ ಇಂಜೆಕ್ಷನ್ ತೆಗೆದುಕೊಳ್ಳುವುದರಿಂದ ಹತ್ತರಿಂದ ಹದಿನೈದು ವರ್ಷಗಳ ಕಾಲ ಹೆಚ್ಚಿಗೆ ಬದುಕುವುದಾಗಿ ತಿಳಿದು ಬಂದಿದೆ. ಆದರೆ ಎರಡನೇ ಸಲ ಮತ್ತು ಮೂರನೇ ಸಲ ಜೀನ್ ಇಂಜೆಕ್ಷನ್ ತೆಗೆದುಕೊಂಡರೆ ಯಾವ ಪರಿಣಾಮವು ತೋರದೆ ಇರುವುದು ವಿಜ್ಞಾನಿಗಳಿಗೆ ಸವಾಲಾಗಿದೆ. ವಿಜ್ಞಾನಿಗಳ ಈ ಜೀನ್ಸ್ ಇಂಜೆಕ್ಷನ್ ಸಂಶೋಧನೆಯಿಂದ ಹತ್ತರಿಂದ ಹದಿನೈದು ವರ್ಷಗಳ ಆಯುಷ್ಯ ಹೆಚ್ಚಿಸಿರುವುದೇ ಒಂದು

ಅದ್ಭುತ ಸಂಶೋಧನೆಯಾಗಿದೆ. ಇನ್ನು ಒಂದು ವಿಶೇಷವೆಂದರೆ ಯುವತಿಯರಿಂದ ಬೇರ್ಪಡಿಸಿದ ಜೀನ್ಸ್‌ನ್ನು ಮಹಿಳೆಯರಿಗೆ, ಯುವಕರಿಂದ ಬೇರ್ಪಡಿಸಿದ ಜೀನ್ಸನ್ನು ಗಂಡಸರು ಮಾತ್ರ ತೆಗೆದುಕೊಳ್ಳಬಹುದಾಗಿದೆ.

ಜೊತೆಗೆ ಹಿಂದಿನ ಕಾಲದಲ್ಲಿ ಜನರು ಯೋಗಾಸನಗಳಿಂದ ಹೆಚ್ಚು ಕಾಲ ಬದುಕುತ್ತಿದ್ದರು ಎಂದು ತಿಳಿದು ಬಂದಿತ್ತು. ಮುಖ್ಯವಾಗಿ ಹಿಮಾಲಯ ಅಥವಾ ತಣ್ಣನೆಯ ಹವಾಗುಣದಲ್ಲಿ ಜೀವಿಸುವ ಜನರು ಹೆಚ್ಚು ಕಾಲ ಬದುಕುತ್ತಿದ್ದರು ಎಂದು ತಿಳಿದುಬಂದಿದೆ. ಆದರೆ ಅದೇ ಮನುಷ್ಯ ಸೃಷ್ಟಿಸಿದ ಹವಾ ನಿಯಂತ್ರಣ ಕೊಠಡಿಗಳಲ್ಲಿ ಹೆಚ್ಚು ಕಾಲವಿದ್ದರೆ ಜನರು ಹಲವು ರೀತಿಯ ರೋಗಗಳಿಗೆ ತುತ್ತಾಗುವುದಾಗಿ ತಿಳಿದು ಬಂದಿತ್ತು. ಈಗಲೂ ಜನರು ಹವಾನಿಯಂತ್ರಣಗಳಲ್ಲಿ ಜೀವನ ನಡೆಸುತ್ತಿದ್ದಾರೆ.

ಸುಮಾರು 75 ವರ್ಷಗಳ ಹಿಂದೆ ಅಮೆರಿಕಾದಲ್ಲಿ ಕಂಪ್ಯೂಟರ್‌ಗಳು ಮನುಷ್ಯ ಜೀವನದ ನಡುವೆ ಬಂದಾಗ ಕಚೇರಿ ಮನೆ ಎಲ್ಲರೂ ಹವಾನಿಯಂತ್ರಣವಾಗಬಿಟ್ಟಿದ್ದವು. ಅನಂತರ ಕೇವಲ ಹತ್ತು ಹದಿನೈದು ವರ್ಷಗಳಲ್ಲಿ ಕಂಪ್ಯೂಟರುಗಳ ಜೊತೆಗೆ ಜನರು ಹವಾನಿಯಂತ್ರಣದಿಂದ ಹೊರಕ್ಕೆ ಓಡಿಬರಬೇಕಾಯಿತು. ಯೋಗ ಮಾಡುವುದರ ಮುಖಾಂತರ ದೈಹಿಕ ದೃಢತೆಯನ್ನು ಪಡೆಯಲು ಜನ ಮುಗಿಬಿದ್ದರು. ಅದು ಕೂಡ ಅಷ್ಟು ಸಫಲವಾಗದೆ, ಅನಂತರ ಕೆಲವು ವರ್ಷಗಳು ಹಸಿ ಸೊಪ್ಪು ತರಕಾರಿ ಧಾನ್ಯಗಳನ್ನು ವಿವಿಧ ರೀತಿಯಲ್ಲಿ ಸಂಸ್ಕರಿಸಿ ನೇರವಾಗಿ ತಿನ್ನಲು ಪ್ರಯತ್ನಿಸಿ ನೋಡಿದರು ಅದೂ ಸಫಲವಾಗಲಿಲ್ಲ.

ಇದೇ ರೀತಿಯ ಆಹಾರವನ್ನು ತಿನ್ನುವ ಹಸು, ಕುರಿ, ಮೇಕೆ ಮುಂತಾದ ಪ್ರಾಣಿಗಳ ಆಯುಷ್ಯ ಮನುಷ್ಯರಿಗಿಂತ ಕಡಿಮೆ ಎನ್ನುವ ಉದಾಹರಣೆ ನಮ್ಮ ಮುಂದೆಯೇ ಇದೆ. ಇನ್ನು ಮನುಷ್ಯರು ಹೆಚ್ಚು ವರ್ಷಗಳ ಬದುಕಬೇಕಾದರೆ ಏನು ಮಾಡಬೇಕು? ಅನ್ಯಗ್ರಹಗಳಲ್ಲಿ ಜೀವಿಸುವ ಜನರು ಭೂಮಿಯ ಮೇಲಿರುವ ಜನರಿಗಿಂತ ಹೆಚ್ಚು ವರ್ಷಗಳು ಬದುಕುತ್ತಿದ್ದಾರೆಯೆ?

ಒಂದು ವೇಳೆ ಅವರಿದ್ದರೆ, ಒಂದಲ್ಲ ಒಂದು ದಿನ ಅವರು ಭೂಮಿಗೆ ಬಂದೇ ಬರುತ್ತಾರೆ. ಇದು ವಿಜ್ಞಾನಿಗಳ ಒಂದು ದೃಢ ವಿಶ್ವಾಸ ಮತ್ತು ಪ್ರಸ್ತುತ ಪ್ರಪಂಚದಲ್ಲಿ ಹೆಚ್ಚಾಗಿ ಪ್ರಚಲಿತದಲ್ಲಿರುವ ವಿಷಯ. ಐಯಾನ್ ಮತ್ತು ಅಶ್ವಿನಿ ಮೇಲಿನ ವಿಷಯಗಳನ್ನು ಮಾತನಾಡುತ್ತ ತಮ್ಮ ಫಾರ್ಮ್‌ಹೌಸ್‌ನಲ್ಲಿ ಕುಳಿತಿದ್ದಾರೆ.



ಐಯಾನ್, ಅಶ್ವಿನಿ ಮತ್ತು ಕಾಸ್ಮೋರಾ ಒಂದು ವಾರ ಹಳ್ಳಿ, ಪಟ್ಟಣ ಪ್ರದೇಶಗಳಲ್ಲಿ ಸುತ್ತಾಡಿದ ಮೇಲೆ ಸುಸ್ತಾಗಿ ತಮ್ಮ ಫಾರ್ಮ್‌ಹೌಸ್‌ನಲ್ಲಿ ವಿಶ್ರಾಂತಿ ಪಡೆಯುತ್ತಿದ್ದಾರೆ. ಅವರ ಫಾರ್ಮ್‌ಹೌಸ್‌ನಲ್ಲಿ ಬೆನ್‌ನಗರದ ಸ್ಮಾರ್ಟ್‌ಹೌಸ್‌ನಲ್ಲಿರುವ ಸೌಕರ್ಯಗಳು ಇಲ್ಲದೆ

ಇದ್ದರೂ ಸಾಕಷ್ಟು ಸೌಕರ್ಯಗಳಿವೆ. ಐಯಾನ್ ಮತ್ತು ಅಶ್ವಿನಿ ತಮ್ಮ ತಂದೆ ತಾಯಿ ಮತ್ತು ಗೆಳೆಯರನ್ನು ಆಗಾಗ ಸ್ಕೈ ಸಿಗ್ನಲ್ಸ್ ಮೂಲಕ ಸಂಪರ್ಕಿಸಿ ಮಾತನಾಡುತ್ತಲೆ ಇದ್ದಾರೆ.

ತಮ್ಮ ಸ್ಮಾರ್ಟ್‌ಹೌಸ್‌ನ ಮಾಸ್ಟರ್ ಕಂಟ್ರೋಲ್ ರೋಬೋಟ್ ಸಮಯ ಸಮಯಕ್ಕೆ ಮನೆಯಲ್ಲಿ ನಡೆಯುವ ಪ್ರತಿಯೊಂದು ವಿಷಯವನ್ನೂ ತಿಳಿಸುತ್ತಿದೆ. ಪ್ರಯಾಣದಿಂದ ಸ್ವಲ್ಪ ಬಳಲಿದಂತೆ ತೋರುತ್ತಿರುವ ಕಾಸ್ಮೋರಾಳಿಗೆ ಆರಾಮ ನೀಡಲು ಎರಡು ದಿನದಿಂದ ತಮ್ಮ ಸ್ಮಾರ್ಟ್‌ಹೌಸ್‌ನಲ್ಲಿ ಉಳಿದುಕೊಂಡಿದ್ದಾರೆ. ಫಾರ್ಮ್‌ಹೌಸ್‌ನ ಸೇವಕರು ತಮ್ಮ ಒಡೆಯರಿಗೆ ಬೇಕಾದ ಸೌಕರ್ಯಗಳನ್ನು ಮಾಡುತ್ತಿದ್ದಾರೆ. ಫಾರ್ಮ್‌ಹೌಸ್ ಸುತ್ತಲು ಸೊಗಸಾದ ತೋಟವಿದ್ದು ವಿಧ ವಿಧ ಗಿಡಗಳು ಎಲೆ ಹೂವುಗಳನ್ನು ತುಂಬಿಕೊಂಡು ನಲಿದಾಡುತ್ತಿವೆ. ಕುಡಿಯಲು, ತಿನ್ನಲು ಎಲ್ಲವೂ ಪಕ್ಕದಲ್ಲೇ ಇದ್ದು ಎಲ್ಲವನ್ನೂ ಹತ್ತಿರದ ಪಟ್ಟಣದಿಂದ ತರಿಸಿ ಸ್ಟಾಕ್ ಮಾಡಿಕೊಂಡಿದ್ದಾರೆ. ಸಹಾಯಕ್ಕೆ ಆಳುಗಳಿದ್ದಾರೆ.

ಬೆಳಗಿನ ಸಮಯ ಮೂವರು ಕುಳಿತುಕೊಂಡು ಕಾಫಿ ಕುಡಿಯುತ್ತಿದ್ದಾರೆ. ತಣ್ಣನೆ ಗಾಳಿ ಫಾರ್ಮ್‌ಹೌಸ್‌ನ ಸುತ್ತಲೂ ಸದ್ದು ಮಾಡುತ್ತ ಬೀಸುತ್ತಿದೆ. ಕಾಸ್ಮೋರಾ ಅಪ್ಪ ಅಮ್ಮನನ್ನೆ ಬೊಂಬೆಗಳಾಗಿಸಿಕೊಂಡು ಆಡಿಕೊಳ್ಳುತ್ತಿದ್ದಾಳೆ. ಅವರ ತೊಡೆಗಳ ಮೇಲೆ ಕುಳಿತು ನಿಂತು ಅವರ ಮೂಗು ಕೆನ್ನೆಗಳನ್ನು ಹಿಡಿದುಕೊಳ್ಳುತ್ತ ಗೆಲ್ಲುತ್ತಿದ್ದಾಳೆ. ಅವರು ಎಷ್ಟು ಹೇಳಿದರು ಕೇಳುತ್ತಿಲ್ಲ.

''ಕಾಸ್ಮೋರಾ... ಕಾಸ್ಮೋರಾ ಹೋಗು. ನಿನ್ನ ಫ್ರೆಂಡ್ಸ್ ಜತೆ ಆಡೋಗು'' ಎಂದಳು ಅಶ್ವಿನಿ. ''ನನ್ನ ಫ್ರೆಂಡ್ಸ್ ಎಲ್ಲಿದ್ದಾರೆ? ಶಾಲೆಗೋದರೆ ತಾನೆ ಫ್ರೆಂಡ್ಸ್ ಸಿಗೋದು?'' ''ಅವರಲ್ಲ ಇಲ್ಲಿ ಇಲ್ಲವ? ರೋಬೋಟ್ ಫ್ರೆಂಡ್ಸ್'' ಐಯಾನ್ ರೋಬೋಟ್‌ಗಳ ಕಡೆಗೆ ಕೈ ತೋರಿಸುತ್ತ ಹೇಳಿದ.

''ನನ್ನ ಫ್ರೆಂಡ್ಸ್‌ಗೆ ಎಷ್ಟು ಹೊಡೆದರು ನನ್ನನ್ನು ಹೊಡೆಯೋದೆ ಇಲ್ಲ, ಕಚ್ಚುವುದು ಇಲ್ಲ, ನಾನ್ ಹೊಡೆದರೆ ಅಳ್ತಾರೆ...?'' ಎಂದಳು. ಐಯಾನ್, ಅಶ್ವಿನಿ ಇಬ್ಬರು ನಕ್ಕರು.

''ಈಗ ನೀನ್ ಇದೆ ತರಹ ಆಡಿದರೆ, ನಾವು ನಿನ್ಗೆ ಕಚ್ಚುತ್ತೀವಿ.'' ಐಯಾನ್ ಹೇಳಿದ್ದೆ ತಡ. ಕಾಸ್ಮೋರಾ ಐಯಾನ್ ಕೆನ್ನೆಯನ್ನು ಕಚ್ಚಲು ಮುಂದಾದಳು. ಅವಳನ್ನು ಐಯಾನ್ ತಡೆದ.

ಅಷ್ಟರಲ್ಲಿ ಎದುರಿಗಿದ್ದ ಹೋಮ್ ಥಿಯೆಟರ್ ಪರದೆಯ ಮೂಲೆಯೊಂದರಲ್ಲಿ ಒಂದು ವಿಷಯ ಕಾಣಿಸಿಕೊಂಡಿತು. ಐಯಾನ್ ಬಟನ್ ಒತ್ತಿ ವಿಷಯವನ್ನು ಪರದೆಯ ಮಧ್ಯಕ್ಕೆ ತಂದ. ಪರದೆಯ ಮೇಲೆ ಅಶ್ವಿನಿಯ ಚಿಕ್ಕಮ್ಮ ಕಾಣಿಸಿಕೊಂಡಳು. ''ಹಲೋ ಚಿಕ್ಕಮ್ಮ?'' ಅಶ್ವಿನಿ ಕೂಗಿಕೊಂಡಳು. ''ಹಲೊ ಅಶ್ವಿನಿ... ಹಲೊ ಐಯಾನ್...?'' ''ಯಾಕೆ ಏನಾಯಿತು? ಚಿಕ್ಕಮ್ಮ ಒಂದು ತರಹ ಕಾಣಿಸ್ತಾ ಇದ್ದೀಯಾ...? ಆಸ್ಪತ್ರೆಯಲ್ಲಿ ಇದ್ದಂತಿದ್ದೀಯಾ? ಏನಾಯಿತು...?'' ಅಶ್ವಿನಿ ಗಾಬರಿಯಾಗಿ ಪ್ರಶ್ನಿಸಿದಳು.

"ಅಶ್ವಿನಿ ನಿಮ್ಮ ತಂದೆಗೇ ಆಕ್ಸಿಡೆಂಟ್ ಆಗಿದೆ. ಆಸ್ಪತ್ರೆಯಲ್ಲಿದ್ದಾರೆ. ಪ್ರಾಣಕ್ಕೆ ಏನೂ ಅಪಾಯ ಇಲ್ಲ" ಒಂದು ಕಾಲು ಮೊಣಕಾಲದವರೆಗೂ ಕತ್ತರಿಸಬೇಕಾಗುತ್ತೆ" ಎಂದಳು.

"ಏನಾಯಿತು...?"

"ಕಾರು ಆಕ್ಸಿಡೆಂಟ್..." "ಇಲ್ಲ" "ವಿಮಾನ ಆಕ್ಸಿಡೆಂಟಾ?" "ಇಲ್ಲ !" "ಮತ್ತೆ ಇನ್ನೇನು?" "ನಿಮ್ಮ ತಂದೆ ಕಾರು ನಿಲ್ಲಿಸಿ ಮನೆಗೆ ಬರ್ತಾ ಇದ್ದರೆ ಒಂದು ಹುಚ್ಚು ರೋಬೋಟ್ ಬಂದು ಕಾಲ್ನ ಹಿಡಿದ್ಕೊಂಡುಬಿಟ್ಟಿದೆ. ಏನು ಮಾಡಿದರು ಬಿಡಲಿಲ್ಲವಂತೆ. ಕಾಲ್ನ ಕಚ್ಚಿ ಕಚ್ಚಿ ಎಲುಬುಗಳ್ನೆಲ್ಲ ಪುಡಿ ಪುಡಿ ಮಾಡಿಬಿಟ್ಟಿದೆ" "ರೋಬೋಟ್ಟಾ..?" "ಹೌದು!" "ಅದಕ್ಕೇನಾಯಿತೊ...?" "ಆ ರೋಬೋಟ್ ಕಂಟ್ರೋಲ್ ಇಲ್ಲದೆ ಬೀದಿ ಅಲೆಯುತ್ತ ಇತ್ತು ಅನಿಸುತ್ತೆ" "ಓ! ದೇವರೆ ಈ ರೋಬೋಟ್ಸ್‌ನೆಲ್ಲ ಸಮುದ್ರದಲ್ಲಿ ಹೂತುಬಿಡಬೇಕು. ತಲೆ ಕೆಟ್ಟು ರೋಬೋಟ್‌ನಿಂದ ದೊಡ್ಡ ತಲೆ ನೋವಾಗಿಬಿಟ್ಟಿದೆ. ಈಗ ಹೇಗಿದ್ದಾರೆ...?"

"ಆಪರೇಷನ್ ನಡಿತಾ ಇದೆ." "ನಾವು ನೋಡಬಹುದಲ್ಲ?" ಐಯಾನ್ ಕೇಳಿದ. "ಇರಿ ಮೆನೇಜ್‌ಮೆಂಟ್‌ನವರ್ನ ಕೇಳ್ತೀನಿ" ಅಶ್ವಿನಿ ಚಿಕ್ಕಮ್ಮ ಒಳಗೋದಳು. "ನಾವು ಈಗ್ಲೆ ಹೋಗ್ಬೇಕು" ಅಶ್ವಿನಿ ಹೇಳಿದಳು. "ನಾವು ಈಗ್ಲೆ ಹೋಗುವುದಕ್ಕಿಂತ ಆಪರೇಷನ್ ಇಲ್ಲಿಂದ್ಲೆ ನೋಡ್ಕೊಂಡು ಆಮೇಲೆ ಹೋಗಬಹುದಲ್ಲ?" ಐಯಾನ್ ಅಶ್ವಿನಿಗೆ ಹೇಳಿದ. ಅಶ್ವಿನಿ ಏನೂ ಹೇಳದೆ ಪರದೆಯನ್ನು ನೋಡುತ್ತ ಕಣ್ಣೀರು ಹಾಕಿಕೊಂಡಳು. ಹೆಣ್ಣು ಮಕ್ಕಳ ಕಣ್ಣಲ್ಲಿ ಅದೂ ಈ ಕಾಲದಲ್ಲಿ ಕಣ್ಣೀರು ಬರುತ್ತ ಎಂದುಕೊಂಡ ಐಯಾನ್.

ಅಶ್ವಿನಿ, ಐಯಾನ್ ಕಡೆಗೊಮ್ಮೆ ನೋಡಿದಳು. "ಏನೂ ಆಗಲಿಲ್ಲ, ಕಾಲು ತಾನೆ...? ಒಂದು ತಿಂಗಳಲ್ಲಿ ಎಲ್ಲಾ ಸರಿಹೋಗುತ್ತೆ" ಎಂದ. ಕಾಸ್ಮೋರಾ ಅಳುವುದನ್ನು ನಿಲ್ಲಿಸಿ "ಮಮ್ಮಿ... ಮಮ್ಮಿ... ಏನಾಯಿತು ಮಮ್ಮಿ...?" ಕೇಳಿದಳು. "ನಿಮ್ಮ ತಾತನ್ನ ರೋಬೋಟ್ ಕಚ್ಚಿಬಿಡ್ತಂತೆ" "ಮತ್ತೆ ನನ್ನ ರೋಬೋಟ್ಸ್ ಕಚ್ಚದೆ ಇಲ್ಲ" "ಅವು ಒಳ್ಳೆ ರೋಬೋಟ್ಸ್" ಐಯಾನ್ ಹೇಳಿದ. "ಆ ರೋಬೋಟ್ ಎಲ್ಲಿದೆ...? ನನ್ನ ರೋಬೋಟ್ಸ್‌ಗೇಳಿ ಅದನ್ನು ಕಚ್ಚಿಸಿಬಿಡ್ತೀನಿ" ಕಾಸ್ಮೋರಾ ಹೇಳುತ್ತಿದ್ದಂತೆ ಚಿಕ್ಕಮ್ಮ ಹೊರಕ್ಕೆ ಬಂದು ಸ್ಕೈ ಸಿಗ್ನಲ್ ಸಂಪರ್ಕದ ಸಂಖ್ಯೆಯನ್ನು ಹೇಳಿದಳು. ಐಯಾನ್ ತಕ್ಷಣವೇ ಸ್ಕೈ ಸಿಗ್ನಲ್ ಮುಖಾಂತರ ಸಂಪರ್ಕ ಪಡೆದ.

ಆಪರೇಷನ್ ನಡೆಯುತ್ತಿರುವುದು ಪರದೆಯ ಮೇಲೆ ಕಾಣಿಸಿಕೊಂಡಿತು. ಅಶ್ವಿನಿ ತಂದೆಯನ್ನು ಹಾಸಿಗೆ ಮೇಲೆ ಮಲಗಿಸಿದ್ದಾರೆ. ಅವರ ಕಾಲನ್ನು ಆಗಲೇ ಪೂರ್ಣವಾಗಿ ಮರದ ಕೊಂಬೆಯನ್ನು ರಂಪದಲ್ಲಿ ಕತ್ತರಿಸಿದಂತೆ ನೀಟಾಗಿ ಕತ್ತರಿಸಿದ್ದಾರೆ. ಅದಕ್ಕೆ ರಕ್ತ ಸುರಿಯದಂತೆ ಒಂದು ಕೆಂಪು ಸೆಲೂಲಾಯ್ಡ್ ಸ್ಟಿಕ್ಕರನ್ನು ಮೆತ್ತಿಸಿದ್ದಾರೆ. ತೊಟ್ಟು ರಕ್ತವೂ ಕೆಳಗಡೆಗೆ

ಬೀಳುತ್ತಿಲ್ಲ. ಬಾಯಿಗೆ ಆಮ್ಲಜನಕದ ಕವಚ ಹಾಕಲಾಗಿದೆ. ಕಂಪ್ಯೂಟರ್ ಮಾನಿಟರ್, ರೋಗಿ ಎಲ್ಲಾ ರೀತಿಯಲ್ಲೂ ಆರೋಗ್ಯವಾಗಿ ಇರುವುದಾಗಿ ತೋರಿಸುತ್ತಿದೆ.

ವೈದ್ಯರು ಆ ಕಾಲಿಗೆ ಸರಿಯಾದ ಅದೇ ಆಕಾರದ ಎಲ್ಲಾ ರೀತಿಯಲ್ಲೂ ಸರಿ ಹೊಂದುವಂತಹ ಕಾಲನ್ನು ಆಗಲೆ ಅಳತೆ ಮಾಡಿ ಆಸ್ಪತ್ರೆಯ ಆವರಣದಲ್ಲಿರುವ ಸ್ಪೆಷಲ್ ಸ್ಟೆಮ್‌ಸೆಲ್ ಬ್ಯಾಂಕಿನಿಂದ ಕಾಂಡ ಕೋಶಗಳ ಮುಖಾಂತರ ಬೆಳೆಸಿದ ಕಾಲನ್ನು ತರಲು ಆದೇಶಿಸಿದ್ದಾರೆ. ಅದನ್ನು ತರಲು ಜೂನಿಯರ್ ವೈದ್ಯರು ಹೋಗಿದ್ದು ಅವರಿಗಾಗಿ ವೈದ್ಯರು ಕಾಯುತ್ತಿದ್ದಾರೆ.



ದೇಶ ವಿದೇಶಗಳ ಹಲವು ಪ್ರಯೋಗಾಲಯಗಳಲ್ಲಿ ವೀರ್ಯಾಣು ಮತ್ತು ಅಂಡಾಣುಗಳ ಸಂಯೋಗದಿಂದ ಐದಾರು ವಾರಗಳ ಭ್ರೂಣ ಕೋಶಗಳನ್ನು ಪ್ರತ್ಯೇಕಿಸಿ ಅವುಗಳಿಂದ ತಮಗೆ ಬೇಕಾದ ಅಂಗಾಂಗಳನ್ನು ಬೆಳೆಸುವುದರಲ್ಲಿ ವಿಜ್ಞಾನಿಗಳು ಸಫಲವಾಗಿರುವುದು ಒಂದು ಅದ್ಭುತ ವಿಷಯವಾಗಿದೆ. ಅಶ್ವಿನಿ ತಂದೆಗೆ ಅಂತಹ ಕಾಂಡ ಕೋಶಗಳಿಂದ ಬೆಳೆಸಿದ ಅದೇ ಆಕಾರದ ಕಾಲನ್ನು ಸ್ಟೆಮ್ ಸೆಲ್ ಬ್ಯಾಂಕ್‌ನಿಂದ ತರಲಾಯಿತು.

ಬೆನ್ ನಗರದ ನ್ಯಾಷನಲ್ ಸೆಂಟರ್ ಫಾರ್ ಬಯಲಾಜಿಕಲ್ ಸೈನ್ಸ್ ಎಲ್ಲಾ ರೀತಿಯ ಅಂಗಾಂಗಳನ್ನು ತಯಾರಿಸುತ್ತಿದೆ. ಅದು ಬೆನ್ ನಗರದ ಕೆಲವು ಮುಖ್ಯ ಆಸ್ಪತ್ರೆಗಳ ಆವರಣಗಳಲ್ಲಿ ತನ್ನ ಔಟ್‌ಲೆಟ್‌ಗಳನ್ನು ಇಟ್ಟುಕೊಂಡಿದೆ. ಕಾಲುಗಾಗಿ ಕಾಯುತ್ತಿದ್ದ ವೈದ್ಯರು ಆ ಕಾಲನ್ನು ಕತ್ತರಿಸಿ ಕಾಲಿಗೆ ಸರಿಯಾಗಿ ಹೊಂದುವಂತೆ ಗ್ರಾಫ್ಟಿಂಗ್ ಮಾಡಿ ಜೋಡಿಸಿ ಕಟ್ಟು ಹಾಕಿಬಿಟ್ಟರು.

ಕೇವಲ ಅರ್ಧ ಗಂಟೆಯಲ್ಲಿ ಎಲ್ಲವನ್ನೂ ಮುಗಿಸಿದ ವೈದ್ಯರು ಅಶ್ವಿನಿ ತಂದೆಯನ್ನು ಇನ್ನೊಂದು ಕೋಣೆಗೆ ಬದಲಾಯಿಸಿದರು. ಅಶ್ವಿನಿ ತಂದೆ ಒಂದು ಗಂಟೆಯ ನಂತರ ಹಾಸಿಗೆ ಮೇಲೆ ಮಲಗಿಕೊಂಡೆ ಕಣ್ಣು ತೆರೆದು ಸುತ್ತಲು ನೋಡಿದರು. ಆತನ ಪತ್ನಿ ಪಕ್ಕದಲ್ಲಿ ಕುಳಿತುಕೊಂಡು ಅವರಿಗೆ ನಡೆದ ವಿಷಯವನ್ನೆಲ್ಲ ತಿಳಿಸಿ ಹಾಗೆ ಅಶ್ವಿನಿ ಆತನನ್ನು ನೋಡುತ್ತಿರುವುದಾಗಿ ತಿಳಿಸಿದಳು.

ಅಶ್ವಿನಿ ''ಹಲೋ... ಪಾಪ! ಸಾರಿ, ಇದೆಲ್ಲ ಹೇಗಾಯಿತು?''

''ಅಯ್ಯೊ ಬಿಡಮ್ಮ. ಅದ್ಯಾವುದೊ ತಲೆ ಕೆಟ್ಟ ರೋಬೋಟ್ ಕಚ್ಚಿಬಿಡ್ತಮ್ಮ'' ಎಂದು ನಕ್ಕರು.

''ನಾವು ಈಗ್ಲೆ ಬರ್ತೀವಿ'' ಅಶ್ವಿನಿ ಹೇಳಿದಳು.

"ಅಯ್ಯೋ ಬಿಡಮ್ಮ. ನೀವು ಟೂರ್‌ನಲ್ಲಿದ್ದೀರಿ. ಆರಾಮಾಗಿ ಸುತ್ತುಕೊಂಡು ಬನ್ನಿ. ಇನ್ನೇನು ಎಲ್ಲಾ ಸರಿಹೋಯ್ತಲ್ಲ, ನಾಳೇನೆ ಡಿಸ್‌ಚಾರ್ಜ್ ಆಗಿ ಮನೆಗೆ ಹೊರಟೋಗ್ತೀವಿ. ನೀವು ಆರಾಮಾಗಿ ಸುತ್ತಾಡಿ ಬನ್ನಿ."

ಐಯಾನ್ "ಸರಿ ಈಗಾಗಬಾರದಿತ್ತು" ಎಂದ.

"ಇಟ್ಸ್ ಓಕೆ... ಎಲ್ಲಿ ಕಾಸ್ಮೋರಾ... ಏನು ಮಾಡ್ತಾ ಇದ್ದೀಯಾ?"

"ಎಲ್ಲಿ ನಿಮ್ಮ ಕಾಲು ರೋಬೋಟ್ ಕಚ್ಚಿಬಿಡ್ತಾ?" ಕಾಸ್ಮೋರಾ ಕೇಳಿದ್ದೆ ಎಲ್ಲರೂ ನಗಲಾರದೆ ನಕ್ಕರು. "ಓಕೆ ಸಿಯು" ಎಂದು ಒಬ್ಬರಿಗೊಬ್ಬರು ಕೈ ಬೀಸಿದರು. ಸಂಪರ್ಕ ಕಡಿದುಕೊಂಡಿತು.

ಹೀಗೆ ಸುಮಾರು 25 ವರ್ಷಗಳ ಹಿಂದೆ ಕಾಂಡಕೋಶಗಳಿಂದ ಅಂಗಾಂಗಳನ್ನು ಸೃಷ್ಟಿಸುವ ಮುನ್ನ ಅಮೆರಿಕಾದ ಐಶ್ವರ್ಯವಂತರು ತಮ್ಮದೆ ಆದ ಕಾಂಡಕೋಶಗಳಿಂದ ತದ್ರೂಪಿಗಳನ್ನು ತಯಾರು ಮಾಡಿ ಇಟ್ಟುಕೊಳ್ಳುತ್ತಿದ್ದರು. ತಾವು ಯಾವುದೇ ರೀತಿಯ ಅಪಘಾತಗಳಿಂದ ಅಥವಾ ರೋಗಗಳಿಂದ ಬಳಲುವಂತಾದರೆ ತಮ್ಮದೆ ತದ್ರೂಪಿಗಳ ಅಂಗಾಂಗಳನ್ನು ಪಡೆದುಕೊಳ್ಳುತ್ತಿದ್ದರು. ಇದರಿಂದ ಅಮೆರಿಕಾದಲ್ಲಿ ತದ್ರೂಪಿಗಳು ತಮ್ಮ ಅಂಗಾಂಗಳನ್ನು ಕಳೆದುಕೊಂಡು ಹೀನ ಸ್ಥಿತಿಗೆ ತಲುಪಿದ್ದರು. ಮುಖ್ಯವಾಗಿ ಮನುಷ್ಯ ತದ್ರೂಪಿಗಳನ್ನು ಅನೇಕ ರೀತಿಯಲ್ಲಿ ತೊಂದರೆಗೆ ಒಳಪಡಿಸಿದ್ದರು. ಇದನ್ನು ಗಮನಿಸಿದ ಅನೇಕ ಜನಪರ ಸಂಘಟನೆಗಳು ಪ್ರಪಂಚದಾದ್ಯಂತ ತದ್ರೂಪಿಗಳಿಗೆ ನೀಡುತ್ತಿದ್ದ ತೊಂದರೆಗಳನ್ನು ಪ್ರತಿಭಟಿಸಿ ತದ್ರೂಪಿಗಳನ್ನು ಸೃಷ್ಟಿಸಬಾರದೆಂದು ಭಾರಿ ಪ್ರತಿಭಟನೆಗಳು ನಡೆದು ತದ್ರೂಪಿಗಳನ್ನು ಸೃಷ್ಟಿಸುವುದನ್ನು ನಿಲ್ಲಿಸಲಾಯಿತು. ಈ ನಡುವೆ ಕಾಂಡಕೋಶಗಳಿಂದಲೆ ಅಂಗಾಂಗಗಳನ್ನು ನೇರವಾಗಿ ಸೃಷ್ಟಿಸುವ ವಿಧಾನ ಬೆಳಕಿಗೆ ಬಂದುಬಿಟ್ಟಿತು.



ಯುಎಸ್‌ಐನ ದಕ್ಷಿಣದಲ್ಲಿರುವ ತಮಿಳು ದೇಶದಲ್ಲಿ ಒಂದು ಪವಿತ್ರ ಸ್ಥಳವಿದ್ದು ಅಲ್ಲಿ ನಾನಾ ರೀತಿಯ ದೇವರುಗಳು ಮತ್ತು ದೇವತೆಗಳ ದೇವಾಲಯಗಳನ್ನು ಸ್ಥಾಪಿಸಿರುವುದಾಗಿ ತಿಳಿದುಬಂದಿತು. ಅಲ್ಲಿಗೆ ಹೋಗುವುದೊ? ಇಲ್ಲ ಕೇರಳ ದೇಶದ ಹಿನ್ನೀರಿನಲ್ಲಿ ಈಜಾಡಿ ಬರಬೇಕೊ? ಯಾವ ಕಡೆಗೆ ಹೋಗುವುದು ಎಂದು ಅಶ್ವಿನಿ ಮತ್ತು ಐಯಾನ್ ಭಾರಿ ಯೋಚನೆಯಲ್ಲಿ ಬಿದ್ದರು. ಸರಿ, ರಾತ್ರಿಯೊಳಗೆ ನಿರ್ಧರಿಸಿ ನಾಳೆ ಬೆಳಗ್ಗೆ ಯಾವುದಾದರೂ ಒಂದು ಪ್ರದೇಶವನ್ನು ಸುತ್ತಿ ಬರಲು ನಿಶ್ಚಯಿಸಿಕೊಂಡರು.

ಸಾಯಂಕಾಲ ಐಯಾನ್, ಅಶ್ವಿನಿ, ಕಾಸ್ಮೋರಾ ಮೂವರು ತೋಟದಲ್ಲಿ ನಿಧಾನವಾಗಿ ವಿಹಾರ ಮಾಡುತ್ತಿದ್ದು ತಣ್ಣನೆ ಗಾಳಿ ಅವರನ್ನು ಸವರುತ್ತ ಸಾಗುತ್ತಿದೆ. ಫಾರ್

ಮನೆಯ ಉಸ್ತುವಾರಿಯನ್ನು ನೋಡಿಕೊಳ್ಳುವ ನಾರಾಯಣ ಅವರ ಚಲನವಲನಗಳನ್ನೇ ಗಮನಿಸುತ್ತ ಸ್ವಲ್ಪ ದೂರದಲ್ಲಿ ಹಿಂದೆಯೆ ನಡೆದು ಬರುತ್ತಿದ್ದಾನೆ.

''ಏನು ನಾರಾಯಣ ಎಲ್ಲಾ ಸರಿಯಾಗಿ ನಡಿಯ್ತಾ ಇದೆ ತಾನೆ?''

''ನಡಿಯ್ತಾ ಇದೆ ಸರ್''

''ಒಂದನೇ ತಾರೀಖು ಬ್ಯಾಂಕಿನಿಂದ ಹಣ ತೆಗೆದ್ಕೊಂಡು ಎಲ್ಲರಿಗೂ ಸಂಬಳ ಕೊಡ್ತಾ ಇದ್ದಿಯಾ ತಾನೇ''

''ಕೊಡ್ತಾ ಇದ್ದೀನಿ ಸರ್. ಆದರೆ?''

''ಆದರೆ?''

''ಎಲ್ಲರೂ ಸ್ವಲ್ಪ ಸಂಬಳ ಜಾಸ್ತಿ ಮಾಡ್ಬೇಕು ಅಂತ ಕೇಳ್ತಾ ಇದ್ದಾರೆ?''

''ಎಷ್ಟು ಕೇಳ್ತಾ ಇದ್ದಾರೆ? ಒಂದು ಹತ್ತು ಪರ್ಸೆಂಟ್ ಕೊಟ್ಟುಬಿಡು, ಎಲ್ಲರದು ಲಿಸ್ಟ್ ಮಾಡಿ ನಾಳೆ ಕೊಡು. ಇನ್ನೇನು ತೊಂದರೆ ಇಲ್ಲ ತಾನೆ?''

''ಏನೂ ಇಲ್ಲ ಸರ್. ಒಂದೇ ಒಂದು ತಪ್ಪು ನಡೆದೋಯಿತು ಸರ್''

''ಅದೇನು?'' ನಡೆಯುತ್ತಿದ್ದ ಐಯಾನ್ ತಕ್ಷಣವೇ ನಿಂತುಕೊಂಡುಬಿಟ್ಟ ಹಿಂದೆ ಬರುತ್ತಿದ್ದ ಅಶ್ವಿನಿ ಕೂಡ ನಿಂತುಕೊಂಡುಬಿಟ್ಟಳು.

''ಏನು ಏನಾಯಿತು?'' ಐಯಾನ್ ಮತ್ತೆ ಕೇಳಿದ.

''ನಮ್ಮ ಫಾರ್ಮ್‌ನಲ್ಲಿ ಕೆಲಸ ಮಾಡ್ತಿದ್ದವನು ಅವ್ನ ಹೆಂಡ್ತೀನ ಕೊಲೆ ಮಾಡಿಬಿಟ್ಟ ಅದು ನಮ್ಮ ಫಾರ್ಮ್‌ನಲ್ಲಿ ನಡೆಯಲಿಲ್ಲ, ಹೊರಗೆ ನಡೆದಿದ್ದು. ಅವ್ನ ಪೊಲೀಸರು ಅರೆಸ್ಟ್ ಮಾಡಿಕೊಂಡೋದರು. ಈಗ ಜೈಲಿನಲ್ಲಿದ್ದಾನೆ.''

''ಯಾವಾಗ ನಡೆದಿದ್ದು? ನನಗ್ಯಾಕೆ ಹೇಳ್‌ಲಿಲ್ಲ?''

''ನಿಮ್ಗೆ ಯಾಕೆ ತೊಂದರೆ ಅಂತ ಹೇಳ್‌ಲಿಲ್ಲ''

''ಎಷ್ಟು ದಿನ ಆಯಿತು?''

''ಹದಿನೈದು ದಿನ ಆಯಿತು.''

''ಏನಾಯಿತು? ಯಾಕೆ ಅವ್ನ ಹೆಂಡ್ತಿನ ಕೊಲೆ ಮಾಡಿದ?''

''ಅವ್ನ ಹೆಂಡ್ತಿ ಬೇರೆ ಯಾರ್‍ನೊ ಇಟ್ಟುಕೊಂಡಿದ್ದಳಂತೆ ಸರ್.''

''ಅಷ್ಟಕ್ಕೆ ಕೊಲೆ ಮಾಡಿಬಿಟ್ನ ? ಇಡಿಯಟ್'' ಅಶ್ವಿನಿ ರೇಗಿದಳು.

ಐಯಾನ್ ತನ್ನ ಕೈಯನ್ನು ಕೆನ್ನೆಯ ಮೇಲೆ ಇಟ್ಟುಕೊಂಡು ಮುಖವನ್ನು ಸಣ್ಣಗೆ ಮಾಡಿಕೊಂಡ.

ಅಶ್ವಿನಿ ''ಇಡಿಯಟ್, ಇವರೆಲ್ಲ ಮನುಷ್ಯರಾ?'' ಎಂದು ಮುಂದಕ್ಕೆ ನಡೆದಳು.

''ಅವನಿಗೆ ಏನೇನು ಸಿಗಬೇಕೊ ಎಲ್ಲಾನು ಬಿಲ್ ಮಾಡಿಡು ಇನ್ನೇನು?'' ಐಯಾನ್ ಪ್ರಶ್ನಿಸಿದ.

''ಅವ್ನ ಮಗ್ಗಿಗೆ ಕೆಲಸ ಬೇಕಂತೆ ಸರ್.''

''ಕೊಡ್ಲೆ ಬೇಕಾ?''

''ಕೊಟ್ಟರೆ ಒಳ್ಳೇದು ಸರ್. ಇಲ್ಲ ಅಂದರೆ ಕೋರ್ಟು ಕಛೇರಿ, ಹುಡುಗ ತುಂಬಾ ಒಳ್ಳೆಯವನು ಸರ್''

''ಆಯಿತು... ಕೊಡೋಣ ಬಿಡು''

''ಸರಿ ಸರ್.''

ಐಯಾನ್ ಮುಂದಕ್ಕೆ ನಡೆದ.

ಅಶ್ವಿನಿ ನಿಧಾನವಾಗಿ ಹುಲ್ಲಿನ ಮೇಲೆ ನಡೆದು ಹೋಗುತ್ತಿದ್ದಾಳೆ. ಕಾಶ್ಮೋರ ಒಂದು ಬೊಂಬೆಯನ್ನು ಎಳೆದುಕೊಂಡು ಅಶ್ವಿನಿ ಹಿಂದೆ ಹೋಗುತ್ತಿದ್ದಾಳೆ. ಐಯಾನ್ ಅವರ ಜೊತೆಗೆ ಸೇರಿಕೊಂಡ.

''ನಾಳೆ ಬೆಳಿಗ್ಗೆ ಕೇರಳದ ಹಿನ್ನೀರಿನ ಕೊಳಗಳಿಗೆ ಹೋಗೋಣ? ಇಲ್ಲ , ತಮಿಳು ದೇಶದ ದೇವಸ್ಥಾನಗಳಿಗೆ ಹೋಗೋಣ್ವ?''

''ಎರಡಕ್ಕೂ ಬೇಡ. ನನ್ನನ್ನ ಸ್ಪೇಸ್ ಕಾಲೋನಿಗೆ ಕರೆದ್ಕೊಂಡೋಗು'' ಎಂದಳು ಅಶ್ವಿನಿ.

''ಈಗ ಎಲ್ಲಾಗುತ್ತೆ? ನಾವು ಮೊದ್ಲೆ ಪ್ಲಾನ್ ಮಾಡ್ಕೋಬೇಕಾಗಿತ್ತು. ಅದಕ್ಕೆ ಮೊದ್ಲೆ ಅಪ್ಲೈ ಮಾಡಿ ಪರವಾನಿಗಿ ತಗೊಬೇಕು. ಕಾಸ್ಮೋರಾನ ಎಲ್ಲಿ ಬಿಟ್ಬೋಗೂದು?''

''ಅವಳ್ನ ನಮ್ಮ ತಂದೆ ಹತ್ತಿರ ಬಿಟ್ಬೋದರೆ ಆಯ್ತು'' ಅಶ್ವಿನಿ ಮಾತಿಗೆ

''ಆಯ್ತು ಈ ಸಲ ಖಂಡಿತ ನಿನ್ನನ್ನ ಕರ್ಕೊಂಡೋಗ್ತೀನಿ''

''ನಿನಗೆ ಸಮಯ ಇಲ್ಲ ಅಂದರೆ ನಾನೇ ಹೋಗಿಬರ್ತೀನಿ'' ಅಶ್ವಿನಿ ಹೇಳಿದಳು.

''ಆಯ್ತು ಅದನ್ನು ಯೋಚನೆ ಮಾಡೋಣ'' ಐಯಾನ್ ಸಮಾಧಾನವಾಗಿ ಹೇಳಿದ.

''ನೀನು ಜತೆಯಲ್ಲಿದ್ದರೆ ಚೆನ್ನಾಗಿರುತ್ತೆ'' ಎಂದಳು ಅಶ್ವಿನಿ.

''ಆಯ್ತು ಡಾರ್ಲಿಂಗ್. ಖಂಡಿತ ಇಬ್ಬರೂ ಹೋಗೋಣ'' ಐಯಾನ್ ಅವಳ ಭುಜಗಳನ್ನು ತಟ್ಟಿ ಸಮಾಧಾನ ಮಾಡಿದ.

ಕಾಸ್ಮೋರಾ ''ಅಪ್ಪ ನಾನೂ ಬರ್ತೀನಿ'' ಎಂದಳು.

''ಆಯಿತು ಡಾರ್ಲಿಂಗ್ ನಿನ್ನನ್ನು ಕರ್ಕೊಂಡೋಗ್ತೀನಿ'' ಐಯಾನ್ ಮಗಳನ್ನು ಮೇಲಕ್ಕೆ ಎತ್ತಿಕೊಂಡು ಭುಜದ ಮೇಲೆ ಕೂರಿಸಿಕೊಂಡ.



ಐಯಾನ್, ಅಶ್ವಿನಿ ಮತ್ತು ಕಾಸ್ಮೋರಾ ಈಗ ಸಮುದ್ರದಲ್ಲಿ ಮುತ್ತುಗಳು ಪೋಣಿಸಿದಂತಿರುವ ಶ್ರೀಲಂಕಾದ ಪುಟ್ಟ ಪುಟ್ಟ ದ್ವೀಪಗಳಲ್ಲಿ ಒಂದಾದ ರೆಡ್ ಸ್ಕಿನ್ ದ್ವೀಪದಲ್ಲಿದ್ದಾರೆ. ತಮಿಳು ದೇಶದ ದೇವಾಲಯಗಳು, ಕೇರಳದ ಹಿನ್ನೀರು ಕೊಳಗಳನ್ನು ಕೆಲವು ವರ್ಷಗಳ ಹಿಂದೆ ನೋಡಿರುವುದರಿಂದ ಶ್ರೀಲಂಕಾಗೆ ರಾತ್ರೋ ರಾತ್ರಿ ವಿಮಾನದಲ್ಲಿ ಹಾರಿಹೋಗಿ ರೆಡ್ ಸ್ಕಿನ್ ದ್ವೀಪದಲ್ಲಿ ಇಳಿದುಕೊಂಡಿದ್ದಾರೆ. ಕೆಲವು ಮಿಲಿಯ ವರ್ಷಗಳ ಹಿಂದೆ ಭರತ ಖಂಡ ಹಿಂದೂ ಮಹಾಸಾಗರದ ಮಧ್ಯ ಇನ್ನೂ ವಿಶಾಲವಾಗಿದ್ದು ಶ್ರೀಲಂಕಾ ಭರತ ಖಂಡದ ಒಂದು ಅವಿಭಾಜ್ಯ ಅಂಗವಾಗಿತ್ತು.

ಕಡಲ ಕೊರೆತ, ಸಮುದ್ರ ಮಟ್ಟದ ಏರುಪೇರು ಮತ್ತು ಭೂಖಂಡಗಳ ಅಲೆದಾಟದಿಂದ ಶ್ರೀಲಂಕಾದ ಸುತ್ತಲಿನ ಪ್ರದೇಶ ಸಮುದ್ರದ ಪಾಲಾಗಿ ಪ್ರಸ್ತುತ ಈಗಿನ ಆಕಾರವನ್ನು ಪಡೆದುಕೊಂಡಿತು. ರಾಮಾಯಣ ನಡೆದ ಕಾಲದಲ್ಲಿ ಅಂದರೆ ಕೇವಲ ಕೆಲವು ಸಾವಿರ ವರ್ಷಗಳ ಹಿಂದೆ ಭಾರತ ಮತ್ತು ಶ್ರೀಲಂಕಾದ ನಡುವೆ ನೆಲದ ಮಾರ್ಗ ಇದ್ದ ಉಲ್ಲೇಖಗಳನ್ನು ರಾಮಾಯಣದಲ್ಲಿ ನೋಡಬಹುದು.

ಕಡಲನಗರ ರಾಮೇಶ್ವರಂನಿಂದ ಶ್ರೀಲಂಕಾಗೆ ಕಡಲ ಮೇಲೆ ಕೇವಲ 23 ಕಿಲೋಮೀಟರುಗಳು ದೂರ. ಈ ಕಡಲು ದಾರಿಯ ಕೆಳಗೆ ಕಡಲ ಗರ್ಭದಲ್ಲಿ ನೆಲದ ಸಂಪರ್ಕವಿದ್ದ ಕುರುಹುಗಳನ್ನು ಭಾರತದ ಭೂವಿಜ್ಞಾನಿಗಳು ಐವತ್ತು ವರ್ಷಗಳ ಹಿಂದೆಯೆ ತೋರಿಸಿದ್ದರು.

ರೆಡ್‌ಸ್ಕಿನ್ ಎಂಬ ಪುಟ್ಟ ದ್ವೀಪ ಪೂರ್ವ ಶ್ರೀಲಂಕಾದ ವಂಡೂರು ರಾಷ್ಟ್ರೀಯ ಉದ್ಯಾನದಲ್ಲಿದೆ. ಇದು ವಿಶೇಷವಾಗಿ ಸುಂದರವಾದ ಹವಳಗಳ ದ್ವೀಪವೆಂದು ಪ್ರಖ್ಯಾತಿ ಪಡೆದಿದೆ. ಅಶ್ವಿನಿ, ಕಾಸ್ಮೋರಾ ಡೈವಿಂಗ್ ಸ್ಕೂಟರಿನ ಹಿಂದಿನ ಸೀಟುಗಳಲ್ಲಿ ಕುಳಿತಿದ್ದರೆ ಮುಂದಿನ ಸೀಟಿನಲ್ಲಿ ಚಾಲಕನ ಜೊತೆ ಐಯಾನ್ ಕುಳಿತುಕೊಂಡಿದ್ದಾನೆ. ಕಡಲ ಆಳದಲ್ಲಿ ಮೀನಿನಂತೆ ಚಲಿಸುವ ಈ ಡೈವಿಂಗ್ ಸ್ಕೂಟರಿನ ಕೆಳಗೆ ಮೃದುವಾದ ರಬ್ಬರ್ ಕಾಲುಗಳಿದ್ದು ಅವುಗಳಿಗೆ ಏಡಿ ಕಾಯಿಯಂತಹ ಬೆರಳುಗಳಿವೆ. ಮೀನಿನಂತಹ ಮುಖ ಮತ್ತು ಬಾಲವಿದೆ. ಎರಡೂ ಕಡೆ ಬೆನ್ನಿನಲ್ಲಿ ವಿಮಾನದಂತಹ ರೆಕ್ಕೆಗಳಿವೆ. ಮುಖದಲ್ಲಿ ಬೆಳಕು ಬೀರುವ ಎರಡು

ಲೇಜರ್ ಕಣ್ಣುಗಳು ಬೇರೆ. ಇನ್ನೇನು ಬೇಕಿದೆ ನೀರಿನಲ್ಲಿ ಹೇಗೆ ಬೇಕೊ ಹಾಗೆ ಚಲಿಸುವ ಚಾಕಚಕ್ಯತೆ ಇದ್ದು ಅದಕ್ಕೆ ಮೀನುಗಳೆ ನಾಚಿಕೊಳ್ಳುವಂತಹ ಬಣ್ಣಗಳು ಬೇರೆ.

ಮುಂದಿನ ಸೀಟಿನಲ್ಲಿದ್ದ ಚಾಲಕ ಒಂದೊಂದಾಗಿ ವಿವರಿಸುತ್ತ ಹೋಗುತ್ತಿದ್ದಾನೆ. ಕಾಸ್ಮೋರಾ ಸಂತೋಷವನ್ನು ತಡೆಯಲಾಗದೆ ಬೆರಗಾಗಿ ಬಣ್ಣಬಣ್ಣದ ಮೀನುಗಳನ್ನು ಹವಳಗಳ ಆಕಾರಗಳನ್ನು ತೋರಿಸುತ್ತ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದಾಳೆ. ವಾಹನದ ಒಳಗೆ ಆಮ್ಲಜನಕ ಸಿಲೆಂಡರ್ ಇದ್ದು ಅದನ್ನು ಎಲ್ಲರ ಮುಖಗಳಿಗೆ ಅಳವಡಿಸಲಾಗಿದ್ದು ಎಲ್ಲರೂ ಈಜಿನ ಉಡುಗೆಯಲ್ಲಿದ್ದಾರೆ. ವಾಹನದಲ್ಲಿ ಉಸಿರಾಟದಿಂದ ಹೊರಬೀಳುವ ಕಾರ್ಬನ್ ಮಾನೊ ಆಕ್ಸೈಡ್ ವಾಹನದ ಹಿಂದಿನ ಸೈಲೆಂಚರ್‌ನಲ್ಲಿ ಹೊರಕ್ಕೆ ಹೋಗುತ್ತಿದೆ. ಏನಾದರೂ ಹೆಚ್ಚು ಕಡಿಮೆಯಾದರೆ ಚಾಲಕನ ಸಹಾಯದಿಂದ ಎಲ್ಲರೂ ಕೆಲವೇ ನಿಮಿಷಗಳಲ್ಲಿ ಸಮುದ್ರದ ಮೇಲಕ್ಕೆ ಬಂದು ಬಿಡಬಹುದು.

ಚಿತ್ರ ವಿಚಿತ್ರಾಕಾರದ ಬಣ್ಣ ಬಣ್ಣದ ಗಿಡ, ಪೊದೆಗಳೆ ತುಂಬಿ ಹೋಗಿರುವ ಹವಳದ ಹೂತೋಟ ಅದು. ನೀರಿನ ಮಟ್ಟಕ್ಕೆ ಹೊಂದಿಕೊಂಡಂತೆ ಕಡಿಮೆ ಆಳದಲ್ಲಿ ಕಲ್ಲು ಬಂಡೆಗಳಿಗೆ ಅಂಟಿಕೊಂಡು ಬೆಳೆಯುವ ಹವಳಗಳು ತಮ್ಮ ಬಾಯಿಯ ಸುತ್ತಲೂ ಇರುವ ಸೂಕ್ಷ್ಮ ಮುಳ್ಳುಗಳ ಮೂಲಕ ನೀರಿನಲ್ಲಿ ದೊರಕುವ ಸೂಕ್ಷ್ಮ ಜೀವಿಗಳನ್ನು ನುಂಗುತ್ತಾ ಬೆಳೆಯುತ್ತಿರುತ್ತವೆ. ಅವುಗಳ ಬಾಯಿಂದಲೆ ಹೊರಬೀಳುವ ಫರ್ಟಿಲೈಜಡ್ ಕಣಗಳು ನೀರಿನಲ್ಲಿ ಈಜುತ್ತಾ ಹೋಗಿ ದೂರದೂರದ ಕಲ್ಲುಬಂಡೆಗಳಿಗೆ ಅಂಟಿಕೊಂಡು ಅಲ್ಲೇ ಹೊಸ ಕಾಲೋನಿಗಳನ್ನು ಕಟ್ಟಿಕೊಳ್ಳುತ್ತವೆ.

ಇವುಗಳ ಆಕಾರಗಳೊ ಯಾವ ಕಲಾಕಾರನ ಯೋಚನೆಗೂ ನಿಲುಕುವಂತಹದಲ್ಲ. ಮಕ್ಕಳ ಕೈಗಳಿಗೆ ಸೀಮೆ ಸುಣ್ಣ ಕೊಟ್ಟು ಚಿತ್ರ ಬಿಡಿಸುವಂತೆ ತಿಳಿಸಿದಾಗ ಮೂಡುವ ಚಿತ್ರಗಳಂತೆ... ಆಕಾಶದಲ್ಲಿ ಹಾರಾಡುವ ಮೋಡಗಳಂತೆ... ಭೂಮಿಯ ಮೇಲೆ ಬೆಳೆದು ನಿಂತ ಹುಲ್ಲು ಗಿಡ ಮರಗಳಂತೆ... ಅಮಿಬಾದಿಂದ ಆನೆಯಂತಹ ಆಕೃತಿಗಳನ್ನು ನೋಡಬಹುದು. ಬಣ್ಣಗಳಲ್ಲಿ ಅಂಟಾರ್ಕ್‌ಟಿಕಾದ ದಿಗಂತದಲ್ಲಿ ಕಾಣಸುವ ಆರೋರಾ ಬಣ್ಣಗಳು ನಾಚುವಂತಹ ಬಣ್ಣಗಳು. ನಿಜವಾಗಿಯೂ ಇವು ಕಡಲ ಒಳಗಿನ ಹೂತೋಟಗಳು.

ಇನ್ನು ಇವುಗಳ ನಡುವೆ ಓಡಾಡುವ ಬಣ್ಣ ಬಣ್ಣದ ಮೀನುಗಳು... ನೂರಾರು ಬಗೆಯ ಹವಳ ಮೀನುಗಳು... ಸೀ ಆನಿಯನ್... ಕೆಂಪು ಏಂಜಲ್ ಮೀನುಗಳು... ಕಡಲನೌಕೆ... ಸಾರ್ಜನ್ ಮೀನುಗಳು... ಅಷ್ಟಾವಕ್ರರಾದ ಏಡಿಗಳು... ಸೀ ಅರ್ಚಿನ್‌ಗಳು... ಶಂಖುಹುಳುಗಳು... ಹುಲಿ ಸೀಗಡಿಗಳು... ಕಡಲ ಹಾವುಗಳು... ಡಾಲ್ಫಿನ್‌ಗಳು... ಹೀಗೆ ಎಲ್ಲವನ್ನೂ ನೋಡುತ್ತ ಹೋಗುತ್ತಿದ್ದಾರೆ.

ಇದ್ದಕ್ಕಿದ್ದಾಗೆ ಕಾಸ್ಮೋರಾ. "ಮಮ್ಮಿ... ಮಮ್ಮಿ... ಅಕ್ಟೋಪಸ್... ಅಕ್ಟೋಪಸ್...?"

ಎಂದು ಒಂದೇ ಸಮನೆ ಕೂಗಿಕೊಂಡಳು. ಎಲ್ಲರೂ ಆ ಕಡೆಗೆ ನೋಡುತ್ತಾರೆ. ಅಕ್ಟೋಪಸ್‌ಗಳ ಒಂದು ಹಿಂಡೆ ಸ್ಕೂಟರ್ ಕಡೆಗೆ ತಮ್ಮ ಟ್ಯಾಂಟಿಕಲ್ಸ್ ಚಾಚುತ್ತ ಬರುತ್ತಿವೆ. ''ಅವು ಏನೂ ಮಾಡೋದಿಲ್ಲ. ನಮ್ಮ ಸ್ಕೂಟರ್‌ನ್ನ ನುಂಗಿಬಿಟ್ಟರೂ ನಮಗೆ ಏನೂ ಆಗೂದಿಲ್ಲ. ಅದರ ಹೊಟ್ಟೆ ಸೀಳಿಕೊಂಡು ಹೊರಕ್ಕೆ ಹೋಗೋಣ್ವ'' ಕಾಸ್ಮೋರಾ ಹೇಳಿದಳು.

''ಭಾರಿ ಧೈರ್ಯ ಸರ್ ಮಗೂಗೆ'' ಚಾಲಕ ಕಾಸ್ಮೋರ ಕಡೆಗೆ ನೋಡುತ್ತ ಹೇಳಿದ.

ಸುಮಾರು ಎರಡು ಗಂಟೆಗಳ ಕಾಲ ಸಮುದ್ರದ ತಳದಲ್ಲಿನ ಹವಳ ತೋಟಗಳನ್ನು ವಿಧ ವಿಧ ಮೀನುಗಳನ್ನು ನೋಡಿದ ಮೇಲೆ ಡೈವಿಂಗ್ ಸ್ಕೂಟರ್ ಮೇಲಕ್ಕೆ ತಂದುಬಿಟ್ಟಿತು. ಮೂವರು ಅಲ್ಲಿಂದ ಕಾರಿನಲ್ಲಿ ಬಂದು ತಾವಿದ್ದ ಹೋಟಲ್ ಸೇರಿಕೊಂಡರು. ಆ ರಾತ್ರಿ ಒಂದರೆಡು ಪೆಗ್ಗುಗಳನ್ನು ಏರಿಸಿ ವಿಧ ವಿಧವಾದ ಮೀನು ಮತ್ತು ಏಡಿಕಾಯಿ ಊಟ ಸವಿದ ಮೂವರು ನಿದ್ದೆಗೆ ಜಾರಿಕೊಂಡರು.

ಮರುದಿನ ಇನ್ನೂ ಒಂದೆರಡು ದ್ವೀಪಗಳಿಗೆ ಫೆರ್ರಿಯಲ್ಲಿ ಪ್ರಯಾಣಿಸಿ, ಕಡಲ ದಂಡೆಗಳಲ್ಲಿ ಅರೆ ನಗ್ನ ಉಡುಪುಗಳಲ್ಲಿ ಬಿಸಿಲು ಕಾದು ಮರಳಿನಲ್ಲಿ ಉರುಳಾಡಿ ಮತ್ತೆ ಹೋಟಲ್ ಸೇರಿಕೊಂಡರು.

ಸ್ವಚ್ಛತೆ ಮತ್ತು ಊಟದ ಬಗ್ಗೆ ಭಾರಿ ಎಚ್ಚರಿಕೆ ತೆಗೆದುಕೊಳ್ಳುವ ಅಶ್ವಿನಿ ಇಲ್ಲಿ ಕಂಡದ್ದನ್ನು ತಿಂದು ಎಲ್ಲಾ ಕಡೆ ಸುತ್ತಾಡಿದಳು. ಅಂತೂ ಮೂರು ದಿನಗಳು ಶ್ರೀಲಂಕಾದಲ್ಲಿ ಕಾಲ ಕಳೆದು ಮೂವರು ತಮ್ಮ ಫಾರ್ಮ್‌ಹೌಸ್‌ಗೆ ಹಿಂದಿರುಗಿದರು.

ಶ್ರೀಲಂಕಾದಿಂದ ಹಿಂದಿರುಗಿ ಬಂದ ಐಯಾನ್ ಮತ್ತು ಅಶ್ವಿನಿ ಎರಡು ದಿನಗಳು ಫಾರ್ಮ್‌ಹೌಸ್‌ನಲ್ಲಿ ವಿಶ್ರಾಂತಿ ಪಡೆದುಕೊಂಡರು. ಅನಂತರ ತಮಿಳುನಾಡಿನ ಕೆಲವು ಭಾಗಗಳನ್ನು ನೋಡಿ ಬಂದರು. ಐಯಾನ್‌ಗೆ ಯುಎಸ್‌ಐನ ಎಲ್ಲಾ ಭಾಗಗಳಲ್ಲೂ ಓಡಾಡುವ ಆಸೆ. ಆದರೆ ಅಶ್ವಿನಿಗೆ ಹಳ್ಳಿ ಪ್ರದೇಶಗಳಲ್ಲಿ ಓಡಾಡುವುದೆಂದರೆ ನರಕ ಸದೃಶ.



ಯುಎಸ್‌ಐ ಈಗ ಹಲವು ರೀತಿಯಲ್ಲಿ ಬಿಡಿಬಿಡಿಯಾಗಿ ಚದುರಿಹೋಗಿತು. ಎ ವಲಯವನ್ನು ಬಿ ವಲಯದವರು, ಬಿ ವಲಯದವರನ್ನು ಸಿ ವಲಯದವರು, ಸಿ ವಲಯದವನ್ನು ಡಿ ವಲಯದವರು ಅನುಕರಣೆ ಮಾಡುತ್ತಿದ್ದರು. ಹಳ್ಳಿ ಪ್ರದೇಶಗಳಲ್ಲಿ ನೂರಾರು ವರ್ಷಗಳ ಹಿಂದಿದ್ದ ಆಚಾರ ವಿಚಾರಗಳು, ಮೂಢ ನಂಬಿಕೆಗಳು ಹಾಗೇ ಉಳಿದುಕೊಂಡಿದ್ದವು. ಕೆಲವು ಪ್ರದೇಶಗಳಲ್ಲಿ ಈಗೀಗ ಚಿತ್ರವಿಚಿತ್ರ ನಂಬಿಕೆಗಳು ರೂಢಿಗೆ ಬಂದುಬಿಟ್ಟಿದ್ದವು. ಯುಎಸ್‌ಐನಲ್ಲಿ ಅದರಲ್ಲೂ ಮುಖ್ಯವಾಗಿ ಗುಜರಾತ್, ರಾಜಸ್ಥಾನ ಮತ್ತು ತಮಿಳುನಾಡಿನ ಕೆಲವು ಭಾಗಗಳು ಪುರಾತನ ಪಳೆಯುಳಿಕೆಗಳಿಗಿಂತೆ ಕಾಣಿಸಿಕೊಂಡರೆ

ಎ ಯಿಂದ ಡಿ ವಲಯಗಳಲ್ಲಿ ಒಂದು ಕಾಲದಲ್ಲಿ ಯುರೋಪ್ ಮತ್ತು ಅಮೆರಿಕಾದಲ್ಲಿದ್ದ ಸಂಸ್ಕೃತಿ ಬೆಳೆದುಬಿಟ್ಟಿದೆ.

ಅತಿ ಆಧುನಿಕತೆಯ ಮನಸ್ಸು ಹಳ್ಳಿಯ ಕಡೆಗೆ ಬರಲು ಹಾತೊರೆದರೆ ಹಳ್ಳಿಯ ಮನಸ್ಸು ಆಧುನಿಕತೆಯ ಕಡೆಗೆ ಹೋಗಲು ಹಾತೊರೆಯುತ್ತಿತ್ತು. ಅತಿ ಆಧುನಿಕತೆಯನ್ನು ಅನುಭವಿಸಿದ ಜನ ಸಮೂಹಗಳು ಕೆಲವು ನಾಲ್ಕೈದು ಸಾವಿರ ವರ್ಷಗಳ ಹಿಂದಿನ ಕಾಡು ಮೇಡು ಗುಹೆಗಳಲ್ಲಿ ಜೀವಿಸಲು ಹೋಗಿಬಿಟ್ಟಿದ್ದವು. ಇಪ್ಪತ್ತನೆ ಶತಮಾನದ ಕೊನೆ ದಶಕಗಳಲ್ಲಿ ಆಧುನಿಕತೆಯ ಅರಾಜಕತೆಯನ್ನು ಅನುಭವಿಸಿದ ಯುರೋಪಿನ ಜನರು ಎಲ್ಲವನ್ನೂ ತೊರೆದು ಭಾರತದ ಕಡೆಗೆ ಬಂದು ಹರೇರಾಮ ಹರೇಕೃಷ್ಣ ಪಂಥಗಳ ಅನುಯಾಯಿಗಳಾಗಿದ್ದರು. ಅದೂ ಕೆಲವು ವರ್ಷಗಳಲ್ಲಿ ಸಾಕಾಗಿ ಹೋಗಿತ್ತು. ಅದೇ ಕಾಲಕ್ಕೆ ಕೆಲವರು ಆಚಾರ್ಯ ರಜನೀಶ್ ಎಂಬ ಸೆಕ್ಸ್ ಮ್ಯೂನಿಯಾಕ್‌ನನ್ನು ಹುಡುಕಿಕೊಂಡು ಬಂದು ಅವನ ಅನುಯಾಯಿಗಳಾದರು.

ಅವನ ಎದುರಿಗೆ ಎಲ್ಲವನ್ನೂ ತೊರೆದು ಕಾಡು ಪ್ರಾಣಿಗಳಂತೆ ಸೆಕ್ಸ್ ಉನ್ಮಾದವನ್ನು ಪಡೆದರು. ಇನ್ನೊಂದು ಗುಂಪು ಅನಂತರದ ಕಾಲದಲ್ಲಿ ಸತ್ಯಸಾಯಿ ಬಾಬಾನನ್ನು ಆರಾಧಿಸತೊಡಗಿತು. ಎಲ್ಲದಕ್ಕೂ ಒಂದು ಮಿತಿ ಎನ್ನುವುದನ್ನು ಮಾನವ ಕಂಡುಕೊಳ್ಳಲಾರದೆ ಹೋದುದು ಮಾತ್ರ ಇತಿಹಾಸದಲ್ಲಿ ಕಲಿಯಲಾರದ ಪಾಠವಾಗಿಯೇ ಉಳಿದುಹೋಯಿತು.

ವಿಶ್ವದಲ್ಲಿ ಬಿಗ್ ಬ್ಯಾಂಗ್ ಥಿಯರಿ ಸ್ವಲ್ಪ ಸ್ವಲ್ಪ ಅರ್ಥವಾದಂತೆ ನಕ್ಷತ್ರಗಳು ಹುಟ್ಟಿ ಹೇಗೆ ಪ್ರಜ್ವಲಿಸುತ್ತವೆ... ಮತ್ತೆ ಅವು ಕಾಲಾಂತರದಲ್ಲಿ ಕಿರಣಗಳನ್ನು ಚೆಲ್ಲುತ್ತಾ ಕೊನೆಗೆ ತಣ್ಣಗೆ ಕುಗ್ಗಿ ಹೋಗಿ ಮಣ್ಣಿನ ಉಂಡೆಗಳಾಗುತ್ತವೆ. ಅದೇ ರೀತಿ ಭೂಮಿಯಲ್ಲಿ ಸೃಷ್ಟಿಯಾಗುವ ಅಣುವಿನಿಂದ ಮರ ಗಿಡ ಪಕ್ಷಿ ಪ್ರಾಣಿಗಳವರೆಗೆ ಎಲ್ಲವೂ ಹುಟ್ಟಿ ಸಾಯುತ್ತವೆ. ಮತ್ತೆ ಮತ್ತೆ ಹುಟ್ಟು ಮತ್ತೆ ಮತ್ತೆ ಸಾಯುತ್ತವೆ. ಅದೊಂದು ಕಾಲದ ಚಕ್ರದಂತೆ. ಆಧುನಿಕತೆಯೂ ಅಷ್ಟೇ. ಪ್ರತಿಯೊಂದು ಧಾತುವಿನಲ್ಲಿರುವ ಎಲೆಕ್ಟ್ರಾನ್ಸ್ ಪ್ರೊಟಾನ್ಸ್ ಮತ್ತು ನ್ಯೂಟ್ರಾನ್ಸ್ ಕಣಗಳಿಂದ ನಕ್ಷತ್ರಗಳವರೆಗೂ ಎಲ್ಲದರದೂ ಒಂದೇ ಕಥೆ.

ಈಗ ಅಶ್ವಿನಿ, ಐಯಾನ್ ಮತ್ತು ಅವರ ಪುಟ್ಟ ಮಗಳಾದ ಕಾಸ್ಮೋರಾ ಜೊತೆಗೆ ಕಾವೇರಿ ಕಣಿವೆಯ ಹಳ್ಳಿ ಪ್ರದೇಶಗಳಲ್ಲಿ ಸುತ್ತಾಡುತ್ತಿದ್ದಾರೆ. ನೂರಾರು ಜನರು ಆ ಪ್ರದೇಶವನ್ನು ನೋಡಲು ಅವರ ಜೊತೆಗೆ ಅನೇಕ ಪ್ರದೇಶಗಳಿಂದ ಬಂದಿದ್ದಾರೆ. ಅವರ ಮುಂದೆ ಗೈಡ್‌ಗಳು ವಿವರಿಸುತ್ತಾ ಹೋಗುತ್ತಿದ್ದಾರೆ.

ಕಾವೇರಿ ಕೊಳದ ಆ ಪ್ರದೇಶ ಹಸಿರು ರಾಶಿಯಂತೆ ಕಂಗೊಳಿಸುತ್ತಿದೆ. ಕಾವೇರಿ ನದಿಗೆ ಅಡ್ಡವಾಗಿ ಕಟ್ಟಿದ ಕೃಷ್ಣರಾಜಸಾಗರ ಮತ್ತು ಮೆಟ್ಟೂರು ಅಣೆಕಟ್ಟೆಗಳಲ್ಲಿ ನೀರು ಶೇಖರಿಸಿ ತಮಿಳು ಮತ್ತು ಕನ್ನಡ ದೇಶಗಳ ಜನರು ಉಪಯೋಗಿಸಿಕೊಳ್ಳುತ್ತಿದ್ದರು. ಕಾವೇರಿ ನೀರಿಗಾಗಿ ಎರಡು ಪ್ರದೇಶಗಳ ಜನರು ಹಲವಾರು ಸಲ ಜಗಳವಾಡಿ ಪ್ರಾಣ ಕಳೆದುಕೊಂಡಿದ್ದರು.

ಅನಂತರದ ದಿನಗಳಲ್ಲಿ ಎರಡೂ ಅಣೆಕಟ್ಟುಗಳಲ್ಲಿ ನೀರಿನ ಜೊತೆಗೆ ಮೆಕ್ಕಲು ಮಣ್ಣು ತುಂಬಿಕೊಳ್ಳುತ್ತಾ ಹೋಯಿತು.

ಕೊನೆ ಕೊನೆಗೆ ಎರಡೂ ಸಾಗರಗಳಲ್ಲಿ ನೀರು ನಿಲ್ಲುವುದೇ ಕಡಿಮೆಯಾಗಿ ಹೋಯಿತು. ಅಣೆಕಟ್ಟುಗಳಲ್ಲಿ ತುಂಬಿಕೊಂಡ ಹೂಳನ್ನು ಸಹ ಎರಡು ಸರಕಾರಗಳು ತೆಗೆಯಲಾರದೆ ಹೋದವು. ನದಿ ಕೂಡ ತನ್ನ ಯೌವ್ವನವನ್ನು ಕಳೆದುಕೊಂಡು ಬಸವಳಿದು ಹೋಗಿತ್ತು. ಭೂಮಿಯ ಮೇಲೆ ಇರುವಂತೆ ನದಿಗಳಿಗೂ ಬಾಲ್ಯ, ಯೌವ್ವನ ಮತ್ತು ಮುಪ್ಪಿನ ಘಟ್ಟಗಳು ಇರುತ್ತವೆ. ಭೂಮಿಯ ಮೇಲೆ ಕಾಲಕಾಲಕ್ಕೆ ಹೊಸ ನದಿಗಳು... ಬೆಟ್ಟಗಳು... ಸಮುದ್ರಗಳು ಸೃಷ್ಟಿಯಾಗುತ್ತವೆ. ಹಾಗೆ ಅವು ಸಾಯುತ್ತವೆ, ಮತ್ತೆ ಹುಟ್ಟುತ್ತವೆ.

ಕಾವೇರಿ ಕೊಳ್ಳದಲ್ಲಿ ಜೀವಿಸುವ ಜನ ಹಳ್ಳಿ ಹಳ್ಳಿಗಳಿಗೂ ಒಂದೆರಡು ಹಳ್ಳ ಕೊಳ್ಳ ಕೆರೆಕುಂಟೆಗಳನ್ನು ತೋಡಿ ಅವುಗಳಿಗೆ ಎದುರಾಗಿ ಕಟ್ಟೆಗಳನ್ನು ಕಟ್ಟಿ ಮಳೆಯ ನೀರನ್ನು ಶೇಖರಿಸಿ ಉಪಯೋಗಿಸಿಕೊಳ್ಳುತ್ತಿದ್ದರು. ಕೊಳವೆ ಬಾವಿಗಳು ತೋಡುವುದನ್ನು ನಿಲ್ಲಿಸಿದ್ದರಿಂದ ಅಂತರ್ಜಲ ಮೇಲೆಯೇ ಇರುತ್ತಿತ್ತು. ಯುಎಸ್‌ಐನ ಕೆಲವು ಪ್ರದೇಶಗಳು ಅಪವಾದವೆಂಬಂತೆ ಹೀಗಿದ್ದವು.

ಒಂದು ಕಡೆ ಎ ಯಿಂದ ಡಿ ವಲಯದ ನಗರದ ವಲಯಗಳು, ಮತ್ತೊಂದು ಕಡೆ ಹಳ್ಳಿಗಾಡು ಪ್ರದೇಶಗಳು. ಒಟ್ಟಿನಲ್ಲಿ ಯುಎಸ್‌ಐ ಒಂದು ಕಾಲದಲ್ಲಿ ತಾನೇ ಹೇಳಿಕೊಳ್ಳುವಂತೆ ಈಗಲೂ ''ಮೇರಾ ಭಾರತ್ ಮಹಾನ್'' ಎನ್ನುವಂತಿತ್ತು. ಇದನ್ನು ಪ್ರಧಾನ ಮಂತ್ರಿಯಾಗಿದ್ದ ರಾಜೀವ್‌ಗಾಂಧಿ ಹೇಳಿದ್ದರು. ಅವರ ತಾಯಿ ಇಂದಿರಾಗಾಂಧಿ.

ಆ ಪ್ರದೇಶದಲ್ಲಿರುವ ಹಲವು ಹಳ್ಳಿಗಳು ಹಲವು ರೀತಿಯಲ್ಲಿ ವಿಶೇಷ ಎನಿಸಿಕೊಂಡಿವೆ. ಅಂತಹ ಹಳ್ಳಿಗಳಲ್ಲಿ ತುಂಬಿಕೊಂಡಿರುವ ಆ ಪ್ರದೇಶಗಳಲ್ಲಿ ಒಂದೊಂದು ಹಳ್ಳಿಯದು ಒಂದೊಂದು ಕಥೆ. ಪ್ರತಿಯೊಂದು ಹಳ್ಳಿಯಲ್ಲೂ ಒಂದು ದೇವಾಲಯಗಳ ಸಂಕೀರ್ಣವಿದೆ. ಒಂದು ಹಳ್ಳಿಯಲ್ಲಿ ದೇವತೆಗಳದೆ ದೇವಾಲಯಗಳು. ಇನ್ನೊಂದು ಹಳ್ಳಿಯಲ್ಲಿ ದೇವರುಗಳದೆ ದೇವಾಲಯಗಳು. ಒಂದು ಹಳ್ಳಿಯಲ್ಲಿ ಮಹಾಭಾರತದ ಪಾತ್ರಗಳು. ಮತ್ತೊಂದು ಹಳ್ಳಿಯಲ್ಲಿ ವೇದ ಉಪನಿಷತ್ತುಗಳಲ್ಲಿ ಕಾಣುವ ಪಾತ್ರಗಳು. ದೇವಾನುದೇವತೆಗಳು ಸವಾರಿ ಮಾಡುತ್ತಿದ್ದ ಪ್ರಾಣಿ ಪಕ್ಷಿಗಳಿಗೆ ದೇವಾಲಯಗಳನ್ನು ಕಟ್ಟಲಾಗಿದೆ. ಕೆಲವು ಹಳ್ಳಿಗಳಂತೂ ಪುಣ್ಯಕೋಟಿ ಹಸುವಿನ ಆರಾಧಕರೆ ತುಂಬಿ ಹೋಗಿದ್ದಾರೆ. ಆ ಹಳ್ಳಿಯಲ್ಲಿರುವ ಜನರು ಆಯಾ ಕಾಲದಲ್ಲಿ ಉಪಯೋಗಿಸಿದ್ದರು ಎನ್ನಲಾದ ಉಡುಪುಗಳನ್ನು ಧರಿಸಿ ಓಡಾಡುತ್ತಿದ್ದಾರೆ.

ಇನ್ನು ಅವರ ಮನೆಗಳು, ಮನೆಗಳಲ್ಲಿ ಉಪಯೋಗಿಸುತ್ತಿದ್ದ ವಸ್ತುಗಳು, ಅವರ ಸಾಕು ಪ್ರಾಣಿಗಳು, ಅವರ ದಿನನಿತ್ಯದ ಕಸುಬುಗಳು, ಅವರ ಹಾಡು ಪಾಡುಗಳು ಎಲ್ಲವನ್ನೂ ನೋಡಿದ ಆಧುನಿಕ ಜನರು ದಂಗಾಗಿ ಹೋದರು. ಐಯಾನ್‌ಗೆ ಒಂದಷ್ಟು ದಿನಗಳು ಈ

ಹಳ್ಳಿಯಲ್ಲಿಯೇ ಅವರ ಜೊತೆಗೆ ಇದ್ದು ಬಿಡೋಣ ಎನಿಸಿದರೂ ಅಶ್ವಿನಿಯ ಭಯಕ್ಕೆ ಆ ಯೋಚನೆಯನ್ನು ತಲೆಯಲ್ಲೆ ಇಟ್ಟುಕೊಳ್ಳಬೇಕಾಯಿತು. ಅಶ್ವಿನಿ ಇಲ್ಲದಿದ್ದರೆ ಒಂದೆರಡು ವಾರಗಳು ಐಯಾನ್ ಭಾರತವನ್ನು ಆಳುತ್ತಿದ್ದ ಬ್ರಿಟಿಷರ ಎದುರಿಗೆ ಅಹಿಂಸೆ ಹೋರಾಟದಿಂದಲೇ ಹೋರಾಡಿ ಸ್ವಾತಂತ್ರ್ಯ ಗಳಿಸಿಕೊಟ್ಟ ಮಹಾತ್ಮ ಗಾಂಧಿಯನ್ನು ಸಹ ನಮ್ಮವರೆ ಹತ್ಯೆ ಮಾಡಿದ್ದರು. ಆದರೂ ನಮ್ಮ ದೇಶ ಶಾಂತವಾದ ದೇಶ ಅಹಿಂಸೆಯ ಮೂರ್ತ ರೂಪ, ಧರ್ಮ, ಸಹಿಷ್ಣುತೆಯ ದೇಶ ಇತ್ಯಾದಿ ಎನ್ನುತ್ತಲೇ ಹೇಳಿಕೊಂಡು ಬರುತ್ತಿದ್ದರು. ಅಶ್ವಿನಿ ಇಲ್ಲದಿದ್ದರೆ ಐಯಾನ್ ಅಲ್ಲಿಯೇ ಇದ್ದು ಬಿಡುತ್ತಿದ್ದನೇನೋ ?

ಐಯಾನ್ ಭುಜದ ಮೇಲೆ ಕುಳಿತಿರುವ ಕಾಶ್ಮೀರಾ ಎಲ್ಲವನ್ನು ಪ್ರಶ್ನಿಸುತ್ತಿದ್ದಾಳೆ. ಅಶ್ವಿನಿ ನಡೆಯಲಾರದೆ ಆ ಬೀದಿಗಳಲ್ಲಿ ನಡೆಯುತ್ತಿದ್ದಾಳೆ. ನೋಡಿದಷ್ಟು ನೋಡಿದ ಮೇಲೆ ಮೂವರು ತಮ್ಮ ವಾಹನದ ಹತ್ತಿರಕ್ಕೆ ಬಂದು ಸ್ವಲ್ಪ ವಿಶ್ರಾಂತಿ ಪಡೆದುಕೊಂಡರು, ತಮಗೆ ಬೇಕಾದುದನ್ನು ತಿಂದರು. ಮತ್ತೆ ಅಲ್ಲಿ ಇಲ್ಲಿ ಸುತ್ತಾಡಿ ಕುಳಿತು ನಿಂತು ಅಂತಿಮವಾಗಿ ತಮ್ಮ ಫಾರ್ಮ್ ಹೌಸ್ ಕಡೆಗೆ ಪ್ರಯಾಣ ಬೆಳೆಸಿದರು. ಬರುವಾಗ ಕಾಶ್ಮೀರಾ ಪುಟ್ಟ ಜಡೆ ಲಂಗ ದಾವಣಿಯಲ್ಲಿ ಬೊಂಬೆಯಂತೆ ಮಿಂಚುತ್ತಿದ್ದಳು. ಮೂವರು ಫಾರ್ಮ್ ಹೌಸ್‌ನಲ್ಲಿ ಒಂದು ದಿನ ವಿಶ್ರಾಂತಿ ಪಡೆದು ಮರುದಿನ ಬೆನ್ ನಗರದ ಕಡೆಗೆ ಪ್ರಯಾಣ ಬೆಳೆಸಿದರು.



ಹಳ್ಳಿಗ್ರಾಮಗಳಲ್ಲಿ ಸುತ್ತಿದ ಕಾರಣ ಅಶ್ವಿನಿಗೆ ಶೀತವಾಗಿ ಜ್ವರವು ಬಂದಂತಿದೆ. ಐಯಾನ್ ಮನೆಗೆ ಬರುವ ದಾರಿಯಲ್ಲಿ ತಮ್ಮ ಕುಟುಂಬ ವೈದ್ಯರನ್ನು ನೋಡಿಕೊಂಡು ಬರಲು ಕಾರನ್ನು ತಿರುಗಿಸಿದರು. ಐಯಾನ್ ಅಶ್ವಿನಿಯನ್ನು ಡಾ. ರಮೇಶ್ ಅವರ ಕ್ಲಿನಿಕ್‌ಗೆ ಕರೆದುಕೊಂಡು ಹೋದ. ಅಶ್ವಿನಿ ಸರದಿಯೂ ಬಂತು. ಅದೇ ನಗುಮೊಗದಿಂದ, 'ಏನು ನಿಮ್ಮ ಕಾಯಿಲೆ ?'' ಎಂದರು ಡಾಕ್ಟರು. ''ಜ್ವರ ಡಾಕ್ಟರೇ'' ಎನ್ನುವ ಹೊತ್ತಿಗೆ, 'ಕೆಮ್ಮೂ ಇದ್ದ ಹಾಗಿದೆ' ಎಂದು ಅವರೇ ಸೇರಿಸಿದರು. ಹೌದೆಂದಳು ಅಶ್ವಿನಿ.

ಡಾ. ರಮೇಶ್ ಪುಟಾಣಿ ಕ್ಯಾಲ್ಕುಲೇಟರ್ ಗಾತ್ರದ ಒಂದು ಸಾಧನವನ್ನು ಜೇಬಿನಿಂದ ತೆಗೆದರು. ಅದರೊಳಗಿಂದ ಪುಟಾಣಿ ಪೆನ್ಸಿಲ್ ಗಾತ್ರದ ಕಾರ್ಡಲೆಸ್ಸನ್ನು ತೆರೆದು ಬಟನ್ ಒತ್ತಿದರು.

''ಎಲ್ಲಿ, ಆ ಎನ್ನಿ'' ಎಂದರು. ಬಾಯಿ ತೆರೆದಳು ಅಶ್ವಿನಿ. ನಾಲಿಗೆ ಕೆಳಗೆ ಅದನ್ನಿಟ್ಟರು. ಏನಿದು ಎಂದು ಅವನು ಯೋಚಿಸುವ ಹೊತ್ತಿಗೆ ಅದು ಆಗಲೇ ಕೆಲಸ ಪ್ರಾರಂಭಿಸಿತ್ತು. ಇದು ಕೋಟಿಕೋಟಿ ಅಣುಗಳ ಪರೀಕ್ಷೆ ಮಾಡುವ ಗ್ರಾಹಕ ಪ್ರೋಬ್ ಇದರ ತುದಿಯಲ್ಲಿದೆ. ಅದನ್ನು ನೂರಾರು ಮೊಗ್ಗುಗಳಂಥ ರಚನೆಗಳ ಮೇಲೆ ಕೂಡಿಸಿದ್ದಾರೆ. ತನಗೆ ತಾನೇ ಹೊಂದಾಣಿಕೆ ಮಾಡಿಕೊಳ್ಳುವ ಇದರ ಪ್ರತಿ ಗ್ರಾಹಕವೂ ಬಹು ಸೂಕ್ಷ್ಮ. ನಿಮಗೆ ತೊಂದರೆ ಕೊಡುವ ಯಾವ ಬ್ಯಾಕ್ಟೀರಿಯಾ ಅಥವಾ ವೈರಸ್ ಇರಲಿ, ಅವುಗಳ ರಾಸಾಯನಿಕ ಜಾಡನ್ನು

ಇವು ಸೆರೆ ಹಿಡಿಯುತ್ತವೆ. "ಕಳ್ಳ ಸಿಕ್ಕಿದ ಮೇಲೆ ಇನ್ನೇನು ?" ಎಂದರು ಡಾಕ್ಟರ್ ರಮೇಶ್. ಅಶ್ವಿನಿಗೆ ಮೊದಲು ಗೊಂದಲವಾಯಿತು. ಇದು ಹೊಸ ಬಗೆಯ ಅನುಭವ. ಎಲ್ಲ ಕ್ಲಿನಿಕ್‌ಗಳಲ್ಲೂ ಈಗ ಇದು ರೂಢಿಯಲ್ಲಿದೆ. ನಾಲಿಗೆಯ ಕೆಳಗೆ ಅದನ್ನು ಇಟ್ಟಾಗ ಮೊದಲು 'ಆಹ್' ಎಂದಿದ್ದಳು ಅಶ್ವಿನಿ. ಸೆಕೆಂಡ್ ಕಳೆದಿರಬಹುದು. ಡಾಕ್ಟರ್ ರಮೇಶ್ ತನ್ನ ಬಳಿ ಇದ್ದ ಕ್ಯಾಲ್ಕ್ಯುಲೇಟರ್ ಗಾತ್ರದ ಆ ಸಾಧನದ ಪರದೆಯ ಮೇಲೆ ಮೂರು ಆಯಾಮದ ಬಣ್ಣಬಣ್ಣದ ಸಂಕೇತಗಳಿಂದ ಕೂಡಿದ ನಕ್ಷೆ ಕಾಣಿಸಿತು. ವಾಸ್ತವವಾಗಿ ಅದು ಅವಳ ಗಂಟಲಿನ ನಕ್ಷೆ. ಆ ನಕ್ಷೆಯ ಕೆಳಗೆ ಮೂರು ಕಾಲಮ್‌ಗಳು ಮೂಡಿದವು. ಹೊಸ ಹೊಸ ಮಾಹಿತಿಗಳು ಮಿಂಚಿ ಆ ಕಾಲಂಗಳು ಬೆಳೆಯುತ್ತಲೇ ಹೋದವು. ಮೊದಲನೆಯ ಕಾಲಂನಲ್ಲಿ ಈವರೆಗೆ ಗುರುತಿಸಿದ ಅತಿ ಸೂಕ್ಷ್ಮ ರೋಗಾಣುಗಳ ಹೆಸರು ಕಾಣಿಸಿಕೊಂಡಿತು. ಮಧ್ಯದ ಕಾಲಂನಲ್ಲಿ ಜೈವ ರಾಸಾಯನಿಕ ಗುರುತಿರುವ ಸಂಕೇತಗಳು ಕಾಣಿಸಿಕೊಂಡವು. ಇವು ಒಂದೊಂದು ರೋಗಕಾರಕ ಬ್ಯಾಕ್ಟೀರಿಯ ಅಥವಾ ವೈರಸ್‌ಗೆ ವಿಶಿಷ್ಟವೆನಿಸಿದ ಮಾಹಿತಿಗಳು. ಯಾವ ರೋಗಾಣುಗಳು ಎಷ್ಟು ಪ್ರಯಾಣದಲ್ಲಿ ರೋಗಿಯ ಶರೀರದಲ್ಲಿ ಮನೆಮಾಡಿವೆ ಎಂಬ ಮಾಹಿತಿ ಮೂರನೆಯ ಕಾಲಂನಲ್ಲಿ ಕಾಣಿಸಿತು. ಎರಡು ಸೆಕೆಂಡು ಕಳೆದಿರಬಹುದು. ಯಾವುದೋ ಒಂದು ಬಗೆಯ ಬ್ಯಾಕ್ಟೀರಿಯಕ್ಕೆ ಸಂಬಂಧಿಸಿದ ಮಾಹಿತಿ ಉಳಿದೆಲ್ಲ ಮಾಹಿತಿಗಳಿಗಿಂತ ರಾಚುವಂತೆ ಕಾಣಿಸಿತು. ಅದಕ್ಕೆ ಕೆಂಪು ಬಣ್ಣ ಅದು ರೋಗಕಾರಕ ಬ್ಯಾಕ್ಟೀರಿಯ ಅಥವಾ ವೈರಸ್‌ಗೆ ಸಂಬಂಧಿಸಿದ ಅಣುವಿನ ಹಂತದ ರಾಸಾಯನಿಕ ಚಿಹ್ನೆ.

ಡಾಕ್ಟರ್ ರಮೇಶ್‌ಗೆ ಗೊತ್ತು, ಅಶ್ವಿನಿಗೆ ಜ್ವರ, ಕೆಮ್ಮು ಮೂಗು ಕಟ್ಟುವಂತೆ ಮಾಡಿದ್ದು ಯಾವ ವೈರಿ ಎಂಬುದು. ಅದರಂತೆ ರೋಗ ಪತ್ತೆಯಾಗಿದೆ, ರೋಗಾಣು ಗೊತ್ತಾಗಿದೆ. ಏನು ಮಾತ್ರೆ ಕೊಡುತ್ತಾರೋ ಎಂದು ಅಶ್ವಿನಿ ಕೇಳಬೇಕಾದ್ದೇ ಇರಲಿಲ್ಲ. ರಮೇಶ್‌ಗೂ ಮಾತ್ರೆಗಳನ್ನಾಗಲಿ, ಕೆಮ್ಮಿನ ಸಿರಪ್‌ನ್ನಾಗಲಿ, ಆ್ಯಂಟಿಬಯಾಟಿಕ್‌ಗಳನ್ನು ಕೊಡಬೇಕಾದ ತರಾತುರಿಯೂ ಇರಲಿಲ್ಲ, ಅವಶ್ಯಕತೆಯೂ ಇರಲಿಲ್ಲ. ಆ ದಿನಗಳು ಬಹಳ ಹಿಂದೆಯೇ ಹೋದವು. ಇಂಥ ಸಂದರ್ಭ ಬಂದಾಗ ರಮೇಶ್ ಬಳಿ ಒಂದು ತಂಡವೇ ಇದೆ. ಅದು ರೋಬಾಟ್‌ಗಳ ಪಡೆ. ಅಂಗೈ ಗಾತ್ರದ ಕಂಪ್ಯೂಟರ್‌ನಲ್ಲಿ ಡಾಕ್ಟರ್ ರಮೇಶ್ ಯಾವ ಬ್ಯಾಕ್ಟೀರಿಯ ಅಶ್ವಿನಿಯನ್ನು ಬಾಧಿಸಿದೆ ಎಂದು ಟೈಪ್ ಮಾಡಿದರು. ಕಂಪ್ಯೂಟರ್ ನಿರ್ದೇಶನ ನೀಡಿತು. ಅಷ್ಟೇ ಸಾಕು. ಈಗ ರಮೇಶ್ ಕಾರ್ಯೋನ್ಮುಖರಾದರು. ನ್ಯಾನೋ ರೋಬಾಟ್‌ಗಳಿಗೆ ನಿರ್ದೇಶನ ಕೊಟ್ಟರು. "ಒಂದು ಚಮಚ ದ್ರವವನ್ನು ತೆಗೆದುಕೊಂಡು ಮೂಸಿ ನೋಡಿ' ಎಂದರು.

ಅಶ್ವಿನಿ ಆ ದ್ರವ್ಯವನ್ನು ಮೂಸಿ ನೋಡುತ್ತಲೇ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ನ್ಯಾನೋ ರೋಬಾಟ್‌ಗಳು ಅಲ್ಲಿಂದ ಹೊರಟು ಮೂಗಿನ ಮೂಲಕ ಕೈ - ಕಾಲುಗಳನ್ನು ಆಡಿಸುತ್ತ ಅವಳ ಗಂಟಲಿನಲ್ಲಿ ಇಳಿದವು. ಇನ್ನೂ ಆಳಕ್ಕೆ ಸ್ವತಂತ್ಯವಾಗಿ ಇಳಿದವು. ಅದರಲ್ಲೂ ಒಂದು

ಕ್ರಮವಿತ್ತು. ಹುಡುಕಾಟದಲ್ಲಿ ಶಿಸ್ತು ಎದ್ದು ಕಾಣುತ್ತಿತ್ತು. ಎದುರಿಗೆ ಬಂದ ಅಪಾಯಕಾರಿ ಬ್ಯಾಕ್ಟೀರಿಯ ವೈರಸ್‌ಗಳ ಮೇಲೆ ದಾಳಿ ಮಾಡುತ್ತ ನುಚ್ಚುನೂರು ಮಾಡುತ್ತ ಸಾಗಿದವು. ಆದರೆ ಇತ್ತ ಅಶ್ವಿನಿಗೆ ಒಡಲಾಳದಲ್ಲಿ ಏನಾಗುತ್ತಿದೆ ಎಂಬ ಸುಳಿವೂ ಸಿಕ್ಕಲಿಲ್ಲ. ಕೊನೆಯ ಪಕ್ಷ ಸಣ್ಣ ನವೆ ? ಅದೂ ಇಲ್ಲ.

ಈ ನ್ಯಾನೋ ರೋಬಾಟ್‌ಗಳ ಗಾತ್ರವು ಬ್ಯಾಕ್ಟೀರಿಯಗಳಷ್ಟೇ. ಸ್ವಲ್ಪ ಹೊತ್ತಿನ ನಂತರ ಡಾಕ್ಟರ್ ರಮೇಶ್ ಸಣ್ಣಗೆ ಸದ್ದು ಮಾಡುವ ಒಂದು ಪುಟಾಣಿ ಸಾಧನವನ್ನು ಅಶ್ವಿನಿ ಬಾಯಿಗಿಟ್ಟರು. ಪೆನ್ನಿನ ಮುಳ್ಳಿನಂತಿರುವ ಆ ಸಾಧನದ ತುದಿಯಲ್ಲಿ ಸಹಸ್ರ ಸಹಸ್ರ ರೋಬಾಟ್‌ಗಳನ್ನು ಸಂಗ್ರಹಿಸಿದರು. ಮತ್ತೆ ತಾಳೆ ಹಾಕಿ ನೋಡಿದರು. ಅಶ್ವಿನಿ ಶರೀರದಲ್ಲಿ ಒಂದು ರೋಗಾಣುವೂ ಕಾಣದಂತೆ ಹೇಳಹೆಸರಿಲ್ಲದಾಗಿದೆ. ಅವು ಯೋಧರ ಪಡೆಯಂತೆ ನುಗ್ಗಿದ ರೋಬಾಟ್‌ಗಳಿಂದ ಧ್ವಂಸವಾಗಿವೆ. ರಮೇಶ್, ಅಶ್ವಿನಿ ಕೇಳುವ ಮೊದಲೇ "ಇವು ಬಯೋ ಸೆನ್ಸಾರ್"ಗಳು ಎಂದು ಹೇಳಿದರು. ಅಂದರೆ ನ್ಯಾನೋ ರೋಬಾಟ್ ಅಶ್ವಿನಿ ಕಾಯಿಲೆಗಳನ್ನು ನಿವಾರಿಸಿ ಬಂದಿದ್ದವು. ಐಯಾನ್, ಡಾ. ರಮೇಶ್‌ಗೆ ತನ್ನ ಕ್ರೆಡಿಟ್ ಕಾರ್ಡ್ ಹಿಂದಿರುಗಿ ಕೊಟ್ಟರು. ರಮೇಶ್ ಷರಾ ಪಾವತಿಸಿಕೊಂಡು ಕಾರ್ಡ್‌ನ್ನು ಹಿಂದಕ್ಕೆ ಕೊಟ್ಟರು. ಅಶ್ವಿನಿ ಯಾವ ತೊಂದರೆಯೂ ಇಲ್ಲದೆ ಎದ್ದು ನಿಂತಳು.

ಐಯಾನ್ ಮನೆಗೆ ನುಗ್ಗಿದ ಅಪರಾಧಿಗಳ ಬಗ್ಗೆ ಹಲವು ದಿನಗಳಿಂದ ಪೊಲೀಸ್ ಕಛೇರಿಯ ಸಿಕ್ರೆಟ್ ಕೋಣೆಯಲ್ಲಿ ಸಂಶೋಧನೆಗಳು ನಡೆಯುತ್ತಿವೆ. ಆ ದಿನ ಮತ್ತೆ ಕಂಪ್ಯೂಟರ್ ಮುಂದೆ ಪೊಲೀಸ್ ತಜ್ಞರು ಅಪರಾಧಿಯ ದೇಹ ಮತ್ತು ಮುಖವನ್ನು ಮೂರು ಕೋನಗಳಲ್ಲಿ ನೋಡುತ್ತಾ ಹೋಗುತ್ತಿದ್ದಾರೆ. ಮುಖಕ್ಕೆ ಸುತ್ತಿಕೊಂಡಿದ್ದ ಕವಚಗಳನ್ನು ನಿಧಾನವಾಗಿ ಒಂದೊಂದೇ ಪ್ರತ್ಯೇಕಿಸುತ್ತಿದ್ದಾರೆ. ಹೀಗೆ ಪ್ರತ್ಯೇಕಿಸುತ್ತಾ ಹೋದಂತೆ ಅಪರಾಧಿಯ ಮುಖದ ಮೇಲಿನ ಚರ್ಮವು ಪ್ರತ್ಯೇಕಗೊಂಡು ಮುಖದ ಮೇಲಿನ ಮೂಳೆಗಳು ಮಾತ್ರ ಉಳಿದುಕೊಂಡವು.

ಮಧ್ಯೆ ಮಧ್ಯೆ ಕಂಪ್ಯೂಟರಿಗೆ ಬೇಕಾದ ನಿರ್ದೇಶನಗಳನ್ನು ನೀಡುತ್ತಿದ್ದಾರೆ. ಕಂಪ್ಯೂಟರ್ ತನಗೆ ಬೇಕಾದ ಕಮ್ಯಾಂಡ್‌ಗಳನ್ನು ಕೇಳಿ ಪಡೆದುಕೊಳ್ಳುತ್ತಿದೆ. ಅಪರಾಧಿಯ ಮುಖದ ಎಲುಬುಗಳಿಗೆ ಅನುಗುಣವಾಗಿ ಮತ್ತೆ ಚರ್ಮವನ್ನು ತುಂಬಲಾಯಿತು. ಅಪರಾಧಿಯ ಮುಖಕ್ಕೆ ಹೋಲುವಂತಹ ಏಳು ಮುಖಚರ್ಯೆಗಳನ್ನು ಕಂಪ್ಯೂಟರ್ ತೋರಿಸುತ್ತಿದ್ದಂತೆ ಅದನ್ನು ಕಂಪ್ಯೂಟರ್‌ನಲ್ಲಿ ಶೇಖರಿಸಲಾಯಿತು.

ಇದನ್ನು ಸೃಷ್ಟಿಸಿದ ಅಧಿಕಾರಿಗಳು ಐಯಾನ್ ಮನೆಗೆ ಫೋನ್ ಮಾಡಿ ಐಯಾನ್ ಮತ್ತು ಅಶ್ವಿನಿಗೆ ಅಪರಾಧಿಗಳ ಬಗ್ಗೆ ತಿಳಿಸಬೇಕೆಂದು ಪ್ರಯತ್ನಿಸುತ್ತಿದ್ದರು. ಐಯಾನ್ ಮನೆಯಲ್ಲಿ ಇಲ್ಲದ ಕಾರಣ ಮಾಸ್ಟರ್ ಕಂಪ್ಯೂಟರ್ ಐಯಾನ್ ಮತ್ತು ಆತನ ಕುಟುಂಬ ಪ್ರವಾಸದಲ್ಲಿ ಇರುವುದಾಗಿ ತಿಳಿಸಿತ್ತು. ಅವರು ಪ್ರವಾಸದಲ್ಲಿ ಇರುವುದರಿಂದ ತೊಂದರೆಯಾಗ

ಬಾರದೆಂದು ಪೊಲೀಸ್ ಅಧಿಕಾರಿಗಳು ಐಯಾನ್ ಸ್ಮಾರ್ಟ್‌ಹೌಸ್ ತಲುಪಿದ ವಿಷಯ ತಿಳಿದಿದ್ದೇ ಪೊಲೀಸ್ ಅಧಿಕಾರಿಗಳು ಸಂಪರ್ಕಿಸಿದರು.

ಮೊದಲು ಸಂಶೋಧಿಸಿದ್ದ ಅಪರಾಧಿಗಳ ಮುಖಗಳನ್ನು ಕಂಪ್ಯೂಟರ್‌ನಲ್ಲಿ ಮತ್ತೆ ನೋಡಿದ ಪೊಲೀಸ್ ಅಧಿಕಾರಿ ಫೋನ್ ಇನ್ ಟಿವಿ ಸಂಪರ್ಕವನ್ನು ಕೇಳಿದ್ದೆ ಆ ಕಡೆಯಿಂದ ಪರದೆಯ ಮೇಲೆ ಐಯಾನ್ ಕಾಣಿಸಿಕೊಂಡ.

''ಹಲೋ ಗುಡ್ ಮಾರ್ನಿಂಗ್ ಮಿ. ಐಯಾನ್, ಹೇಗಿದ್ದೀರಿ ?''

''ಹಲೋ ಗುಡ್ ಮಾರ್ನಿಂಗ್. ಐಯಾಮ್ ಫೈನ್. ಥ್ಯಾಂಕ್ ಯು. ನೀವು ಹೇಗಿದ್ದೀರಿ?''

''ನಾನು ಚೆನ್ನಾಗಿದ್ದೀನಿ. ನಿಮ್ಮ ಕಂಪ್ಲೆಂಟ್ ಪ್ರಕಾರ ನಾವು ಅಪರಾಧಿಗಳ್ನ ಕಂಪ್ಯೂಟರ್ನಲ್ಲಿ ಸೃಷ್ಟಿಸಿದ್ದೀವಿ. ಆದರೆ ಅವರು ಎಲ್ಲಿದ್ದಾರೆ ಅಂತ ನಮಗೆ ಇನ್ನೂ ಗೊತ್ತಿಲ್ಲ. ನೀವು ಅವರ್ನ ಸ್ವಲ್ಪ ನೋಡಿದರೆ, ನಮಗೆ ಸಹಾಯ ಆಗಬಹುದು?''

''ಖಂಡಿತ... ದಯವಿಟ್ಟು ತೋರಿಸಿ''

''ನಮ್ಮ ವೆಬ್‌ಸೈಟ್‌ನಲ್ಲಿ ನೋಡ್ತೀರ? ಇಲ್ಲ ನಮ್ಮಲ್ಲಿಗೆ ಬರ್ತೀರಾ?''

''ನಿಮ್ಮ ವೆಬ್‌ಸೈಟ್ ಸಂಖ್ಯೆ ಹೇಳಿ. ನಾನು ಸಂಪರ್ಕಿಸ್ತೀನಿ'' ಐಯಾನ್ ಹೇಳುತ್ತಿದ್ದಂತೆ, ಪೊಲೀಸ್ ಅಧಿಕಾರಿ ವೆಬ್ ಸೈಟ್ ಸಂಖ್ಯೆಯನ್ನು ಹೇಳಿದ. ಐಯಾನ್ ವೆಬ್ ಸೈಟ್ ಸಂಖ್ಯೆಯನ್ನು ಒತ್ತಿದ್ದೆ ಆ ಸಂಖ್ಯೆಯ ದಾರಿ ಸಿಕ್ಕಿತ್ತು. ಐಯಾನ್ ಇಂಟರ್‌ನೆಟ್‌ನ ಮೋಡಂ ಮೂಲಕ ಗೋಡೆಯ ಮೇಲಿದ್ದ ಪರದೆಗೆ ಅಳವಡಿಸಿದ.

''ಮಿ. ಐಯಾನ್ ನಿಮ್ಮ ಮಿಸಸ್ ಇದಿದ್ರೆ ಅವರಿಗೂ ತೋರಿಸಿ. ಅವರೂ ನೋಡಲಿ.''

''ಡೆಫಿನೇಟ್ಲಿ'' ಐಯಾನ್, ಅಶ್ವಿನಿಯನ್ನು ಕರೆದು ವಿಷಯ ತಿಳಿಸಿದ. ಅಶ್ವಿನಿ ಎದ್ದು ಬಂದು ಐಯಾನ್ ಪಕ್ಕದಲ್ಲಿ ಕುಳಿತುಕೊಮಡಳು. ಇಬ್ಬರೂ ಪರದೆಯನ್ನೇ ತದೇಕಚಿತ್ತದಿಂದ ನೋಡುತ್ತಿದ್ದಾರೆ.



ಮೊದಲಿಗೆ ಇಬ್ಬರು ಅಪರಾಧಿಗಳು ಐಯಾನ್ ಮನೆಯ ಬಾಗಿಲು ಮೂಲಕ ಬರುವುದರಿಂದ ಅಪರಾಧಿಗಳ ಆಗಮನ ಶುರುವಾಯಿತು. ''ದಯವಿಟ್ಟು ಅವರು ನಡೆಯುವ ವಿಧಾನ, ಅವರ ಬಾಡಿ ಗೆಶ್ಚರ್ಸ್ ಎಲ್ಲವನ್ನು ಗಮನಿಸಿ'' ಪೊಲೀಸ್ ಅಧಿಕಾರಿ ಸೂಚಿಸಿದ.

ಅಪರಾಧಿಗಳು ಒಳಗೆ ಬಂದು ಮೊದಲಿಗೆ ಐಯಾನ್ ಮತ್ತು ಅಶ್ವಿನಿಯನ್ನು

ಗಮನಿಸಿದ್ದು ಅಶ್ವಿನಿಯ ಮೈತಡವಿದ್ದು ಅನಂತರ ತೇಜಸ್ ಮತ್ತು ಶಮಿ ಇರುವುದನ್ನು ನೋಡಿದ್ದು ಶಮಿಯ ಮೈ ತಡವಿದ್ದು... ಡ್ರಿಂಕ್ಸ್ ತೆಗೆದುಕೊಂಡಿದ್ದು ಒಡವೆ, ಹಣ ತೆಗೆದುಕೊಂಡಿದ್ದು ಕ್ರೆಡಿಟ್ ಕಾರ್ಡ್‌ಗಳನ್ನು ಬಾತ್ ರೂಮಿನ ಒಳಕ್ಕೆ ಬಿಸಾಕಿದ್ದು... ಎಲ್ಲವೂ ಮುಗಿದ ಮೇಲೆ ಅವರ ಮುಖಗಳು ದೊಡ್ಡದಾಗಿ ಪರದೆಯ ಮೇಲೆ ಮೂಡತೊಡಗಿದವು.

ಶರ್ಟ್ ಮತ್ತು ಪ್ಯಾಂಟಿನ ಒಳಗಿದ್ದ ದೇಹ ಕೈಕಾಲುಗಳು ನಿಖರವಾದ ಬಣ್ಣ ಆಕಾರಗಳ ಜೊತೆಗೆ ದೇಹದ ಮೇಲಿದ್ದ ಪ್ರತಿಯೊಂದು ಸಣ್ಣ ಚಿಹ್ನೆಗಳು ಕಾಣಿಸತೊಡಗಿದವು. ಒಬ್ಬನ ಹೊಟ್ಟೆಯ ಮೇಲೆ ಚಾಕುವಿನಿಂದ ತಿವಿದ ಗುರುತಿದೆ. ಇನ್ನೊಬ್ಬನಿಗೆ ಎದೆಯ ಮೇಲೆ ನಾಲ್ಕು ಇಂಚು ಉದ್ದವಾದ ಕೊಯ್ದ ಚಿಹ್ನ ಇದೆ. ಅವರನ್ನು ನೋಡಿದ ಅಶ್ವಿನಿ ಹೆದುರಿದ ಹುಲ್ಲೆಯಂತೆ ಸಣ್ಣಗೆ ಸದ್ದು ಮಾಡಿದಳು. ಐಯಾನ್ ಅಶ್ವಿನಿ ಕಡೆಗೆ ನೋಡಿದ. ಅಪರಾಧಿ ಗಳ ದೇಹಗಳ ಮೇಲಿನ ಪ್ರತಿಯೊಂದು ರೋಮವು ಸಹ ಕಾಣಿಸುತ್ತಿದೆ.

ಪ್ರಪಂಚದ ಎಲ್ಲಾ ವಿಮಾನ ನಿಲ್ದಾಣಗಳಲ್ಲಿ ಆಗಲೆ ಸ್ಕ್ಯಾನಿಂಗ್ ಯಂತ್ರಗಳನ್ನು ಅಳವಡಿಸಿದ್ದು ಪ್ರಯಾಣಿಕರು ಅದರ ಮೂಲಕ ಹಾದು ಹೋಗಿದ್ದೆ ಅವರ ದೇಹದ ಒಳಗಿರುವ ಅಂಗಾಂಗಗಳ ಜೊತೆಗೆ ಪ್ರತಿಯೊಂದು ವಸ್ತುವು ಕಣ್ಣಿಗೆ ಕಾಣಿಸುತ್ತದೆ. ದೇಹದ ಮೇಲೆ ಮತ್ತು ದೇಹದ ಒಳಗೆ ಇರುವ ವಸ್ತುಗಳನ್ನು ಪ್ರತ್ಯೇಕವಾಗಿ ನೋಡಬಹುದಾಗಿತ್ತು. ಒಂದು ಕಾಲದಲ್ಲಿ ಕಳ್ಳರು, ಪ್ರಯಾಣಿಕರು, ದರೋಡೆಕಾರರು ಚಿನ್ನ, ವಜ್ರ ಇನ್ನಿತರ ಮಾದಕ ವಸ್ತುಗಳನ್ನು ದೇಹದ ಗುಪ್ತ ಸ್ಥಳಗಳಲ್ಲಿ, ಬೂಟು, ಬಟ್ಟೆಗಳು ಇನ್ನಿತರ ವಸ್ತುಗಳಲ್ಲಿ ಅಡಗಿಸ್ಕೊಂಡು ಬರುತ್ತಿದ್ದರು. ಕೆಲವೊಮ್ಮೆ ನುಂಗಿ ಹೊರಕ್ಕೆ ಬಂದ ತಕ್ಷಣವೆ ಭೇದಿಗೆ ತೆಗೆದುಕೊಂಡು ಹೊರಕ್ಕೆ ತರುತ್ತಿದ್ದರು. ಆದರೆ ಈಗ ಯಾವ ರೀತಿಯಲ್ಲೂ ಈ ಯಂತ್ರಗಳನ್ನು ವಂಚಿಸಲು ಆಗುತ್ತಿರಲಿಲ್ಲ.

ಅಪರಾಧಿಗಳ ಮುಖಗಳು ಇಡೀ ಪರದೆಯನ್ನು ತುಂಬಿಕೊಂಡಿವೆ. ಮುಖಗಳ ಮೇಲಿದ್ದ ಕವಚಗಳು ಒಂದೊಂದಾಗಿ ಕಳಚಿಕೊಳ್ಳುತ್ತ ಹೋಗುತ್ತಿವೆ. ಕೆಳಗಿನ ದವಡೆಗಳು... ಮೇಲಿನ ದವಡೆಗಳು... ಒಳಗೆ ಹಲ್ಲುಗಳೂ ಕಾಣಿಸುತ್ತಿವೆ. ಒಬ್ಬನಿಗೆ ಒಂದು ಹುಳುಕು ಹಲ್ಲು, ಇನ್ನೊಬ್ಬನಿಗೆ ಒಂದು ಹುಳುಕು ಹಲ್ಲಿನ ಜೊತೆಗೆ ಅರ್ಧ ಮುರಿದಿರುವ ಇನ್ನೊಂದು ಹಲ್ಲು ಕಾಣಿಸುತ್ತಿದೆ.

ಒಬ್ಬನ ಹಣೆ ಅಗಲವಾಗಿದ್ದರೆ ಇನ್ನೊಬ್ಬನ ಹಣೆ ಗೋರಿಲ್ಲಾದಂತೆ ಸಣ್ಣದಾಗಿದೆ.

ಮುಖದ ಮೇಲಿನ ಗುಳ್ಳೆಗಳು ಒಂದೊಂದಾಗಿ ಚರ್ಮದ ಪದರುಗಳಿಂದ ತುಂಬಿಕೊಳ್ಳುತ್ತಾ ಹೋದಂತೆ ಮುಖಗಳು ಸ್ಪಷ್ಟವಾದ ರೂಪ ಪಡೆದುಕೊಂಡವು.

''ಅರೆ ಇವನು?'' ಕುಳಿತಿದ್ದ ಐಯಾನ್ ಕುರ್ಚಿಯಿಂದ ಕುಪ್ಪಳಿಸಿ ಎದ್ದು ನಿಂತುಕೊಂಡ. ಅಶ್ವಿನಿ ''ಇವನಾ?'' ಹೌಹಾರಿ ಪ್ರಶ್ನಿಸಿದಳು.

"ಹೌದು ! ಅವನೆ ಅವರ ಫಾರ್ಮ್‌ಹೌಸ್‌ನಲ್ಲಿ ಕೆಲಸ ಮಾಡುತ್ತಿರುವ ರೈಟರ್ ನಾರಾಯಣ." ಇಬ್ಬರೂ ಒಬ್ಬರ ಮುಖಗಳನ್ನೊಬ್ಬರು ನೋಡಿಕೊಂಡರು.

"ಬಾಸ್ಟರ್ಡ್... ಇವನಾ...? ನನ್ಗೆ ನಂಬೂವುದಕ್ಕೆ ಆಗ್ತಾ ಇಲ್ಲ" ಐಯಾನ್ ಕೋಪೋದ್ರೇಗೊಂಡು ಹೇಳಿದ. ಅಶ್ವಿನಿ ಕಣ್ಣುಗಳು ಅವಳಿಗೆ ಗೊತ್ತಿಲ್ಲದೆ ಅಗಲವಾಗಿ. ಆಶ್ಚರ್ಯಚಕಿತವಾಗಿ ತೆರೆದುಕೊಂಡು ಬಿಟ್ಟಿದ್ದವು. ಮಾತುಗಳೇ ಹೊರಡಲಿಲ್ಲ.

ಎಲ್ಲವನ್ನು ವೀಕ್ಷಿಸುತ್ತಿದ್ದ ಪೊಲೀಸ್ ಅಧಿಕಾರಿ "ಇವನು ನಿಮ್ಗೆ ಗೊತ್ತಾ?" ಪ್ರಶ್ನಿಸಿದರು. "ಹೌದು ! ಚೆನ್ನಾಗಿ ಗೊತ್ತು. ನಮ್ಮ ಫಾರ್ಮ್ ಹೌಸ್‌ನಲ್ಲಿ ರೈಟರ್ ಕೆಲಸ ಮಾಡ್ತಾನೆ.

"ನಿಮ್ಮ ಫಾರ್ಮ್ ಹೌಸ್ ಎಲ್ಲಿದೆ?" ಐಯಾನ್ ಫಾರ್ಮ್ ಹೌಸ್‌ನ ವಿಳಾಸ ಹೇಳಿದ. "ನೀವು ಈಗ್ಲೇ ನಮ್ಮ ಜೊತೆಗೆ ಬನ್ನಿ. ಅವರನ್ನು ಅರೆಸ್ಟ್ ಮಾಡಿಬಿಡೋಣ. ನೀವು ಇತ್ತೀಚೆಗೆ ಯಾವಾಗ ಫಾರ್ಮ್ ಹೌಸ್ಗೆ ಹೋಗಿದ್ದಿರಿ?"

"ನೆನ್ನೆ ಬೆಳಿಗ್ಗೆ 9 ಗಂಟೆಯವರೆಗೂ ಫಾರ್ಮ್ ಹೌಸ್‌ನಲ್ಲೇ ಇದ್ದಿವಿ. ನಾರಾಯಣ ಅಲ್ಲೇ ಇದ್ದ. ನಾನು ಫೋನ್ ಮಾಡಿ ನೋಡ್ಲಾ?" ಐಯಾನ್ ಕೇಳಿದ.

"ಬೇಡಿ. ಫೋನ್ ಮಾಡ್ಬೇಡಿ. ನಿಮಗೆ ಏನಾದರೂ ಅರ್ಜೆಂಟ್ ಕೆಲಸ ಇದ್ದರೆ ನೀವು ಇಲ್ಲೇ ಇರಿ. ನಾವು ಇಮಿಡಿಯಟ್ಟಾಗಿ ಹೋಗ್ತೀವಿ. ಸಣ್ಣ ಸಂದೇಹ ಬಂದರು ಅವನು ನಮ್ಮ ಕೈಗೆ ಸಿಗೋದಿಲ್ಲ" ಪೊಲೀಸ್ ಅಧಿಕಾರಿ ಹೇಳುತ್ತಿದ್ದಂತೆ ಐಯಾನ್,

"ಹಾಗಾದರೆ ನೀವು ಹೋಗಿ ಬನ್ನಿ. ನಾವು ಮನೆಗೆ ಬಂದು ಅರ್ಧ ಗಂಟೆ ಆಗಿದೆ ಅಷ್ಟೆ ಸ್ವಲ್ಪ ವಿಶ್ರಾಂತಿ ತೆಗೊಳ್ತೀವಿ"

"ಓ.ಕೆ. ನೀವು ವಿಶ್ರಾಂತಿ ತೆಗೆದ್ಕೊಳ್ಳಿ" ಎಂದ ಪೊಲೀಸ್ ಅಧಿಕಾರಿಗಳು ಮತ್ತೊಮ್ಮೆ ಫಾರ್ಮ್‌ಹೌಸ್ ವಿಳಾಸವನ್ನು ಸರಿಯಾಗಿ ಐಯಾನ್‌ನಿಂದ ತಿಳಿದುಕೊಂಡು ವಾಹನದಲ್ಲಿ ಹೊರಟೇಬಿಟ್ಟರು.

ಐಯಾನ್ ಮತ್ತು ಅಶ್ವಿನಿ ಇನ್ನೂ ಶಾಕ್‌ನಲ್ಲೆ ಇದ್ದರು. ನಾರಾಯಣ, ಅಶ್ವಿನಿಯನ್ನು ನಗ್ನ ಮಾಡಿ ಅವಳ ದೇಹದ ಜೊತೆಗೆ ಆಡಿಕೊಂಡಿದ್ದ ಚಿತ್ರಗಳು ಅವಳ ಕಣ್ಣುಗಳ ಮುಂದೆ ಹಾದು ಹೋಗುತ್ತಿದ್ದಂತೆ ಭಯಂಕರ ಕೋಪ ಬಂದಿತು. ಅವನು ಎದುರಿಗೆ ಸಿಕ್ಕರೆ ಶೂಟ್ ಮಾಡಿಬಿಡಬೇಕು ಎನ್ನುವಷ್ಟು ಕೋಪ ಬಂದಿತು. ಒಂದೇ ಸಮನೆ ಚಡಪಡಿಸುತ್ತ ಮನೆಯೆಲ್ಲ ಓಡಾಡತೊಡಗಿದಳು. ಐಯಾನ್ ಅಶ್ವಿನಿಯ ಭುಜಗಳ ಮೇಲೆ ಕೈಯಾಕಿ ಸಮಾಧಾನಪಡಿಸಿ ಕೂರಿಸಿದ.

ಅಶ್ವಿನಿ, "ಐಯಾನ್" ಎಂದಳು. ಐಯಾನ್ ಅವಳ ಕಡೆಗೆ ದಿಟ್ಟಿಸಿ ನೋಡಿದ. "ನನ್ಗೆ ನಾರಾಯಣನ ಮೇಲೆ ಮೊದಲಿನಿಂದಲೂ ಸಂದೇಹ ಇತ್ತು. ಮೊನ್ನೆ ಹೋದಾಗ್ಲೂ ನನ್ನ

ಮುಖಾನೆ ನೋಡ್ತಾ ಇದ್ದ. ನಾನ್ ಅವನ್ ಕಡೆ ನೋಡಿದ ತಕ್ಷಣ ಬೇರೆ ಕಡೆಗೆ ಮುಖ ತಿರುಗಿಸ್ಕೊಂಡುಬಿಡ್ತಿದ್ದ.

"ಹೌದಾ ! ನೀನು ನನ್ಗೆ ಯಾಕ್ ಹೇಳ್‌ಲಿಲ್ಲ?"

"ನಾನು ಏನೋ ನೋಡ್ತಾನೆ ಅಂದುಕೊಂಡೆ" ಎಂದಳು. ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಾದರು.

ಇದಕ್ಕೆ ಮುಂಚೆ ನಾರಾಯಣನನ್ನು ಎರಡು ಮೂರು ಸಲ ಫಾರ್ಮ್‌ಹೌಸ್‌ನಿಂದ ಕರೆದು ತಂದು ಸ್ಮಾರ್ಟ್ ಮನೆಯಲ್ಲಿ ಇಟ್ಟುಕೊಂಡಿದ್ದಾರೆ. ಆದರೆ ಅವನಿಗೆ ಸ್ಮಾರ್ಟ್‌ಹೌಸ್ ಹೊರಗೆ ಸೆಲ್ಲಾರ್‌ನಲ್ಲಿ ಪ್ರತ್ಯೇಕವಾದ ಒಂದು ಕೋಣೆ ಇತ್ತು. ರಾತ್ರಿ ಅಲ್ಲಿದ್ದು, ದಿನದಲ್ಲಿ ಮನೆಯಲ್ಲಿ ಹೇಳಿದ ಕೆಲಸ ಮಾಡುತ್ತಿದ್ದ. ಎರಡು ಮೂರು ದಿನಗಳಲ್ಲಿ ಫಾರ್ಮ್ ಹೌಸ್‌ನ ಲೇವಾದೇವಿ ಮುಗಿಸಿಕೊಂಡು ಹೋಗಿಬಿಡುತ್ತಿದ್ದ.

ಆಗಲೂ ಅಶ್ವಿನಿ ಒಬ್ಬಳೆ ಇದ್ದಾಗ ನಿಧಾನವಾಗಿ ಬಂದು ಹಿಂದೆ ನಿಂತುಕೊಳ್ಳುವುದು ಅವಳ ಮುಖವನ್ನು ಮರೆಯಿಂದ ನಿಂತು ನೋಡುವುದು ಮಾಡಿದ್ದ. ಅಶ್ವಿನಿ ಯಾವುದಕ್ಕೂ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ ಇವನು ಈ ಮಟ್ಟಕ್ಕೆ ಹೋಗುತ್ತಾನೆಂದು ಯಾರೂ ಊಹಿಸಲಿಲ್ಲ.

"ಅವನು ಪೊಲೀಸರಿಗೆ ಸಿಗೂದಿಲ್ಲ. ಇಷ್ಟೊತ್ತಿಗೆ ಓಡಿಹೋಗಿರ್ತಾನೆ "ಅಶ್ವಿನಿ ಇದ್ದಕ್ಕಿದ್ದಾಗೆ ಹೇಳಿದಳು".

"ಅದ್ಯಾಗೇಳ್ತೀಯಾ?" ಐಯಾನ್ ದಿಢೀರನೆ ಪ್ರಶ್ನಿಸಿದ.

"ಮೊನ್ನೆ ಕಾಸ್ಮೋರಾ ನಮ್ಮ ಮನೇಗೆ ಕಳ್ಳರು ಬಂದಿದ್ದರು ಅಂತ ನಾರಾಯಣ್‌ಗೆ ಹೇಳ್ತಾ ಇದ್ದಳು. ಅವಳ್ನ ಆಗ ಆಡಿಸುತ್ತ ಸ್ವಲ್ಪ ದೂರ ಕರೆದ್ಕೊಂಡೋಗಿ ಮಾತನಾಡಿಸ್ತಿದ್ದ. ನಾನು ಹೊರಗೆ ಕುಳಿತ್ಕೊಂಡು ಯಾವುದೊ ಪುಸ್ತಕ ಓದ್ತಿದ್ದೆ. ಅವಳು ಏನೇನು ಹೇಳಿದಳೋ ಗೊತ್ತಿಲ್ಲ" ಈಗ ಐಯಾನ್ ನಿಜವಾಗಿಯೂ ತಲೆ ಕೆಡಿಸಿಕೊಂಡಂತೆ ಚಿಂತಾಕ್ರಾಂತನಾದ. ಐಯಾನ್ ದಿಢೀರನೆ ಎದ್ದು ಮಾಸ್ಟರ್ ಕಂಟ್ರೋಲ್ ರೋಬೋಟ್‌ಗೆ ಯಾವುದೇ ವಿಷಯವನ್ನು ಹೊರಗಿನವರು ಲ್ಯೂಪ್ ಮಾಡದಂತೆ ಸೀಲ್ ಮಾಡಿದ.

"ಪೊಲೀಸರು ಹಿಡಿದೆ ಹಿಡಿಯುತ್ತಾರೆ ಅಂತ ಗೊತ್ತಿಲ್ಲವ ಅವನ್ಗೆ?" ಅಶ್ವಿನಿ ಪ್ರಶ್ನಿಸಿದಳು.

"ಅದೇ ನನ್ಗೂ ಅರ್ಥ ಆಗ್ತಾ ಇಲ್ಲ. ಅಷ್ಟೊಂದು ಧೈರ್ಯವಾಗಿ ಇಂತಹ ಕೆಲಸ ಮಾಡಿದ್ದಾನಲ್ಲ? ಮಾಸ್ಟರ್ ರೋಬೋಟ್ ಕಂಟ್ರೋಲ್ ಕಳೆದುಕ್ಕೊಂಡುಬಿಟ್ರೆ. ಆಮೇಲೆ ಯಾರಿಗೂ ಏನೂ ಗೊತ್ತಾಗುವುದಿಲ್ಲ ಅಂತ ತಿಳಿದ್ಕೊಂಡಿರ್ಬೇಕು. ಮಾಸ್ಟರ್ ರೋಬೋಟ್ ಕಂಟ್ರೋಲ್ ಕಳೆದುಕೊಂಡರೂ ಮಲ್ಟಿ ಐಯ್ಡ್ ಕ್ಯಾಮರಾ ಚಿತ್ರ ತೆಗೆಯುತ್ತೆ ಅಂತ

ಗೊತ್ತಿಲ್ಲವ ಅವನಿಗೆ. ಫಾರ್ಮ್ ಹೌಸ್ಗೆ ಫೋನ್ ಮಾಡಿ ಇದ್ದಾನೊ ಇಲ್ಲವೊ...? ನೋಡ್ಲ" ಐಯಾನ್ ಕೇಳಿದ.

"ಈಗ್ ಬೇಡ. ಅವನ್ಗೆ ಸಂದೇಹ ಬಂದುಬಿಡುತ್ತೆ. ಹೇಗೊ ಪೊಲೀಸರು ಹೋಗಿದ್ದಾರೆ. ಅವರೆ ಯಾವುದೂ ತಿಳಿಸಲಿ" ಅಶ್ವಿನಿ ಹೇಳಿದಳು. ಐಯಾನ್ ವಿಷಯವನ್ನು ತೇಜಸ್ ಮತ್ತು ಶಮಿಗೆ ತಿಳಿಸಿದ್ದೆ , ಇಬ್ಬರೂ ಐಯಾನ್ ಮನೆಗೆ ಧಾವಿಸಿ ಬಂದರು. ಎಲ್ಲರೂ ಕುಳಿತುಕೊಂಡು ಮತ್ತೊಮ್ಮೆ ಅದೇ ವಿಷಯವನ್ನು ಮಾತನಾಡಿದರು. ಶಮಿ ಅಷ್ಟೊಂದು ತಲೆ ಕೆಡಿಸಿಕೊಂಡಂತೆ ಕಾಣಿಸಲಿಲ್ಲ. ಅವಳ ಹೊಟ್ಟೆ ತುಸು ದೊಡ್ಡದಾಗಿ ಕಾಣಿಸುತ್ತಿತ್ತು. ಈಗ ಅವಳು ಮೂರು ತಿಂಗಳ ಗರ್ಭಿಣಿ.



ಪೊಲೀಸರು ತಕ್ಷಣವೆ ನಾರಾಯಣನನ್ನು ಹಿಡಿಯಲು ಐಯಾನ್ ಫಾರ್ಮ್‌ಹೌಸ್ ಕಡೆಗೆ ಜೀಪಿನಲ್ಲಿ ಹೊರಟರು. ಜೀಪು ಎ ವಲಯ ದಾಟಿ ಗ್ರಾಮಾಂತರ ಪ್ರದೇಶದಲ್ಲಿ ಅತಿ ವೇಗದಲ್ಲಿ ಓಡುತ್ತಿದೆ. ರಾತ್ರೋರಾತ್ರಿ ದಾರಿ ಸವೆದ ಜೀಪು ಬೆಳಗಿನ ಜಾವದಲ್ಲಿ ಐಯಾನ್ ಫಾರ್ಮ್‌ಹೌಸನ್ನು ಗುರುತಿಸಿ ಬಾಗಿಲ ಮುಂದೆ ನಿಂತುಕೊಂಡಿತು. ಕಾವಲುಗಾರನಿಗೆ ಮಫ್ತಿಯಲ್ಲಿರುವವರು ಪೊಲೀಸರೆಂದು ಮೊದಲಿಗೆ ತಿಳಿಯಲಿಲ್ಲ. ಏನು ನಡೆಯುತ್ತಿದೆ ಎಂದುಕೊಳ್ಳುವಷ್ಟರಲ್ಲಿ ಪೊಲೀಸರು ಫಾರ್ಮ್‌ಹೌಸನ್ನು ಸುತ್ತುವರಿದರು. ಅನಂತರ ಕಾವಲುಗಾರನನ್ನು ನಾರಾಯಣ ಎಲ್ಲಿದ್ದಾನೆ? ಎಂದು ಪ್ರಶ್ನಿಸಿದರು. ಕಾವಲುಗಾರನಿಗೆ ಬಂದಿರುವವರು ಪೊಲೀಸರೆಂದು ತಿಳಿದು ಹೋಯಿತು. ಕಾವಲುಗಾರ,

"ನೆನ್ನೆ ಹತ್ತು ಗಂಟೆಗೆ ಬ್ಯಾಂಕಿಗೋಗಿ ಬರ್ತಿನಿ ಅಂತ ಹೋದವರು ಇನ್ನೂ ಬಂದಿಲ್ಲ. ಅವರಿಗಾಗಿ ನಿನ್ನೆಯಿಂದ ಕಾಯ್ತಾಯಿದ್ದೀವಿ" ಎಂದ. ಪೊಲೀಸರಿಗೆ ಉಸಿರು ನಿಂತೋದಂತಾಯಿತು.

"ಕಳ್ಳ ನನ್ನ ಮಗ. ಎಷ್ಟು ಸಿಕ್ರೆಟ್ಟಾಗಿ ಬಂದರು ತಪ್ಪಿಸಿಕೊಂಡು ಹೋಗಿದ್ದಾನಲ್ಲ?" ಬಹುಶಃ ಈ ದಿನ ಬಂದರು ಬರಬಹುದೆಂದು ಕಾವಲುಗಾರನಿಗೆ ವಿಷಯ ತಿಳಿಸಿ ಇಬ್ಬರು ಪೊಲೀಸರು ಮಫ್ತಿಯಲ್ಲಿ ಅಲ್ಲೇ ಕಾಯತೊಡಗಿದರು. ಉಳಿದವರು ಜೀಪಿನ ಸಮೇತ ಸ್ಥಳೀಯ ಪೊಲೀಸ್ ಠಾಣೆಗೆ ತಲುಪಿ ವಿಷಯವನ್ನು ಅಲ್ಲಿನ ಪೊಲೀಸರಿಗೆ ತಿಳಿಸಿ ನಾರಾಯಣನಿಗಾಗಿ ಹುಡುಕಾಟ ನಡೆಸಿದರು.

ಇಡೀ ದಿನ ಹುಡುಕಾಡಿದರೂ ನಾರಾಯಣನ ಸುಳಿವು ದೊರಕಲಿಲ್ಲ. ಬ್ಯಾಂಕಿನಲ್ಲಿ ವಿಚಾರಿಸಿದಾಗ ಹಿಂದಿನ ದಿನವೆ ಹಣವನ್ನೆಲ್ಲ ತೆಗೆದುಕೊಂಡು ಹೋದುದಾಗಿ ತಿಳಿಯಿತು. ಅವನು ಎಲ್ಲಿಗೆ ಹೋದ ಎನ್ನುವ ಕ್ಲೂ ಯಾರಿಗೂ ದೊರಕಲಿಲ್ಲ. ಐಯಾನ್ ಮನೆಯಲ್ಲಿ ಅಶ್ವಿನಿ ಮತ್ತು ಶಮಿಯ ಜೊತೆಗೆ ಆಟವಾಡಿ ಹೋದಾಗಿನಿಂದ ಇಂದಿನವರೆಗೂ ಅಂದರೆ

ಕೊನೆ ಘಳಿಗೆವರೆಗೂ ತನ್ನ ಪ್ರಾಣದ ಜೊತೆಗೆ ಆಟವಾಡಿ ಕೊನೆಯಲ್ಲಿ ತಪ್ಪಿಸಿಕೊಂಡು ಹೋಗಿದ್ದಾನೆ. ಐಯಾನ್ ಮತ್ತು ಅಶ್ವಿನಿಯ ಪ್ರತಿಯೊಂದು ಹೆಜ್ಜೆಯನ್ನು ಅವನು ಹೇಗೊ ತಿಳಿದುಕೊಳ್ಳುತ್ತಿದ್ದ.

ನಿನ್ನೆ ಐಯಾನ್ ಮತ್ತು ಅಶ್ವಿನಿ ಫಾರ್ಮ್‌ಹೌಸ್‌ನಲ್ಲಿ ಇರುವವರೆಗೂ ಅವರ ಜೊತೆಗೆ ಇದ್ದು ಹೋಗಿದ್ದಾನೆ. ಕರಾರುವಕ್ಕಾಗಿ ತನ್ನ ಬಗ್ಗೆ ಗುಮಾನಿ ಬಂದ ಮೇಲೆಯೇ ಅವನು ತಪ್ಪಿಸಿಕೊಂಡಿದ್ದಾನೆ. ಅದು ಹೇಗೆ ಅಷ್ಟೊಂದು ನಿಖರವಾಗಿ ತಿಳಿದುಕೊಂಡ ಎನ್ನುವ ಗುಮಾನಿ ಪೊಲೀಸರಿಗೆ ಬಂದರೂ ಅವರ ಅನುಮಾನಕ್ಕೆ ಯಾವುದೇ ಉತ್ತರ ದೊರಕಲಿಲ್ಲ. ಸ್ಥಳೀಯ ಪೊಲೀಸರಿಗೆ ನಾರಾಯಣನ ಬಗ್ಗೆ ಎಲ್ಲವನ್ನೂ ತಿಳಿಸಿದ ಎ ವಲಯ ಪೊಲೀಸರು, ಬಂದ ದಾರಿಗೆ ಸುಂಕವಿಲ್ಲದೆ ಹಿಂದಿರುಗಿದರು.

ಐಯಾನ್ ಮತ್ತು ಅಶ್ವಿನಿ ವಿಷಯ ತಿಳಿದು ನಿಜವಾಗಿಯೂ ದಂಗಾಗಿ ಹೋದರು. ಇವನು ಸಾಮನ್ಯನಲ್ಲ, ಇವನನ್ನು ಹೇಗಾದರು ಮಾಡಿ ಹಿಡಿಯಲೇಬೇಕು. ಅವರಿಗೆ ಅವನ ಮೇಲೆ ಅಗಾಧವಾದ ಕೋಪ ಬಂದಿತು. ಎ ವಲಯದ ಪೊಲೀಸರು ಮತ್ತು ಫಾರ್ಮ್‌ಹೌಸ್ ವ್ಯಾಪ್ತಿಯಲ್ಲಿರುವ ಪೊಲೀಸರು ನಾರಾಯಣನನ್ನು ಹಿಡಿಯಲು ವಿಧವಿಧವಾದ ಕ್ಲೂಗಳನ್ನು ಹುಡುಕಲು ಪ್ರಾರಂಭಿಸಿದರು.



ಅದೊಂದು ಸೂಪರ್ ಸ್ಪೆಷಲ್ ಆಸ್ಪತ್ರೆ. ಶಮಿ ತನ್ನ ಚೊಚ್ಚಲು ಮಗುವನ್ನು ಸ್ವತಃ ನೋವು ಅನುಭವಿಸಿ ಪಡೆದುಕೊಳ್ಳಬೇಕೆ...? ಇಲ್ಲ ಆಧುನಿಕ ತಂತ್ರಜ್ಞಾನದಿಂದ ಯಾವುದೇ ನೋವು ಅನುಭವಿಸದೆ ಪಡೆದುಕೊಳ್ಳಬೇಕೆ? ಎನ್ನುವ ಜಿಜ್ಞಾಸೆಯಲ್ಲೇ ಹಲವು ತಿಂಗಳುಗಳನ್ನು ಕಳೆದುಬಿಟ್ಟಿದ್ದಾಳೆ. ಅವಳಿಗೆ ನಾಳೆ ನೋವು ಶುರುವಾಗುತ್ತದೆಂದು ವೈದ್ಯರು ಸಮಯ ಕೊಟ್ಟಿದ್ದಾರೆ. ಅಷ್ಟರೊಳಗೆ ಅವಳು ಯಾವುದೊಂದು ತೀರ್ಮಾನ ತೆಗೆದುಕೊಳ್ಳಬೇಕು. ಅವಳ ತಂದೆ ತಾಯಿ ಗಂಡ ತೇಜಸ್,

"ಸುಮ್ಮನೆ ಯಾಕೆ ನೋವು ಅನುಭವಿಸ್ತೀಯ...? ನೋವು ಅನುಭವಿಸಲಿ ಅನುಭವಿಸದೆ ಹೋಗಲಿ ಹುಟ್ಟುವ ಮಗು ನಿನ್ನದೆ ತಾನೆ...?" ಎಂದಿದ್ದಾರೆ. ಆದರೆ ಅವಳಿಗೆ ನೋವು ಅನುಭವಿಸಿ ಮಗುವನ್ನು ಪಡೆಯಬೇಕು ಎನ್ನುವ ಮಹತ್ವಾಕಾಂಕ್ಷೆ ಇದೆ.

ಇತ್ತೀಚೆಗೆ ನೂರಕ್ಕೆ ತೊಂಬತ್ತೊಂಬತ್ತು ಮಹಿಳೆಯರು ನೋವು ಅನುಭವಿಸದೆ ಮಕ್ಕಳಿಗೆ ಜನ್ಮ ನೀಡುತ್ತಿದ್ದಾರೆ. ಇದರ ಜೊತೆ ಜೊತೆಗೆ ಇನ್ನೊಂದು ವಿಷಯ ಅವಳನ್ನು ಪದೇ ಪದೇ ಕಾಡುತ್ತಿತ್ತು. ತಮ್ಮ ಖಾಸಗಿ ಸ್ಕ್ಯಾನಿಂಗ್ ಯಂತ್ರದಲ್ಲಿ ತನ್ನ ಮಗುವಿನ ರೂಪ ಮತ್ತು ಚಲನವಲನಗಳನ್ನು ಹತ್ತಾರು ಸಲ ನೋಡಿದ್ದಾಳೆ. ಅವಳ ಗಂಡ, ತಂದೆ - ತಾಯಿಯು ವೀಕ್ಷಿಸಿದ್ದಾರೆ. ಮಗು ತೇಟ್ ಐಯಾನ್‌ನಂತೆ ಕಾಣುತ್ತಿರುವುದು ಅವಳ ಗಮನಕ್ಕೆ ಬಂದಿದೆ.

ಇದನ್ನು ಗಮನಿಸಿದ ತೇಜಸ್ ನೇರವಾಗಿಯೆ ಒಮ್ಮೆ ಐಯಾನ್ ನನ್ನ ಮಗು ಎಂದು ಕ್ಲೈಮ್ ಮಾಡಬಾರದು ಎಂದಿದ್ದಾನೆ. ಅಲ್ಲಿಂದ ಮುಂದೆ ಅವನು ಎಂದೂ ಏನೂ ಮಾತನಾಡಲಿಲ್ಲ. ಈ ಮಾತು ಅವಳನ್ನು ಆಗಾಗ ಚಿಂತೆಗೆ ಈಡುಮಾಡಿದೆ. ಐಯಾನ್ ತುಂಬಾ ಸಭ್ಯ. ಹಾಗೆ ಮಾಡಲಾರ ಎಂದುಕೊಂಡಿದ್ದಾಳೆ ಶಮಿ. ಆದರೆ ಪ್ರಸ್ತುತ ಕಾನೂನಿನ ಪ್ರಕಾರ 14 ವರ್ಷಗಳವರೆಗೆ ಮಗುವಿನ ಜವಾಬ್ದಾರಿ ತಾಯಿಯದು. ಅನಂತರ ಮಗು ಹೆಣ್ಣಾಗಲಿ ಗಂಡಾಗಲಿ ಸ್ವತಂತ್ರವಾಗಿ ಬಿಡುತ್ತದೆ.

ಕೊನೆಯ ಕ್ಷಣದವರೆಗೂ ಯೋಚಿಸಿದ ಶಮಿ ಯಾವ ನೋವು ಇಲ್ಲದೆ ಆಧುನಿಕ ತಂತ್ರಜ್ಞಾನದಿಂದಲೆ ಮಗುವನ್ನು ಪಡೆದುಕೊಳ್ಳುವುದಾಗಿ ತೀರ್ಮಾನಿಸಿದಳು. ಅವಳ ತಂದೆ ತಾಯಿ, ತೇಜಸ್ ಹರ್ಷಚಿತ್ತರಾಗಿಬಿಟ್ಟರು. ವೈದ್ಯರು ಶಮಿಯನ್ನು ಪ್ರಸವ ಕೋಣೆಗೆ ಸಾಗಿಸಿದರು. ಅವಳನ್ನು ವಿಶೇಷ ಹಾಸಿಗೆ ಮೇಲೆ ಮಲಗಿಸಿ ದೇಹದ ಮೇಲಿನ ಉಡುಪುಗಳನ್ನು ತೆಗೆದು ಕೈಕಾಲುಗಳನ್ನ ಸಡಿಲಿಸುವಂತೆ ಹೇಳಿದರು. ಅನಂತರ ವಿಶೇಷವಾದ ಔಷಧಿಗಳನ್ನು ಅವಳ ದೇಹಕ್ಕೆ ಸೇರಿಸಲಾಯಿತು. ಮಗು ಅದೇ ಸಮಯಕ್ಕೆ ಹೊರಜಗತ್ತಿನ ಕಡೆಗೆ ತನ್ನ ತಲೆಯನ್ನು ತಿರುಗಿಸಿಕೊಂಡು ಕುಳಿತಿತ್ತು.

ಆ ಮಗುವಿನ ಆಗಮನವನ್ನು ಪರದೆಯ ಮೇಲೆ ನೋಡುತ್ತಿದ್ದಾರೆ. ಅದೇ ರೀತಿಯಾಗಿ ಹಲವು ಕುಟುಂಬಗಳ ಜನರು ಮತ್ತು ವೈದ್ಯರು ಹೊರಜಗತ್ತಿಗೆ ಬರಲು ಬಾಗಿಲುಗಳನ್ನು ಕಾಯುತ್ತಿರುವ ಶಿಶುಗಳನ್ನು ಪರದೆಗಳ ಮೇಲೆ ವೀಕ್ಷಿಸುತ್ತಿದ್ದಾರೆ. ನಿರೀಕ್ಷಿಸಿದ ಸಮಯಕ್ಕೆ ಸರಿಯಾಗಿ ಶಮಿಯ ದೇಹದಿಂದ ಮಗು ಬೇರ್ಪಟ್ಟಿತ್ತು. ನವಜಾತ ಶಿಶುವನ್ನು ಅತಿ ಮೃದುವಾಗಿ ಟಿಸ್ಯೂ ಕಾಗದಗಳಿಂದ ಸ್ವಚ್ಛಗೊಳಿಸಿ ಅದರ ತೂಕ ಇನ್ನಿತರ ವಿವರಗಳನ್ನು ದಾಖಲಿಸಿಕೊಂಡರು.

ಅನಂತರ ಮಗುವಿನ ದೇಹಕ್ಕೆ ನ್ಯಾನೊ ಬೋಟ್ಸ್‌ನ ಒಂದು ಬೂಸ್ಟರ್ ಕೊಡಲಾಯಿತು. ಈ ಚುಚ್ಚು ಮದ್ದಿನಲ್ಲಿ ಒಂದು ಮಿಲಿಯ ನ್ಯಾನೊ ಬೋಟ್ಸ್‌ಗಳಿದ್ದು ಅವುಗಳನ್ನು ಮಿನಿ ಕಂಪ್ಯೂಟರ್‌ಗಳೆಂದೆ ಕರೆಯುತ್ತಾರೆ. ಈ ಮಿನಿ ಕಂಪ್ಯೂಟರುಗಳು ಮಗುವಿನ ಕಾಂಡ ಕೋಶಗಳ ಮೂಲಕ ದೇಹದ ಎಲ್ಲಾ ಭಾಗಗಳನ್ನು ಸೇರಿಕೊಳ್ಳುತ್ತವೆ. ನಮ್ಮ ಶರೀರದಲ್ಲಿ 100 ಟ್ರಿಲಿಯನ್ (100,000,000,000,000) ಕೋಶಗಳಿವೆಯೆಂದು ವಿಜ್ಞಾನಿಗಳ ಎಣಿಕೆ. ಕೋಶ ಗಾತ್ರ? 30 ರಿಂದ 50 ಮೈಕ್ರೋ ಮೀಟರ್. ಅದರೊಳಗಿರುವ ನ್ಯೂಕ್ಲಿಯಸ್ 10 ಮೈಕ್ರೋ ಮೀಟರ್ ವ್ಯಾಸ. ಅತ್ಯಂತ ಕಿರಿ ಜೀವಕೋಶವೆಂದರೆ 0.1 ಮೈಕ್ರೋ ಮೀಟರ್. ನ್ಯೂಕ್ಲಿಯಸ್‌ನಲ್ಲಿ ಕ್ರೋಮೋಸೋಮ್‌ಗಳಿವೆ. ಸುರುಳಿ ಬಿಚ್ಚಿದರೆ ಡಿ.ಎನ್.ಎ. ಪಾವಟಿಗೆಯಂತೆ ಸುರುಳಿ ಸುತ್ತಿಕೊಂಡು ಸಾಗುತ್ತದೆ. ಇದರ ಗಾತ್ರ ಎರಡು ನ್ಯಾನೋ ಮೀಟರ್. ಜೀವಕೋಶವೇ ನಿಸರ್ಗದ ಅದ್ಭುತ ನ್ಯಾನೋ ತಂತ್ರದ ದ್ಯೋತಕ. ಕೋಶದೊಳಗಿರುವ ಎಲ್ಲ ಅಂಶಗಳೂ ಅತಿ ಕಿರಿಯಾದವು. ನಿಸರ್ಗದ ಈ ಕುಶಲಕಲೆಯೇ

ವಿಜ್ಞಾನಿಗಳಿಗೆ ಪ್ರೇರಣೆ ನೀಡಿದೆ. ಮಾಲಿಕ್ಯುಲಾರ್ ಮೆಷಿನ್ ಕಲ್ಪನೆ ಹುಟ್ಟಿದ್ದೇ ನಿಸರ್ಗದ ಇಂಥ ಅದ್ಭುತಗಳನ್ನು ಗಮನಿಸಿದ ತಂತ್ರಜ್ಞರಿಂದ. ಕಡಲಿನಲ್ಲಿ ಸಿಂಪಿಗಳು, ಹವಳ ಮುಂತಾದ ಚಿಪ್ಪುಳ್ಳ ಪ್ರಾಣಿಗಳು ಪರಮಾಣು ಮಟ್ಟದಲ್ಲಿ ತಮ್ಮ ಚಿಪ್ಪು ಕಟ್ಟುತ್ತವೆ. ಮೂಳೆ, ಹಲ್ಲು, ಮರ, ರೇಷ್ಮೆ ಪ್ರಾಣಿಗಳ ಕೊಂಬು, ಸ್ನಾಯುತಂತು ಇವೆಲ್ಲ ಚಿಕ್ಕ ಚಿಕ್ಕ ಘಟಕಗಳಾಗಿ ಅಭಿವರ್ಧನೆಯಾದ ಅಂಶಗಳು. ದೊಡ್ಡ ಅಣುಗಳಾದ ಹಿಮೋಗ್ಲೋಬಿನ್, ಪಾಲಿಮರೇಸ್‌ಗಳು ಮಾಲಿಕ್ಯುಲಾರ್ ಮೆಷಿನ್‌ಗಳೆಂದೇ ಹೆಸರಾಗಿವೆ.

ಜೀವಿ ವಿಕಾಸವೆಂದರೆ ಕೋಟಿ ಕೋಟಿ ವರ್ಷಗಳ ದೀರ್ಘಾವಧಿಯಲ್ಲಿ ಅಣುಗಳು ಸಹಜ ಆಯ್ಕೆಯಲ್ಲಿ ತೊಡಗಿರುವುದು. ಈ ಜೀವಕೋಶದೊಳಗೆ ಎಷ್ಟಿವೆ ನೋಡಿ ಸಣ್ಣ ಸಣ್ಣ ಫ್ಯಾಕ್ಟರಿಗಳು. 20 ಅಮೈನೋ ಆ್ಯಸಿಡ್‌ಗಳು, ಕೆಲವು ನ್ಯೂಕ್ಲಿಯೋ ಟೈಡ್‌ಗಳು, ಡಿ.ಎನ್.ಎ., ಆರ್.ಎನ್.ಎ. ಒಂದು ಡಜನ್ ಲಿಪಿಡ್ ಅಣುಗಳು, ಎರಡು ಡಜನ್ ಸಕ್ಕರೆ ಕಣಗಳು. ಇವೆಲ್ಲ ಕಟ್ಟಡದ ನಿರ್ಮಾಣಕ್ಕೆ ಬೇಕಾದ ಇಟ್ಟಿಗೆಗಳು. ಇದರೊಳಗೆ ತಮಗೆ ತಾವೇ ನಖಲಾಗುವ ಜೀನ್‌ಗಳು, ಪ್ರೊಟೀನ್ ಈ ಒಂದೊಂದೂ ನ್ಯಾನೋ ತಂತ್ರಜ್ಞಾನವನ್ನು ಬಹುವಾಗಿ ಪ್ರಚೋದಿಸಿವೆ. ಈ ಇಟ್ಟಿಗೆಗಳೆಲ್ಲದರಲ್ಲೂ ತೂರಿ ಹೋಗುವ ನ್ಯಾನೊ ಬೋಟ್ಸ್‌ಗಳು ಮಗುವಿಗೆ ಯಾವುದೇ ಖಾಯಿಲೆಗಳು ಬರದಂತೆ ನೋಡಿಕೊಳ್ಳುತ್ತವೆ.

ತಾಯಿಯ ಹಾಲಿಗೆ ಸರಿಸಾಟಿಯಾಗುವ ಹಾಲು ಇನ್ನೊಂದಿಲ್ಲ ಎನ್ನುವ ವಿಷಯ ಎಷ್ಟೊ ಹಳೆಯದಾದ ವಿಷಯವಾಗಿ ಹೋಗಿದೆ. ಯಾವ ತಾಯಿಯು ಈಗ ತನ್ನ ಮಗುವಿಗೆ ಈ ವಲಯದಲ್ಲಿ ಮೊಲೆ ಉಣಿಸುವುದಿಲ್ಲ. ತಾಯಿಯ ಹಾಲಿಗೆ ಎಲ್ಲಾ ರೀತಿಯಲ್ಲೂ ಸಮ ಎನ್ನುವ ಹಾಲು ಎಲ್ಲಾ ಅಂಗಡಿಗಳಲ್ಲೂ ದೊರಕುತ್ತದೆ. ಸರಕಾರ ಮತ್ತು ವೈದ್ಯರೂ ಸಹ ಅದು ನಿಜ ಎಂದು ಹಾಲಿನ ಚೀಲದ ಮೇಲೆ ಮುದ್ರೆ ಒತ್ತಿದ್ದಾರೆ.

ಶಮಿ ಮತ್ತು ತೇಜಸ್‌ರ ಬ್ಯಾಂಕ್ ಖಾತೆಯ ಮೂಲಕ ಆಸ್ಪತ್ರೆ ಆಗಲೆ ತನ್ನ ಬಿಲ್ಲನ್ನು ಪಡೆದುಕೊಂಡಿತ್ತು. ಮಗುವಿಗೆ ಜನ್ಮ ನೀಡಿದ ಕೇವಲ ಎರಡು ಗಂಟೆಯಲ್ಲಿ ಶಮಿ ಮತ್ತು ಮಗುವಿನ ತೇಜಸ್, ಜೊತೆಗೆ ಕಾರಿನಲ್ಲಿ ಕಳುಹಿಸಿದರು. ರೋಬೋ-ತೊಟ್ಟಿಲು ತಾಯಿಯಷ್ಟೆ ಮೃದುವಾಗಿ, ಎಚ್ಚರವಾಗಿ ಮಗುವನ್ನು ತನ್ನ ಮಡಿಲಲ್ಲಿ ಇಟ್ಟುಕೊಂಡು ಕಾರಿನಲ್ಲಿ ಹಿಂದೆ ಕುಳಿತುಕೊಂಡಿದೆ. ಆ ವಿಶೇಷ ರೋಬೊ ತೊಟ್ಟಿಲನ್ನು ಅವರು ಇತ್ತೀಚೆಗಷ್ಟೆ ಕೊಂಡುಕೊಂಡಿದ್ದಾರೆ. ಕಾರು ಓಡುತ್ತಿದ್ದರೆ ಶಮಿ ಎಂದಿನಂತೆ ತೇಜಸ್ ದೇಹದ ಮೇಲೆ ವಾಲಕೊಂಡಿದ್ದಾಳೆ. ತೇಜಸ್ ಏನೋ ಯೋಚಿಸುತ್ತಿರುವಂತೆ ಕಾಣುತ್ತಿದೆ.



ಐಯಾನ್ ತನ್ನ ಕಂಪನಿ ಕೆಲಸದ ಮೇಲೆ ಕೆನ್ ನಗರಕ್ಕೆ ಹೋಗಿದ್ದವನು ಕೆಲಸ ಮುಗಿಸಿಕೊಂಡು ಬೆನ್ ನಗರದ ವಿಮಾನದಲ್ಲಿ ಕುಳಿತುಕೊಂಡಿದ್ದಾನೆ. ವಿಮಾನದ ಪ್ರತಿಯೊಂದು ಆಸನದ ಮುಂದೆಯೂ ಇಂಟರ್‌ನೆಟ್, ಸ್ಕೈ ಸಿಗ್ನಲ್ ಸಂಪರ್ಕವಿರುವ

ಕಂಪ್ಯೂಟರ್ ಪರದೆ ಇದೆ. ಕೆಲವು ಪ್ರಯಾಣಿಕರು ತಮಗೆ ಬೇಕಾದ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದರೆ, ಇನ್ನೂ ಕೆಲವರು ಪರದೆಯ ಮೇಲೆ ತಮಗೆ ಬೇಕಾದ ಚಾನಲ್ ಯಾವುದೆಂದು ಪ್ರೋಬ್ ಮಾಡುತ್ತಿದ್ದಾರೆ.

ವಿಶೇಷವೆಂದರೆ ಯಾವುದೇ ಕಾರ್ಯಕ್ರಮವನ್ನು ತಮಗೆ ಬೇಕಾದ ಭಾಷೆಯಲ್ಲಿ ವೀಕ್ಷಿಸಬಹುದಾಗಿದೆ. ಯಾವುದೇ ಕಾರ್ಯಕ್ರಮವಾಗಲಿ ತಮಗೆ ಬೇಕಾದ ಭಾಷೆಯಲ್ಲಿ ಕೇಳಿಸುವಂತೆ ಕಂಪ್ಯೂಟರಿಗೆ ಆದೇಶ ನೀಡಿದರೆ ಸಾಕು.

ಯಾವುದೇ ಕಾರ್ಯಕ್ರಮ ಆಯಾ ಭಾಷೆಯಲ್ಲಿ ಬರುತ್ತದೆ. ಸಣ್ಣ ತೊಡುಕೆಂದರೆ ವಿಶೇಷವಾಗಿ ಗಮನಿಸಿದಾಗ ಮಾತನಾಡುತ್ತಿರುವವರ ತುಟಿಗಳು ಮಾತ್ರ ಸ್ವಲ್ಪ ವಕ್ರವಾಗಿ ಕಾಣಿಸುತ್ತವೆ. ಅದನ್ನು ಬಿಟ್ಟರೆ ಬೇರೆ ಯಾವುದೇ ವ್ಯತ್ಯಾಸ ಕಾಣಿಸುವುದಿಲ್ಲ.

ಬೆನ್ ನಗರ ಬಿಟ್ಟು 23 ಗಂಟೆಗಳಾಗಿರುವ ಐಯಾನ್‌ಗೆ ಅಶ್ವಿನಿ ಮತ್ತು ಕಾಶ್ಮೋರಳ ನೆನಪು ಬಂದಿತು. ಐಯಾನ್ ತನ್ನ ಜೇಬಿನಲ್ಲಿದ್ದ ಪುಟ್ಟ ಯಂತ್ರವನ್ನು ಕೈಗೆ ತೆಗೆದುಕೊಂಡು ಸಂಖ್ಯೆಗಳನ್ನು ಒತ್ತಿದ. ಅದು ಅಶ್ವಿನಿ ಮನೆಯಲ್ಲಿ ಮೊಳಗಿತು. ಅಶ್ವಿನಿ ಕುಳಿತ ಕಡೆಯಿಂದಲೆ ಐಯಾನ್ ವಿಮಾನದಲ್ಲಿ ಕುಳಿತಿರುವುದನ್ನು ಮತ್ತು ತಮ್ಮ ತಮ್ಮ ಕ್ಷೇಮ ಸಮಾಚಾರಗಳನ್ನು ಕೇಳಿಕೊಂಡರು. ಅಶ್ವಿನಿ ಮಾತನಾಡುತ್ತಲೆ ಇನ್ನೊಂದು ಪ್ಯಾರಲರ್ ಪರದೆಗೆ ಚಾನೆಲ್ ಬದಲಿಸಿದಳು. ಈಗ ಕಾಸ್ಮೋರಾ ತನ್ನ ತಂದೆಯ ಜೊತೆಗೆ ಮಾತನಾಡತೊಡಗಿದಳು.

''ಹ್ಞಾ... ಐಯಾನ್ ಇನ್ನೊಂದು ವಿಷಯ ನಿನಗೆ ಹೇಳ್ಬೇಕು. ಶಮಿಗೆ ಗಂಡು ಮಗು ಆಗಿದೆಯಂತೆ. ನೀನ್ ಬಂದ ಮೇಲೆ ಇಬ್ಬರೂ ಅವರ ಮನೇಗೋಗೋಣ''.

''ಹೌದಾ ! ವೆರಿ ನೈಸ್. ಗುಡ್ ನ್ಯೂಸ್. ನಾನ್ ಬಂದ ಮೇಲೆ ಇಬ್ಬರೂ ಹೋಗೋಣ. ಓಕೆ... ಬೈ ಬೈ'' ಪರದೆಯಿಂದ ಐಯಾನ್ ಮಾಯವಾದ. ಅದೇ ಸಮಯಕ್ಕೆ ಐಯಾನ್ ಎದುರಿಗಿದ್ದ ಪರದೆಯ ಮೇಲೆ ಲವ್‌ಲೀನಾ ಕಾಣಿಸಿಕೊಂಡಳು. ಐಯಾನ್ ಹೃದಯ ಒಂದು ಕ್ಷಣ ಕಂಪಿಸಿತು. ಲವ್‌ಲೀನಾ, ಐಯಾನ್‌ನನ್ನು ನೋಡಿದ್ದೆ ತಡ ಅವಳ ಕಣ್ಣುಗಳಲ್ಲಿದ್ದ ಕುತೂಹಲ ಅರ್ಥವಾಗುವುದರೊಳಗೆ –

''ಹೌ ಕಂ ಯು ಆರ್ ಹಿಯರ್...? ಅದೇಗೆ ನನ್ನನ್ನು ಟ್ರೇಸ್ ಮಾಡಿದೆ...?'' ಐಯಾನ್ ಪ್ರಶ್ನಿಸಿದ.

''ಜಿಪಿಎಸ್‌ಡಿ ಕೋಡ್‌ನಿಂದ'' (ಗ್ಲೋಬಲ್ ಪೊಷಿಸನಿಂಗ್ ಸಿಸ್ಟಂ ಯಂತ್ರ) ಎಂದಳು ಲವ್ ಲೀನಾ.

''ಅದೇಗೆ? ಜಿಪಿಎಸ್ ಕೋಡ್ ಗೊತ್ತಾಯಿತು''

''ನಿನ್ನ ಜಿಪಿಎಸ್ ಕೋಡ್ ಸಂಖ್ಯೆ ನೀನೆ ನನಗೆ ಹೇಳಿದ್ದರೂ ನಾನ್ ಜ್ಞಾಪಕ

ಇಟ್ಟುಕೊಳ್ತಾ ಇರಲಿಲ್ಲ. ಆದರೆ ನನ್ಗೆ ಬೇಕಾದವರು ಯಾರೇ ಆಗಲಿ ಅವರ್ನ ಆ ಕ್ಷಣದಲ್ಲಿ ಮಾತನಾಡಿಸ್ಬೇಕು ಅಂದರೆ ಸಾಕು. ಅವರು ನನ್ ಮುಂದಿರ್ಬೇಕು, ಅಷ್ಟೆ''

ಅವಳ ಮಾತುಗಳನ್ನು ಕೇಳುತ್ತಿದ್ದ ಐಯಾನ್ ತಬ್ಬಿಬ್ಬಾದ.

ಐಯಾನ್ ಒಮ್ಮೆ ಶ್ವಾಸವನ್ನು ಎಳೆದುಕೊಂಡು ಅವಳನ್ನೇ ನೋಡುತ್ತಿದ್ದ.

''ನಾವಿಬ್ಬರು ಪ್ರಯಾಣ ಮಾಡ್ತಾಯಿರುವ ವಿಮಾನಗಳು ಒಂದೇ ಸಮಯಕ್ಕೆ ಬೆನ್ ಸಿಟಿ ವಿಮಾನ ನಿಲ್ದಾಣದಲ್ಲಿ ಇಳಿಯುತ್ತವೆ. ನಾನು ಈ ಒಂದು ರಾತ್ರಿ ನಿನ್ನವಳು. ಇವೊತ್ತು ನೀನು ನನ್ನನ್ನು ಎಲ್ಲಿಗೆ ಬೇಕಾದರೂ ಕರೆದ್ಕೊಂಡು ಹೋಗ್ಬಹುದು. ಬೈ''

ಎಂದು ಐಯಾನ್ ಎದುರಿದ್ದ ಪರದೆಯ ಮೇಲಿಂದ ಲವ್‌ಲೀನಾ ಮಾಯವಾಗಿ ಬಿಟ್ಟಳು.

ಅವನ ಹೃದಯ ಒಮ್ಮೆಲೆ ಖುಷಿಯಿಂದ ಚೀರಿಕೊಂಡಿತು. ಕೂಡಲೆ ಇಂಟರ್‌ನೆಟ್ ಮೂಲಕ ಬೆನ್‌ಸಿಟಿಯ ಒಂದು ಹೋಟಲನ್ನು ಸಂಪರ್ಕಿಸಿದ. ಅನಂತರ ಪುಟ್ಟ ಮೊಬೈಲ್ ಆಕಾರದ ಜಿಪಿಎಸ್ ಯಂತ್ರದ ಕಡೆಗೆ ಐಯಾನ್ ಒಂದು ಸಲ ತೀಕ್ಷ್ಣವಾಗಿ ನೋಡಿದ. ಪ್ರಸ್ತುತ ಪ್ರಪಂಚಾದಾದ್ಯಂತ ಚಾಲನೆಯಲ್ಲಿರುವ ಜಿಪಿಎಸ್ ಯಂತ್ರದ ವಿಶೇಷವೆಂದರೆ ಅದರಲ್ಲಿ ತಮಗೆ ಇಷ್ಟಾವಾದವರ ವಿವರಗಳ ಜೊತೆಗೆ ಅವರನ್ನು ಗುರುತಿಸುವ ಕೋಡ್‌ಗಳನ್ನು ತುಂಬಿಟ್ಟುಕೊಳ್ಳಬಹುದು. ಅಂದರೆ ಅವರ ರೂಪ, ಅವರ ರಕ್ತದಲ್ಲಿರುವ ಗುಣಗಳನ್ನು ಅವರ ಜೆನಿಟಿಕ್ ಕೋಡುಗಳನ್ನು ನೀಡಬೇಕು. ಅನಂತರ ಪ್ರಪಂಚದ ಯಾವುದೇ ಮೂಲೆಯಲ್ಲಿದ್ದರೂ ಅವರನ್ನು ಗುರುತಿಸಬಹುದು. ಇದನ್ನು ಮೊದಲು ಭೂವಿಜ್ಞಾನಿಗಳು ಇನ್ನಿತರರು ಕಾಡುಗಳಿಂದ ಹೊರಕ್ಕೆ ಬರಲು ಉಪಯೋಗಿಸುತ್ತಿದ್ದರು. ಸಮುದ್ರಯಾನಿಗಳು ತಮ್ಮ ದಿಕ್ಕು ದಾರಿಗಳನ್ನು ಕಂಡುಕೊಳ್ಳಲು ಉಪಯೋಗಿಸುತ್ತಿದ್ದರು. ಅನಂತರ ವಿಮಾನಗಳಲ್ಲಿ ಬಳಕೆಯಾಯಿತು. ಯಾವುದೇ ಹಳ್ಳಿ ಪಟ್ಟಣಗಳು ಮತ್ತು ನಿಖರವಾದ ಸ್ಥಳವನ್ನು ಉಪಗ್ರಹಗಳ ಸಹಾಯದಿಂದ ಗುರುತಿಸುತ್ತಿದ್ದರು.

ಹಾಗಾಗಿ ಈ ಕೋಡನ್ನು ಒಮ್ಮೆ ಒಬ್ಬರಿಗೆ ಕೊಟ್ಟು ಬಿಟ್ಟರೆ ಅವರ ಚಲನವಲನಗಳನ್ನು ನೇರವಾಗಿ ವೀಕ್ಷಿಸಬಹುದು. ಇದರಿಂದ ಯಾರಿಂದಲೂ ಯಾವುದೇ ಗುಟ್ಟನ್ನು ಕಾಪಾಡಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಜಿಪಿಎಸ್ ಯಂತ್ರಕ್ಕೆ ತಮ್ಮ ಕೋಡ್‌ನ್ನು ಯಾರೂ ನೀಡುತ್ತಿರಲಿಲ್ಲ. ಪತಿ ಪತ್ನಿಯರೂ ಸಹ ಇದಕ್ಕೆ ಒಪ್ಪುತ್ತಿರಲಿಲ್ಲ. ಜಿಪಿಎಸ್ ಕೋಡಿನ ಬಗ್ಗೆ ಸಾಕಷ್ಟು ಗೊಂದಲಗಳು ಕಾಣಿಸಿಕೊಂಡ ಮೇಲೆ ಪ್ರಪಂಚಾದಾದ್ಯಂತ ಯಾರನ್ನೂ ಜಿಪಿಎಸ್ ಕೋಡ್‌ಗಾಗಿ ಒತ್ತಾಯ ಮಾಡಬಾರದು ಎನ್ನುವ ಕಾನೂನನ್ನು ತರಲಾಯಿತು. ಆದರೆ ಇಷ್ಟವಾದವರು ಅದನ್ನು ಬಳಸಬಹುದು, ಅದಕ್ಕೆ ಕಾನೂನು ಅಡ್ಡ ಬರುವುದಿಲ್ಲ.

ಎರಡು ವಿಮಾನಗಳು ಸರಿಯಾದ ಸಮಯಕ್ಕೆ ಬೆನ್ ಸಿಟಿಯ ಏರ್‌ಪೋರ್ಟ್‌ನಲ್ಲಿ

ಇಳಿದುಕೊಂಡವು. ಲವ್‌ಲೀನಾ ಐಯಾನ್‌ಗಾಗಿ, ಐಯಾನ್ ಲವ್‌ಲೀನಾಗಾಗಿ ಇಬ್ಬರೂ ಆತುರಾತುರವಾಗಿ ಬರುತ್ತಿದ್ದಾರೆ. ಎಷ್ಟೋ ದಿನಗಳ ಕುತೂಹಲ, ಆಶ್ಚರ್ಯ ಆವೇಗ ಎಲ್ಲವೂ ಕೆಲವೇ ಕ್ಷಣಗಳಲ್ಲಿ ಹತ್ತಿರವಾಗಿ ಡಿಡಿಕ್ಕಿ ಹೊಡೆದುಕೊಳ್ಳುತ್ತವೆ, ಬಂದೇಬಿಟ್ಟರು.

ಐಯಾನ್ ಕಣ್ಣುಗಳಿಗೆ ಲವ್‌ಲೀನಾ ಕಾಣಿಸಿದ್ದೇ ತಡ ಅವಳ ಹತ್ತಿರಕ್ಕೆ ಬಂದು ಕೈಗಳನ್ನು ಚಾಚಿದ. ಲವ್‌ಲೀನಾ ಕಣ್ಣುಗಳನ್ನು ಹಾರಿಸುತ್ತ ಅವನ ಎದೆಯ ಮೇಲೆ ಮೃದುವಾಗಿ ಒರಗಿಕೊಂಡಳು. ಅವರಿಗೆ ಗೊತ್ತಿಲ್ಲದೆಯೆ ನಾಲ್ಕು ತುಟಿಗಳು ಒಂದು ಕ್ಷಣ ಸ್ಪರ್ಶಕ್ಕೆ ಒಳಗಾಗಿ ಬೇರ್ಪಟ್ಟವು. ಅವಳ ಬಲಕೈಯನ್ನು ತನ್ನ ಎಡಕೈಯಲ್ಲಿ ಹಣೆದುಕೊಂಡು ಏರ್‌ಪೋರ್ಟಿನಿಂದ ನಡೆದು ಬರುತ್ತಿದ್ದಾರೆ. ನೋಡುತ್ತಿದ್ದವರಿಗೆ ಅವರಿಬ್ಬರೂ ಯಾವುದೋ ದೇಶದ ಯುವ ರಾಯಭಾರಿಗಳಂತೆ ತೋರುತ್ತಿದ್ದಾರೆ. ಏರ್‌ಪೋರ್ಟಿನಿಂದ ಹೊರಗೆ ಬಂದು ಅವರಿಗಾಗಿ ಕಾಯುತ್ತಿದ್ದ ಕಾರಿನಲ್ಲಿ ಇಬ್ಬರೂ ಕುಳಿತುಕೊಂಡರು. ಐಯಾನ್ ವಿಮಾನದಲ್ಲಿ ಕುಳಿತುಕೊಂಡೇ ಕಾದಿರಿಸಿದ ಹೋಟಲಿನ ಹೆಸರು ಹೇಳಿದ್ದೇ, ಕಾರು ವೇಗವಾಗಿ ಹೊರಟಿತು.

ಐಯಾನ್ ಮತ್ತು ಲವ್‌ಲೀನಾ ಈಗ ಹೋಟಲು ಮುಂದೆ ಕಾರಿನಿಂದ ಇಳಿದು ಕೊಂಡರು. ಅವರನ್ನು ಇಳಿಸಿದ ಕಾರು ಅಷ್ಟೇ ವೇಗದಲ್ಲಿ ಹಿಂದಕ್ಕೆ ಹೊರಟುಹೋಯಿತು. ಲವ್‌ಲೀನಾ ಮತ್ತು ಐಯಾನ್ ಈಗಲೂ ಕೈಕೈ ಹೆಣೆದು ಕೊಂಡಿದ್ದಾರೆ. ಅವರಿಬ್ಬರೂ ಹೋಟಲಿನ ಮುಖ್ಯ ಬಾಗಿಲಗೆ ಬಂದಿದ್ದೇ ಅವರಿಗಾಗಿ ಅಲ್ಲೇ ಕಾದಿದ್ದ ಸೂಪರ್‌ವೈಸರ್ ಪಕ್ಕಕ್ಕೆ ನಿಂತುಕೊಂಡು ಇಬ್ಬರನ್ನೂ ಒಳಕ್ಕೆ ಬರಮಾಡಿಕೊಂಡ. ಐಯಾನ್ ತಾನು ಬುಕ್ ಮಾಡಿದ ಸಂಖ್ಯೆಯನ್ನು ತಿಳಿಸಿದ್ದೆ ಸೂಪರ್‌ವೈಸರ್ ಒಂದು ವಿಶೇಷವಾದ ಭಂಗಿಯಲ್ಲಿ ಅವರಿಬ್ಬರಿಗೂ ವಂದಿಸಿದ.

ಮರುಕ್ಷಣದಲ್ಲಿಯೆ "ಅವರ್ ಗ್ರೂಪ್ ಆಫ್ ಕಂಪನಿ ಅಂಡ್ ಹೋಟಲ್ ಮನೇಜ್‌ಮೆಂಟ್ ವೆಲ್‌ಕಂಸ್ ಯು ಅಂಡ್ ಮೇಡಮ್ ಸರ್" ಎಂದು ಎರಡು ಹೂಗೊಂಚಲುಗಳನ್ನು ಇಬ್ಬರ ಕೈಗಳಿಗೂ ನೀಡಿ, ಅವರ ಮುಂದೇ ಟೀಕಾಗಿ ನಡೆಯತೊಡಗಿದ. ಒಂದೆರಡು ಲಿಫ್ಟ್‌ಗಳು ಮತ್ತು ರ್‍ಯಾಮ್ ಕ್ಯಾರಿಯರ್‌ಗಳ ಮೂಲಕ ಮೂವರೂ ಒಂದು ಕೋಣೆಯ ಮುಂದೆ ನಿಂತುಕೊಂಡರು. ಸೂಪರ್‌ವೈಸರ್ ಬಾಗಿಲು ಮುಂದಿದ್ದ ಬಟನ್ ಒತ್ತಿದ. ಬಾಗಿಲು ನಿಧಾನವಾಗಿ ತೆರೆದುಕೊಂಡಿತು.

"ಸರ್ ನೀವು ತಿಳಿಸಿದ ಹಾಗೆ ಎಲ್ಲವೂ ರೆಡಿ ಇದೆ. ಏನಾದರೂ ಬೇಕಾದರೆ ದಯವಿಟ್ಟು ತಿಳಿಸಿ ಸರ್" ಎಂದು ಹೇಳಿದ ಸೂಪರ್ ವೈಸರ್ ಹೊರಟುಹೋದ. ಐಯಾನ್ ಮತ್ತು ಲವ್‌ಲೀನಾ ಈಗಲೂ ಕೈಕೈ ಹೆಣೆದುಕೊಂಡೆ ಕೋಣೆ ಒಳಗೆ ನಡೆದರು. ಅವರು ಒಳಗೆ ಹೆಜ್ಜೆ ಇಡುತ್ತಿದ್ದಂತೆ ಗೋಡೆಗಳ ಮೇಲಿದ್ದ ದೀಪಗಳು ಒಂದೊಂದಾಗಿ ಬೆಳಕಿನ ಕಿರಣಗಳನ್ನು ಚೆಲ್ಲತೊಡಗಿದವು. ನವಿರಾದ ಸೆಂಟು ಅವರನ್ನು

ಆವರಿಸಿಕೊಳ್ಳುತ್ತಿದ್ದಂತೆ ಸುಂದರವಾದ ಬಣ್ಣಗಳನ್ನು ಬಳಿದುಕೊಂಡಿರುವ ಗೋಡೆಗಳು ಅವರ ಕಣ್ಣುಗಳಲ್ಲಿ ಮೂಡುತ್ತಿವೆ. ಆ ಕೋಣೆಗಳಲ್ಲಿ ಎಲ್ಲಾ ರೀತಿಯ ಸವಲತ್ತುಗಳು ಅವರಿಗಾಗಿ ತಯಾರಾಗಿ ನಿಂತಿವೆ.

ದೊಡ್ಡದಾದ ಹಾಸಿಗೆ, ಶೃಂಗಾರ ಮೇಜು, ಅದರ ಮುಂದೆ ದೇಶ ವಿದೇಶಗಳ ಶೃಂಗಾರ ಸಾಮಗ್ರಿಗಳು, ಇನ್ನೊಂದು ಕಡೆ ಚಿತ್ರ ವಿಚಿತ್ರ ಮಧು ಬಾಟಲುಗಳು, ಗೋಡೆಗಳ ತುಂಬಾ ವಿಶೇಷ ಕಲಾಕೃತಿಗಳು, ಗಿಡ ಬಳ್ಳಿ ಹೂವುಗಳು ತುಂಬಿಕೊಂಡಿವೆ. ಈಗ ಇಬ್ಬರೂ ಪಕ್ಕ ಪಕ್ಕದಲ್ಲೇ ಕುಳಿತುಕೊಂಡು ಒಬ್ಬರನ್ನೊಬ್ಬರು ನೋಡಿಕೊಳ್ಳತೊಡಗಿದರು. ಅವರಿಗೆ ಗೊತ್ತಿಲ್ಲದೆಯೆ ಅವರ ಮುಖಗಳು ಅರಳಿ ನಿಂತಿವೆ, ತುಟಿಗಳು ಹಾತೊರೆಯುತ್ತಿವೆ, ಕಣ್ಣುಗಳು ನಾಚಿಕೊಳ್ಳುತ್ತಿವೆ. ಏರ್‌ಪೋರ್ಟ್‌ನಲ್ಲಿ ಇಬ್ಬರು ಎದುರು ಬದುರಾದಾಗಿನಿಂದ ಅವರಿಬ್ಬರ ನಡುವೆ ಹತ್ತಾರು ಚುಂಬನಗಳು ನಡೆದುಹೋಗಿವೆ. ಮಧ್ಯ ಮಧ್ಯ ಮಾತುಗಳುನ್ನು ಮುತ್ತುಗಳಂತೆ ಒಂದೊಂದಾಗಿ ಬಹಳ ಜಾಗರೂಕತೆಯಿಂದ ಉಪಯೋಗಿಸಿದ್ದಾರೆ.

''ಈ ದಿನ ನಾನು ತುಂಬಾ ಲಕ್ಕಿ?'' ಐಯಾನ್ ಹೇಳಿದ.

''ಈ ದಿನವೆ ಅಲ್ಲ, ದಿನದ ನಂತರ ಬರುವ ರಾತ್ರಿಯೂ'' ಲವ್‌ಲೀನಾ ಹೇಳಿದಳು.

''ಎಸ್.ಎಸ್.'' ಇಬ್ಬರೂ ನಕ್ಕರು.

''ನೀನು ತುಂಬಾ ಬ್ಯೂಟ್‌ಫುಲ್ ಆಗಿದ್ದೀಯಾ ಲವ್‌ಲೀನಾ'' ಐಯಾನ್ ಹೇಳಿದ.

''ಲವ್‌ಲೀನಾ. ನಾನೆ ಲವ್ ಸಿಂಬಲ್''

ಲವ್‌ಲೀನಾ ನಗುತ್ತ ಹೇಳಿದ್ದೆ,

ಎಸ್... ಎಸ್ ನಾನು ಮರೆತೇಹೋದೆ. ಯು ಆರ್ ಲವ್... ಲವ್‌ಲೀನಾ ಅಲ್ಲ, ಅದು ಏನಾದರೂ ಆಗ್ಲಿ ನನ್ನ ಹೃದಯದಿಂದ ಹೇಳ್ತಾ ಇದ್ದೀನಿ. ನೀನು ತುಂಬಾ ಬ್ಯೂಟಿಫುಲ್ ಆಗಿದ್ದೀಯಾ'' ಐಯಾನ್ ಮಾತಿಗೆ,

''ಅದೇನೊ... ಈ ಬ್ಯೂಟಿಫುಲ್ ಅನ್ನೋ ಪದ ನನ್ಗೆ ಹಿಡಸೋದೆ ಇಲ್ಲ, ಇಪ್ಪತ್ತನೇ ಶತಮಾನದ ಕವಿಗಳು ಹೆಣ್ಣನ್ನ ಬಹಳ ವರ್ಣಿಸ್ತಾ ಇದ್ದರಂತೆ. ನೀನು ಅದೇ ರೀತಿ ಹೇಳ್ತಾ ಇದ್ದೀಯಾ...!'' ಎಂದಳು ಲವ್‌ಲೀನಾ.

ಐಯಾನ್ ತುಸು ಸೆಳೆತಗೊಂಡು ಅನಂತರ ಸ್ವಲ್ಪ ಸಾವರಿಸಿಕೊಂಡ.

ಐಯಾನ್, ಲವ್‌ಲೀನಾ ಕಡೆಗೆ ಬಾಗಿ ಅವಳ ಕೆನ್ನೆಗೆ ಒಂದು ಮುತ್ತು ನೀಡಿದ. ಲವ್‌ಲೀನಾ ಅವನ ಕಡೆಗೆ ನೋಡಿದಳು. ಐಯಾನ್ ''ನಿನ್ನ ಫೇವರಿಟ್ ಡ್ರಿಂಕ್ ಯಾವುದು?'' ಎಂದ.

"ಫೆವರಿಟ್ ಡ್ರಿಂಕ್ ಅಂತ ಒಂದನ್ನೇ ಯಾವಾಗ್ಲೂ ಕುಡಿಯಬಾರ್ದು. ಒಂದೊಂದಕ್ಕೂ ಒಂದೊಂದು ವಿಶೇಷ ಇರುತ್ತೆ. ಇವೊತ್ತು ಎಲ್ಲಾನು ನಿನ್ನ ಫೆವರಿಟೇ ನನ್ನ ಫೆವರಿಟ್'' ಎಂದಳು ಲವ್‌ಲೀನಾ.

ಈಗ ಇಬ್ಬರೂ ಎದ್ದು ನಿಂತರು. ಐಯಾನ್ ಮೇಜಿನ ಹತ್ತಿರಕ್ಕೆ ನಡೆದು ತನಗೆ ಇಷ್ಟವಾದ ಡ್ರಿಂಕ್ಸ್‌ನ್ನು ಎರಡು ಗ್ಲಾಸುಗಳಿಗೆ ತುಂಬಿಕೊಳ್ಳುತ್ತಿದ್ದಂತೆ, ಲವ್‌ಲೀನಾ ತನ್ನ ಮೇಲಿನ ಉಡುಪುಗಳನ್ನು ತೆಗೆದು ಒಂದು ಕಡೆಗೆ ಎಸೆದಳು. ಉದ್ದವಾದ ಕಾಲುಗಳು, ಮೊಣಕಾಲುಗಳಿಂದ ಎಷ್ಟೋ ಮೇಲೆ ಒಂದು ಸಣ್ಣದಾದ ಪ್ಯಾಂಟಿ ಇದೆ. ಅದರ ಮೇಲೆ ಸೊಂಟದಿಂದ ಇನ್ನೂ ಎಷ್ಟೋ ಮೇಲೆ ಹೂವುಗಳಿಂದ ಹೆಣೆದಿರುವ ಒಂದು ಬ್ರಾ ಇದೆ. ಅದನ್ನು ಚಿನ್ನದ ಕುಸುರಿಯಿಂದ ಮಾಡಿದಂತಿದೆ.

ಐಯಾನ್ ಎರಡು ಕೈಗಳಲ್ಲಿ ಎರಡು ಗ್ಲಾಸುಗಳನ್ನು ತೆಗೆದುಕೊಂಡು ಲವ್‌ಲೀನಾ ಕಡೆಗೆ ತಿರುಗಿಕೊಂಡವನು "ವಾವ್... ಮೈ ಗಾಡ್'' ಎಂದು ಅವಳನ್ನೇ ನೋಡುತ್ತಾ ಇದ್ದುಬಿಟ್ಟ. ಲವ್‌ಲೀನಾ ಒಂದೆಜ್ಜೆ ಮುಂದಕ್ಕೆ ಬಂದು ಒಂದು ಗ್ಲಾಸನ್ನು ತನ್ನ ಕೈಗೆ ತೆಗೆದುಕೊಂಡಳು.

ಐಯಾನ್ "ಚಿಯರ್ಸ್'' ಎಂದು ಒಂದು ಗುಟುಕು ಕುಡಿದು ಗ್ಲಾಸನ್ನು ಟೇಬಲಿನ ಮೇಲಿಟ್ಟು ತನ್ನ ಮೇಲಿದ್ದ ಉಡುಪನ್ನು ವೇಗವಾಗಿ ತೆಗೆಯತೊಡಗಿದ. ಲವ್‌ಲೀನಾ ಒಳಗೊಳಗೆ ನಗುತ್ತ ಅವನ ಹತ್ತಿರಕ್ಕೆ ನಡೆದು,

"ಎಲ್ಲವೂ ಸಾವಕಾಶವಾಗಿ ನಡೆಯಲಿ'' ಎಂದಳು.

ಐಯಾನ್ ಮೇಲಿನ ಉಡುಪುಗಳನ್ನು ತೆಗೆದುಹಾಕಿ ಸೋಫಾ ಮೇಲೆ ಕುಳಿತುಕೊಂಡುಬಿಟ್ಟ. ಈಗ ಇಬ್ಬರೂ ನಿಧಾನವಾಗಿ ಕುಡಿಯುತ್ತ ಮಾತನಾಡುತ್ತಿದ್ದಾರೆ. ಅವಳ ಸೌಂದರ್ಯವನ್ನು ನೋಡಿದ ಐಯಾನ್ ಚಡಪಡಿಸುತ್ತಿದ್ದಾನೆ. ಅವಳಿಗೂ ಸಣ್ಣದಾಗಿ ಕಿಕ್ ಏರಿ ಕಣ್ಣುಗಳು ಮಾದಕವಾಗುತ್ತಿವೆ. ಗಂಡು ಹೆಣ್ಣು ಒಬ್ಬರನ್ನೊಬ್ಬರು ಇಷ್ಟಪಟ್ಟರೆ ಅಲ್ಲಿ ಕಾಯುವುದಕ್ಕೆ ಅವಕಾಶವಿರುವುದಿಲ್ಲ. ಇಬ್ಬರೂ ಎದ್ದು ಸ್ನಾನದ ಕೋಣೆಯ ಕಡೆಗೆ ನಡೆದರು.



ಅಶ್ವಿನಿ ತನ್ನ ಮನೆಯಲ್ಲಿ ಐಯಾನ್‌ಗಾಗಿ ಕಾದು ಕಾದು ಕೆಂಡವಾಗಿದ್ದಾಳೆ. ಇದೋ ಬಂದ ಅದೋ ಬಂದ... ಹೀಗೆ ಮೂರು ಗಂಟೆಯಾದರೂ ಐಯಾನ್ ಮನೆಗೆ ಬರಲಿಲ್ಲ. ಬೆನ್ ಸಿಟಿ ಏರ್‌ಪೋರ್ಟಿನಲ್ಲಿ ವಿಮಾನ ಇಳಿದರೆ ಅಲ್ಲಿಂದ ಕಾರಿನಲ್ಲಿ ಮನೆಗೆ ಬರುವುದಾದರೆ ನಲವತ್ತು ನಿಮಿಷ ಇಲ್ಲವೆಂದರೆ ಐವತ್ತು ನಿಮಿಷ ಹಿಡಿಸುತ್ತದೆ. ಏನಾದರೂ

ತೊಂದರೆಯಾಗಿ ತಡವಾಗಿದ್ದರೆ ಐಯಾನ್ ತಿಳಿಸಬೇಕಾಗಿತ್ತು. ಸರಿ ಕೈಯಿಂದ ಜಿಪಿಎಸ್ ತೆಗೆದುಕೊಂಡು ಆನ್ ಮಾಡಿ ಐಯಾನ್‌ಗೆ ನೀಡಿದ್ದ ಖಾಸಗಿ ಕೋಡ್‌ನ್ನು ಒತ್ತಿದಳು.

ಜಿಪಿಎಸ್ ಯಂತ್ರ ತಡವರಿಸುತ್ತಿದೆ. ಯಾಕೆ? ಅದರ ಸಿಗ್ನಲ್ ಬೆನ್ ಸಿಟಿ ಮತ್ತು ಡೆಲ್ ಸಿಟಿಯ ನಡುವೆ ಯಾವುದೊ ಸ್ಥಳದಲ್ಲಿ ಆಕಾಶದಲ್ಲಿಯೆ ಡಿಕ್ಕಿ ಹೊಡೆದುಕೊಂಡು ನಿಂತುಹೋಗುತ್ತಿದೆ. ಎಷ್ಟೇ ಪ್ರಯತ್ನಪಟ್ಟರೂ ಸಂಪರ್ಕ ದೊರಕುತ್ತಿಲ್ಲ. ವಿಮಾನಕ್ಕೆ ಏನೂ ಆಗಲಿಲ್ಲ ತಾನೆ? ಜಿಪಿಎಸ್ ಯಂತ್ರವನ್ನು ಪಕ್ಕಕ್ಕಿಟ್ಟು ಇಂಟರ್‌ನೆಟ್ ಮೂಲಕ ಐಯಾನ್ ಪ್ರಯಾಣ ಮಾಡುತ್ತಿದ್ದ ವಿಮಾನದ ವಿವರಗಳನ್ನು ಕೇಳಿದಳು. ಆ ವಿಮಾನ ಬೆನ್ ಸಿಟಿ ತಲುಪಿ ಮೂರು ಗಂಟೆ ಸಮಯವಾಗಿರುವುದಾಗಿ ತಿಳಿದುಬಂದಿತು.

ಐಯಾನ್ ಬಗ್ಗೆ ವಿವರ ಕೇಳಿದಾಗ ಐಯಾನ್ ಬೆನ್ ಸಿಟಿ ಏರ್‌ಪೋರ್ಟಿನಲ್ಲಿ ಕ್ಷೇಮವಾಗಿ ಇಳಿದಿರುವುದಾಗಿ ತಿಳಿಯಿತು. ಇನ್ನು ಉಳಿದಿರುವುದೆಂದರೆ ಉಪಗ್ರಹಗಳ ಮೂಲಕ ಅಳವಡಿಸಿರುವ ಸ್ಕೈ ಸಿಗ್ನಲ್ ಮೂಲಕ ತಿಳಿದುಕೊಳ್ಳುವುದು. ಅಶ್ವಿನಿ ಮಾಸ್ಟರ್ ಕಂಟ್ರೋಲ್ ಮೂಲಕ ಐಯಾನ್‌ನನ್ನು ಟ್ರೇಸಿಂಗ್ ಮಾಡಲು ತಿಳಿಸಿದಳು. ಕೆಲವೆ ಕ್ಷಣಗಳಲ್ಲಿ ಐಯಾನ್ ಒಂದು ಹೆಣ್ಣಿನ ಜೊತೆಗೆ ಏರ್‌ಪೋರ್ಟ್‌ನಿಂದ ಕಾರಿನಲ್ಲಿ ಹೋಗುತ್ತಿರುವ ಚಿತ್ರಪರದೆಯ ಮೇಲೆ ಕಾಣಸಿಕೊಂಡಿತು.

''ಈಡಿಯಟ್'' ಎಂದಳು ಅಶ್ವಿನಿ. ನೋಡು ನೋಡುತ್ತಿದ್ದಂತೆ ಆ ಕಾರು ನೂರಾರು ಕಾರುಗಳ ನಡುವೆ ಬಣ್ಣಗಳನ್ನು ಬದಲಿಸಿಕೊಳ್ಳುತ್ತಿದೆ. ಅನಂತರ ಆ ಕಾರು ಮಾಸ್ಟರ್ ಕಂಟ್ರೋಲ್‌ನಿಂದ ಸಂಪರ್ಕ ಕಳೆದುಕೊಂಡಿತು. ಜಿಪಿಎಸ್ ಯಂತ್ರ ಕೆಟ್ಟು ಹೋಗಿರಬಹುದೆ... ಅದರಿಂದ ಸೆಲ್‌ಗಳನ್ನು ತೆಗೆದು ಹಾಕಿರಬಹುದೆ? ಇಲ್ಲ ಆಫ್ ಮಾಡಿಟ್ಟಿರಬಹುದೆ?

ಈ ಹೆಣ್ಣು ಯಾರು? ಯಾವಾಗಲೂ ನೋಡಲಿಲ್ಲವಲ್ಲ...! ಯಾವಳೋ ಕಾಲ್‌ಗರ್ಲ್ ಇರಬೇಕು... ಯಾರಾದರೂ ಒಂದು ಹೆಣ್ಣು ಸಿಕ್ಕಿದರೆ ಸಾಕು ಹಿಂದೆಯೆ ಹೊರಟುಬಿಡ್ತಾನೆ ಗಂಡು ನಾಯಿಯಂತೆ. ಅಶ್ವಿನಿ ಕೆಂಡ ಕಾರುವುದೊಂದೆ ಬಾಕಿ. ಐಯಾನ್ ಅವಳ ಕೈಗಳಿಗೆ ಸಿಕ್ಕಿದರೆ ಏನು ಮಾಡಿಬಿಡುತ್ತಾಳೊ...?

ಅಶ್ವಿನಿಗೆ ಈಗ ಐಯಾನ್ ಮೇಲೆ ವಿಪರೀತ ಕೋಪ ಬಂದಿತ್ತು. ಇದಕ್ಕೆ ಇನ್ನೂ ಒಂದು ಕಾರಣವಿತ್ತು. ಅಶ್ವಿನಿ ನೆನ್ನೆ ದಿನ ಶಮಿ ಮನೆಗೆ ಹೋಗಿ ಶಮಿ ಮಗುವನ್ನು ನೋಡಿ ಬಂದಿದ್ದಳು. ಮಗು ಥೇಟ್ ಐಯಾನ್ ರೀತಿಯೆ ಇರುವುದನ್ನು ಕ್ಷಣಗಳಲ್ಲಿಯೆ ನೋಡಿಬಿಟ್ಟಿದ್ದಳು. ಅಶ್ವಿನಿ ಈಗ ಐಯಾನ್‌ನನ್ನು ಸಂಪರ್ಕಿಸಲು ಎಲ್ಲಾ ರೀತಿಯಾಗಿ ಪ್ರಯತ್ನಿಸುತ್ತಿದ್ದಾಳೆ.



ದೇವಲೋಕದಲ್ಲಿ ದೊರಕುವ ಹೂವುಗಳು ಮತ್ತು ಸುಗಂಧ ನೀರಿನಲ್ಲಿ ಸ್ನಾನ ಮಾಡಿದಂತೆ ಕಾಣುವ ಐಯಾನ್ ಮತ್ತು ಲವ್‌ಲೀನಾ ಮಂದ ಬೆಳಕಿನಲ್ಲಿ ಲಕಲಕನೆ ಹೊಳೆಯುತ್ತಿದ್ದಾರೆ. ಸುಮಾರು ಒಂದು ಗಂಟೆ ಆನಂದದಲ್ಲಿ ತಲ್ಲೀನರಾಗಿದ್ದ ಅವರಿಬ್ಬರು ಅರೆ ಕೊರೆ ಉಡುಪು ಧರಿಸಿ ಹಾಸಿಗೆ ಮೇಲೆ ಕುಳಿತು ಕುಡಿಯುತ್ತ ತಿನ್ನುತ್ತ ಹರಟುತ್ತಿದ್ದಾರೆ. ಸಮಯ ವೇಗವಾಗಿ ಸಾಗುತ್ತಿದ್ದು ಅವರು ಮುಂದಿನ ಘಟ್ಟಕ್ಕೆ ತಯಾರಾಗುತ್ತಿದ್ದಾರೆ.

"ಲವ್‌ಲೀನಾ... ಐ ಮೀನ್ ಲವ್... ಇಷ್ಟಕ್ಕೂ ನೀನು ಏನ್ ಮಾಡ್ತಾ ಇರ್ತೀಯಾ?" ಐಯಾನ್ ಪ್ರಶ್ನಿಸಿದ.

"ಕೈಯಲ್ಲಿ ಹಣ ಇಲ್ದೆ ಇದ್ದರೆ ಯಾವುದಾದರೂ ನೈಟ್ ಕ್ಲಬ್‌ನಲ್ಲಿ ಡ್ಯಾನ್ಸ್ ಮಾಡ್ತೀನಿ. ಚಾನ್ಸ್ ಸಿಕ್ಕಿದರೆ ಯಾವುದಾದರೂ ಅಲ್ಬಮ್‌ನಲ್ಲಿ ನಟಿಸ್ತೀನಿ. ಕೈಯಲ್ಲಿ ಹಣ ಇದ್ದರೆ ಇಷ್ಟವಾದ ಕಡೆಯಲ್ಲಿ ಓಡಾಡ್ತೀನಿ. ಇಷ್ಟವಾದ್ದೆಲ್ಲ ತಿನ್ನುತ್ತೀನಿ, ಕುಡಿಯ್ತೀನಿ... ಇಂಗ್ಲೆಂಡಿನ ಇನ್ ಸಿಟಿಯ ಸೀಕೊ ಟವರ್ಸ್‌ನಲ್ಲಿ ಒಂದು ಸಣ್ಣ ಫ್ಲಾಟ್ ಇದೆ. ಏನೂ ಕೆಲಸ ಇಲ್ಲದೆ ಇದ್ದಾಗ ಅಲ್ಲಿರ್ತೀನಿ. ನಿನ್ನಂತವರು ಯಾರಾದರೂ ಸಿಕ್ಕಿ ನನ್ಗೆ ಇಷ್ಟವಾದರೆ ಅವರ ಜೊತೆಗೆ ಒಂದು ರಾತ್ರಿ ಕಳಿಯ್ತೀನಿ... ಯಾಕೆ ಬೋರಾಯಿತಾ...?" ಐಯಾನ್‌ನನ್ನು ನೋಡುತ್ತಿದ್ದ ಲವ್‌ಲೀನಾ ಪ್ರಶ್ನಿಸಿದಳು.

"ನಿನ್ನ ತಂದೆ ತಾಯಿ ಎಲ್ಲಿದ್ದಾರೆ...?"

"ನನ್ನ ತಂದೆ ಯಾರೊ ನನಗೆ ಗೊತ್ತಿಲ್ಲ. ತಾಯಿ ಮಾತ್ರ ಬೇರೆ ಒಬ್ಬರ ಜೊತೆ ಇದ್ದಾರೆ. ವರ್ಷಕ್ಕೊ ಆರು ತಿಂಗಳಿಗೊ... ಒಮ್ಮೆ ಸಂದಿಸ್ತೀನಿ. ಇನ್ನು ನನ್ನ ತಮ್ಮ ಒಬ್ಬ ಇದ್ದಾನೆ. ನಿನ್ಗೆ ಗೊತ್ತಲ್ಲ ?"

"ಹೌದು !" ಐಯಾನ್ ಹೇಳಿದ.

ಇಬ್ಬರಿಗೂ ಸಣ್ಣದಾಗಿ ನಶೆ ಏರುತ್ತಿದೆ. ಒಂದೊಂದೆ ಪೆಗ್ಗು ಏರಿಸಿ ಜೊತೆಗೆ ಒಂದಷ್ಟು ಮಾಂಸ ತಿಂದು ಹಾಸಿಗೆ ಕಡೆಗೆ ಓಲಾಡುತ್ತಾ ನಡೆದರು. ಅವರ ಮೇಲಿದ್ದ ಅರೆಕೊರೆ ಬಟ್ಟೆಗಳು ಅವರನ್ನು ಬಿಟ್ಟು ದೂರದಲ್ಲಿ ಬಿದ್ದುಕೊಂಡಿದ್ದವು. ಮತ್ತೊಮ್ಮೆ ಆನಂದದಲ್ಲಿ ಅವರಿಬ್ಬರು ತೇಲಿಹೋದರು.

ಅರ್ಧ ದಿನ, ಒಂದು ರಾತ್ರಿ ಒಟ್ಟಾಗಿ ಕಳೆದ ಐಯಾನ್ ಮತ್ತು ಲವ್‌ಲೀನಾ ವಿದಾಯ ಹೇಳುವ ಸಮಯ ಹತ್ತಿರಕ್ಕೆ ಬಂದಿತು. ಐಯಾನ್ ಮ್ಯಾಗ್ನೆಟ್ ಚೆಕ್ ಪುಸ್ತಕದ ಒಂದು ಹಾಳೆಯನ್ನು ಹರಿದುಕೊಟ್ಟು? ಇಷ್ಟವಾದಷ್ಟು ಹಣವನ್ನು ತುಂಬಿಕೊಳ್ಳುವಂತೆ ತಿಳಿಸಿದ. ಲವ್‌ಲೀನಾ ಅದನ್ನು ತೆಗೆದುಕೊಂಡು ತನ್ನ ಬ್ಯಾಗಿನಲ್ಲಿ ಇಟ್ಟುಕೊಂಡಳು. ಕೊನೆಯದಾಗ ಎಂಬಂತೆ ಮತ್ತೆ ಇಬ್ಬರೂ ಒಂದು ಚುಂಬನ ಕೊಟ್ಟುಕೊಂಡರು. ಇಬ್ಬರೂ ಕೈಕೈ ಹಿಡಿದುಕೊಂಡು ಬಾಗಿಲ ಹತ್ತಿರಕ್ಕೆ ಬಂದರು.

ಎದುರಿಗೆ ಅಶ್ವಿನಿ ನಿಂತಿದ್ದಾಳೆ. ಲವ್‌ಲೀನಾ ಐಯಾನ್ ಕೈಬಿಟ್ಟು ತನ್ನ ಕೈಯನ್ನು ಗಾಳಿಯಲ್ಲಿ ಆಡಿಸುತ್ತ ಒಂದು ಕಾರಿನಲ್ಲಿ ಕುಳಿತುಕೊಂಡು ಹೊರಟುಹೋದಳು. ಐಯಾನ್, ಅಶ್ವಿನಿಯನ್ನು ನೋಡಿದ್ದೆ ತಾನು ಅರ್ಧ ದಿನ, ಒಂದು ರಾತ್ರಿ ಅಂದರೆ 18 ಗಂಟೆಗಳು ಸಮಯ ಎಲ್ಲೋ ಕಳೆದು ಹೋಗಿದ್ದು ಈಗ ವಾಸ್ತವ ಲೋಕಕ್ಕೆ ಬಂದಂತೆ ಫೀಲ್ ಆದ. ಸಣ್ಣ ಮಗುವಿನಂತೆ ತನಗೆ ಏನೂ ಗೊತ್ತಿಲ್ಲದಂತೆ ನಿಧಾನವಾಗಿ ಅಶ್ವಿನಿಯ ಹತ್ತಿರಕ್ಕೆ ನಡೆದು ಬಂದ.

ಅಶ್ವಿನಿಯ ಕಣ್ಣುಗಳಲ್ಲಿ ನಕ್ಷತ್ರಗಳು ನೂರಾರು ಡಿಗ್ರಿಗಳ ತಾಪಮಾನದಲ್ಲಿ ಸಿಡಿಯುತ್ತಿವೆ ಐಯಾನ್, ಅಶ್ವಿನಿ ಕಣ್ಣುಗಳನ್ನು ಎದುರಿಸಲಾಗದೆ ಅವಳ ಕಡೆಗೆ ನೋಡಿ ನೋಡದಂತೆ ನಿಧಾನವಾಗಿ ಹೆಜ್ಜೆಗಳನ್ನಿಟ್ಟು ಇನ್ನಷ್ಟು ಹತ್ತಿರ ಬಂದು ನಿಂತುಕೊಂಡ. ಅನಂತರ ಐಯಾನ್ ನಿಧಾನವಾಗಿ ರೋಬೋಟ್‌ನಂತೆ ತನ್ನ ಕೈಯನ್ನು ಎತ್ತಿ ಅವಳ ಭುಜದ ಮೇಲೆ ಇಟ್ಟು

''ಸಾರಿ ಡಾರ್ಲಿಂಗ್'' ಎನ್ನುತ್ತಿದ್ದಂತೆ ಅವನ ಕೈಯನ್ನು ರಭಸವಾಗಿ ದೂರಕ್ಕೆ ತಳ್ಳಿ

''ಸ್ಟುಫಿಡ್. ಡಾರ್ಲಿಂಗ್'' ಎಂದು ತನ್ನ ಕಾರಿನ ಕಡೆಗೆ ಬಿರು ಬಿರನೆ ನಡೆದು ಹೋಗಿ ಕಾರಿನಲ್ಲಿ ಕುಳಿತು ಸ್ಟಾರ್ಟ್ ಮಾಡಿ ಹೊರಟುಹೋದಳು. ಐಯಾನ್‌ಗೆ ಏನು ಮಾಡಬೇಕೆಂದು ಅರ್ಥವಾಗಲಿಲ್ಲ. ಸುಮಾರು ಹೊತ್ತು ಆ ಹೋಟಲಿನ ಒಂದು ಮೂಲೆಯಲ್ಲಿ ಕುಳಿತೆ ಇದ್ದ. ಅನಂತರ ಬೇರೆ ದಾರಿ ಇಲ್ಲದೆ ತನ್ನ ಮನೆಯ ದಾರಿ ಹಿಡಿದ.

ಐಯಾನ್ ಮನೆಗೆ ಬಂದು ನೋಡುತ್ತಾನೆ. ಮನೆಯಲ್ಲಿ ಅಶ್ವಿನಿ ಮತ್ತು ಕಾಸ್ಮೋರಾ ಇಬ್ಬರೂ ಇಲ್ಲ. ಐಯಾನ್‌ಗೆ ದಿಕ್ಕು ತೋಚದೆ ಮಾಸ್ಟರ್ ಕಂಟ್ರೋಲ್ ರೋಬೋಟ್ ಮೂಲಕ ವಿಷಯ ಸಂಗ್ರಹಿಸಿದಾಗ ಅಶ್ವಿನಿ ಮತ್ತು ಕಾಸ್ಮೋರಾ ಇಬ್ಬರೂ ತಮ್ಮ ಬಟ್ಟೆ ಇನ್ನಿತರ ವಸ್ತುಗಳನ್ನು ತೆಗೆದುಕೊಂಡು ಕಾರಿನಲ್ಲಿ ಎಲ್ಲಿಗೋ ಹೊರಟು ಹೋದುದಾಗಿ ತಿಳಿಯಿತು. ಆದರೆ ಅವರು ಎಲ್ಲಿಗೆ ಹೋದರು... ಯಾತಕ್ಕಾಗಿ ಹೋದರು...? ಒಂದೂ ಗೊತ್ತಿಲ್ಲ ಎಂಬುದಾಗಿ ಮಾಸ್ಟರ್ ರೋಬೋಟ್ ತಿಳಿಸಿತು. ''ಅಶ್ವಿನಿ ಮೇಡಮ್ ಬಾರಿ ಕೋಪದಿಂದ ಕೆಂಡಮಂಡಲವಾಗಿ ಚೈನಾ ಡ್ರ್ಯಾಗನ್‌ನಂತೆ ಬೆಂಕಿಯನ್ನೇ ಉಗುಳುತ್ತಿದ್ದರು ಮತ್ತು ತಮ್ಮನ್ನು ಬೇಕಾಬಿಟ್ಟಿ ಬೈಯ್ಯುತ್ತಿದ್ದರು. ಇಷ್ಟಕ್ಕೂ ನೀವು ಏನು ಮಾಡಿದಿರಿ? ನೆನ್ನೆ ಮಧ್ಯಾಹ್ನ ಮನೆಗೆ ಬರಬೇಕಾಗಿದ್ದವರು ವಿಮಾನ ಇಳಿದು ಎಲ್ಲಿಗೆ ಹೋಗಿದ್ದಿರಿ?'' ರೋಬೋಟ್ ಐಯಾನ್‌ನನ್ನು ತರಾಟಗೆ ತೆಗೆದುಕೊಂಡಿತು.

ಐಯಾನ್ ರೋಬೋಟ್‌ಗೆ ಯಾವ ಉತ್ತರವನ್ನೂ ನೀಡದೆ ತಲೆ ಮೇಲೆ ಕೈಹೊತ್ತು ಕುಳಿತುಕೊಂಡುಬಿಟ್ಟ. ಐಯಾನ್ ಮಾಡಿದ ಪ್ರತಿಯೊಂದು ತಪ್ಪು ಈಗ ಅವನ ಎದುರಿಗೆ ನಿಂತುಕೊಂಡು ಪ್ರಶ್ನಿಸತೊಡಗಿದವು. ಶಮಿಯ ಸಂಬಂಧ, ಲವ್‌ಲೀನಾ ಸಂಬಂಧ ಹೀಗೆ ಅನೇಕ ತಪ್ಪುಗಳು ಅವನನ್ನು ಕಾಡತೊಡಗಿದವು. ಹೋಗಲಿ ಅಶ್ವಿನಿ ಕಾಶ್ಮೋರಳನ್ನು ಕರೆದುಕೊಂಡು ಎಲ್ಲಿಗೆ ಹೋಗಿರಬೇಕು?

ಶಮಿಯ ಮನೆ, ಅಶ್ವಿನಿ ತಂದೆ - ತಾಯಿ, ಇನ್ನಿತರ ಗೆಳೆಯರನ್ನು ಸಂಪರ್ಕಿಸಿ ನೋಡಿದ. ಅಲ್ಲೆಲ್ಲಿಗೂ ಅಶ್ವಿನಿ ಹೋಗಿಲ್ಲವೆಂದು ತಿಳಿಯಿತು.

ಎ ವಲಯದ ಮಾಸ್ಟರ್ ಕಂಟ್ರೋಲ್‌ಗೆ ಸಂಪರ್ಕ ಬೆಳೆಸಿ ಅಶ್ವಿನಿ ಮತ್ತು ಕಾಸ್ಮೋರ ಎಲ್ಲಿದ್ದಾರೆ ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಮಾಸ್ಟರ್ ಕಂಟ್ರೋಲ್‌ನಿಂದ ಕೆಲವೆ ಕ್ಷಣಗಳಲ್ಲಿ ಅಶ್ವಿನಿ ಮತ್ತು ಕಾಸ್ಮೋರಾ ಒಂದು ಕಾರಿನಲ್ಲಿ ಅರ್ಧ ಗಂಟೆಯ ಹಿಂದೆ ಎ ವಲಯದಿಂದ ಹೊರಕ್ಕೆ ಹೋದುದಾಗಿ ತಿಳಿಯಿತು. ಎ ವಲಯದಿಂದ ಹೊರಕ್ಕೆ ಹೋದರು ಎನ್ನುವ ವಿಷಯ ತಿಳಿದಿದ್ದೆ ಐಯಾನ್ ಕಂಗಾಲಾಗಿ ಹೋದ. ಎಲ್ಲಿಗೆ ಹೋಗಿರಬೇಕು...? ಇಷ್ಟಕ್ಕೂ ಅವರು ಎಲ್ಲಿಗೆ ಹೊರಟಿರಬೇಕು? ಅವನಿಗೆ ಏನೂ ತೋಚದೆ ತಲೆ ಗಿರಗಿರನೆ ತಿರುಗತೊಡಗಿತು.

ನಿಧಾನವಾಗಿ ಹತ್ತಿರಕ್ಕೆ ಬಂದ ರೋಬೋಟ್ ''ಏನಾದರೂ ತೆಗೆದುಕೊಳ್ತೀರಾ...?'' ಕೇಳಿತು. ''ಒಂದು ಪೆಗ್ ವಿಸ್ಕಿ ಕೊಡು'' - ಐಯಾನ್ ಹೇಳಿದ. ರೋಬೋಟ್ ಕೆಲವೇ ಕ್ಷಣಗಳಲ್ಲಿ ಒಂದು ಪೆಗ್ ವಿಸ್ಕಿ ತಂದು ಐಯಾನ್ ಮುಂದೆ ಇಟ್ಟಿತು. ಐಯಾನ್‌ನ ಕೈಗೆ ಗ್ಲಾಸ್ ತೆಗೆದುಕೊಂಡು ಒಂದು ಪೆಗ್ ಗುಟುಕರಿಸಿ ''ಒಂದೆರಡು ಹ್ಯಾಮ್ ತುಂಡುಗಳು'' ಎಂದ. ಅನಂತರ ಒಂದೊಂದೆ ಪೆಗ್ ಕುಡಿಯುತ್ತ ಶಮಿ ಮನಗೆ ಸಂಪರ್ಕ ಬಳೆಸಿದ. ತೇಜಸ್ ಎಲ್ಲಿಗೊ ಹೋಗಿದ್ದು ಶಮಿ ಐಯಾನ್‌ನನ್ನು ತನ್ನ ಮನೆಗೆ ಬರುವಂತೆ ಆಹ್ವಾನಿಸಿದಳು.

ಆಗಲೆ ತಲೆ ಚಿಟ್ಟು ಹಿಡಿದುಹೋಗಿದ್ದ ಐಯಾನ್ ಶಮಿಯ ಮನೆಗೆ ಕಾರಿನಲ್ಲಿ ಧಾವಿಸಿದ. ಬಾಗಿಲಲ್ಲೆ ಕಾಯುತ್ತಿದ್ದ ಶಮಿ, ಐಯಾನ್‌ನನ್ನು ಕೈಹಿಡಿದುಕೊಂಡು ಮನೆಯ ಒಳಕ್ಕೆ ಬರಮಾಡಿಕೊಂಡು ಸೋಫಾ ಮೇಲೆ ಕೂರಿಸಿದಳು. ಶಮಿ, ಐಯಾನ್‌ಗೆ ಸ್ವಾಂತನದ ಮಾತುಗಳನ್ನು ಹೇಳುತ್ತ ವಿಶೇಷ ವಿಸ್ಕಿಯ ಬಾಟಲನ್ನು ತಂದು ಅವನ ಮುಂದಿಟ್ಟು ಮಾಂಸದ ತುಂಡುಗಳನ್ನು ತಂದಿಟ್ಟಳು.

''ನನಗೆ ತುಂಬಾ ಬೇಜಾರಾಗಿದೆ ಶಮಿ'' ಐಯಾನ್ ಹೇಳಿದ.

''ಎಲ್ಲಾ ಸರಿಹೋಗುತ್ತೆ ಇಲ್ಲಿ ನೋಡು ನಿನ್ನ ಮಗು'' ಎನ್ನುತ್ತ ಮಗುವನ್ನು ಎತ್ತಿಕೊಂಡು ಬಂದು ಐಯಾನ್ ಕೈಗೆ ನೀಡಿದಳು. ಐಯಾನ್ ಮಗುವನ್ನು ಕೈಗೆ ತೆಗೆದುಕೊಂಡು ಮಗುವಿನ ಮುಖವನ್ನೇ ನೋಡುತ್ತ,

''ಲುಕ್ ಲೈಕ್ ಮೈ ಅರ್ಲಿಯರ್ ಫೋಟೋಗ್ರಾಫ್'' ಎಂದ. ಶಮಿ ನಗತ್ತು ಅವನ ಪಕ್ಕದಲ್ಲಿ ಬಂದು ಕುಳಿತುಕೊಂಡಳು.

''ಈ ಮಗೂನ ನೋಡಿದ ಮೇಲೆ ಅಶ್ವಿನಿಗೆ ತುಂಬಾ ಕೋಪ ಬಂದಿದೆ' ಶಮಿ ಹೇಳಿದಳು. ಐಯಾನ್ ಸಣ್ಣದಾಗಿ ನಗುತ್ತ ಅವಳ ಕಡೆಗೆ ನೋಡಿದ. ಐಯಾನ್ ಕೆಲವು

ನಿಮಿಷಗಳು ಮಗುವಿನ ಜೊತೆಗೆ ಆಟವಾಡಿದ ಮೇಲೆ ಶಮಿ ಮಗುವನ್ನು ತನ್ನ ಕೈಗೆ ತೆಗೆದುಕೊಂಡು ರೋಬೋಟ್ ಕೈಗೆ ಕೊಟ್ಟುಬಂದು ಐಯಾನ್ ಪಕ್ಕದಲ್ಲಿ ಕುಳಿತು ಕೊಂಡಳು. ಐಯಾನ್ ಶಮಿ ಕಣ್ಣುಗಳನ್ನು ನೋಡುತ್ತ

''ಐ ವಾಂಟ್ ಯು ಶಮಿ'' ಎಂದು ಮುಖವನ್ನು ಹತ್ತಿರಕ್ಕೆ ತಂದ.



ರಾತ್ರಿ ಹೊತ್ತು ಅಶ್ವಿನಿ ಮತ್ತು ಕಾಸ್ಮೋರಾ ಬೇರೆ ಬೇರೆ ಕೋಣೆಗಳಲ್ಲಿ ಮಲಗಿದ್ದಾರೆ. ದಿನವೆಲ್ಲ ಅಲ್ಲೋಲ ಕಲ್ಲೋಲವಾಗಿದ್ದ ಅಶ್ವಿನಿ ಕೊನೆಗೂ ನಿದ್ದೆಗೆ ಜಾರಿಕೊಂಡಿದ್ದಾಳೆ. ಐಯಾನ್ ಒಂದು ಸುಂದರವಾದ ಹೆಣ್ಣನ್ನು ಕಂಡರೆ ಸಾಕು ಪ್ರಪಂಚವನ್ನೇ ಮರೆತು ಹೋಗುತ್ತಾನೆ. ಮೊದಲು ಅವಳ ಜೊತೆಗೆ ಮಲಗಿದ ಮೇಲೆಯೆ ಅವನಿಗೆ ಸಮಾಧಾನವಾಗುವುದು. ಅದು ಯಾವುದೇ ರೀತಿಯಾದರೂ ಸರಿ. ಇದನ್ನೆಲ್ಲ ನೋಡಿ ರೋಸಿ ಹೋಗಿರುವ ಅಶ್ವಿನಿ ಅನೇಕ ಸಲ ಅವನ ಜೊತೆಗೆ ಜಗಳವಾಡಿದ್ದಾಳೆ.

''ನಿನಗೆ ಇಷ್ಟವಾದವರ ಜೊತೆಗೆ ನೀನು ಹೋಗು. ಇಂತಹವರ ಜೊತೆ ಹೋಗ್ಬೇಡ ಅಂತ ನಾನು ಯಾವಾಗ್ಲಾದರೂ ಹೇಳಿದ್ದೀನ?'' ಎನ್ನುತ್ತಾನೆ. ಅಶ್ವಿನಿ ಕೂಡ ತನಗೆ ಇಷ್ಟವಾದವರ ಜೊತೆಗೆ ಹಗಲು ರಾತ್ರಿಯೆನ್ನದೆ ಡೇಟಿಂಗ್ ಹೋಗಿದ್ದಾಳೆ. ಆದರೂ ಐಯಾನ್ ಬೇರೆ ಹೆಣ್ಣುಗಳ ಜೊತೆಗೆ ಚಕ್ಕಂದ ಆಡುವುದು ಅವಳಿಗೆ ಇಷ್ಟವಾಗುವುದಿಲ್ಲ. ಹಾಗಾಗಿ ಕೋಪಿಸಿಕೊಂಡು ಬಂದು ಇಲ್ಲಿ ಮಲಗಿದ್ದಾಳೆ. ಲವ್‌ಲೀನಾ ಗೆಳತಿಯಾದ ಮೇಲೆ ಐಯಾನ್ ಮ್ಯಾಡ್ ಆಗಿದ್ದಾನೆ.

ಅಶ್ವಿನಿ ಮಲಗಿರುವ ಮನೆಯ ಹತ್ತಿರಕ್ಕೆ ಆಗುಂತುಕನೊಬ್ಬ ಕತ್ತಲಲ್ಲಿ ನಿಧಾನವಾಗಿ ಬೆಕ್ಕಿನಂತೆ ನಡೆದು ಬಂದು ನಿಂತುಕೊಂಡ. ಅವನ ಕೈಯಲ್ಲಿ ಸಣ್ಣದಾದ ಒಂದು ಯಂತ್ರವಿದೆ. ಒಂದೆರಡು ಕ್ಷಣ ಸುತ್ತಲೂ ನೋಡಿ ತನ್ನ ಕೈಯಲ್ಲಿದ್ದ ಯಂತ್ರಕ್ಕೆ ಒಂದು ಗರಗಸದಂತಹ ಕತ್ತಿಯನ್ನು ತೆಗೆದು ಸಿಕ್ಕಿಸಿದ. ಹುಟ್ಟುಹಬ್ಬದಲ್ಲಿ ಕತ್ತಿಯಿಂದ ಕೇಕನ್ನು ಕತ್ತರಿಸುವಂತೆ ಗೋಡೆಯ ಮೇಲೆ ಯಾವುದೇ ಸದ್ದಿಲ್ಲದೆ ಗೆರೆಗಳನ್ನು ಎಳೆದ. ಗೋಡೆ ತುಂಡು ತುಂಡಾಗಿ ಹೋಯಿತು. ಕತ್ತರಿಸಿದ ತುಂಡುಗಳನ್ನು ಒಂದೊಂದಾಗಿ ತೆಗೆದು ಪಕ್ಕಕ್ಕಿಟ್ಟ. ಈಗ ಗೋಡೆಯಲ್ಲಿ ದೊಡ್ಡದಾದ ಒಂದು ತೂತು ಕಾಣಿಸಿಕೊಂಡಿತು. ಹೊರಗಿಂದ ಗಾಳಿ ತಣ್ಣಗೆ ಕೋಣೆಗೆ ಒಳಗೆ ನುಗ್ಗಿತು. ಗೋಡೆಯಲ್ಲಿ ಬಿದ್ದಿದ್ದ ತೂತಿಗೆ ಅಡ್ಡವಾಗಿ ನಿಂತುಕೊಂಡ. ಕೋಣೆಯ ಒಳಗೆ ಬೆಳಕು ಮಂದವಾಗಿದೆ. ಮಂಚದ ಮೇಲೆ ಅಶ್ವಿನಿಯ ದೇಹ ಅಡ್ಡವಾಗಿ ಬಿದ್ದಿದೆ. ಕೋಣೆಯ ಒಳಗೆ ಗಾಳಿ ತೂರದಂತೆ, ಅಶ್ವಿನಿಗೆ ಅನುಮಾನದ ಬಾರದಂತೆ ಕಿಂಡಿಗೆ ಯಾವ ವಸ್ತುವನ್ನು ಅಡ್ಡ ಇಡಬೇಕು, ಆಗಂತುಕ ಒಂದು ಕ್ಷಣ ಯೋಚಿಸಿದ, ಕಣ್ಣಿಗೆ ಒಂದು ಟೇಬಲ್ ಕಾಣಿಸಿತು. ಕ್ಷಣಗಳಲ್ಲಿ ಟೇಬಲಿನ ಮೇಲಿದ್ದ

ವಸ್ತುಗಳನ್ನು ನಿಧಾನವಾಗಿ ಪಕ್ಕಕ್ಕಿಟ್ಟು ಟೇಬಲನ್ನು ಮಗ್ಗಲು ತಿರುಗಿಸಿ ಗಾಳಿ ಬೀಸಿ ಬರುತ್ತಿದ್ದ ಗೋಡೆಗೆ ಅಡ್ಡ ಇಟ್ಟುಬಿಟ್ಟ

ಅನಂತರ ಆಗಂತುಕ ತನ್ನ ದೇಹವನ್ನು ಸಡಿಲವಾಗಿಸಿಕೊಂಡು ಬೆಕ್ಕಿನಂತೆ ಅಶ್ವಿನಿಯ ಹತ್ತಿರಕ್ಕೆ ಹೆಜ್ಜೆಗಳನ್ನಿಡುತ್ತ ಬಂದ. ಗೋಡೆ ಮೇಲಿದ್ದ ವಿದ್ಯುದ್ದೀಪ ಮೃದುವಾದ ಕಿರಣಗಳನ್ನು ಅಶ್ವಿನಿ ಮುಖದ ಮೇಲೆ ಚೆಲ್ಲುತ್ತಿದೆ. ಅದ್ಭುತವಾದ ಮುಖಸೌಂದರ್ಯ. ಆ ವಿದ್ಯುತ್ ದೀಪ ಚೆಲ್ಲುತ್ತಿದ್ದ ಬಣ್ಣದ ಕಿರಣಗಳು ಮತ್ತು ಅವಳ ಮುಖ ಪರಸ್ಪರ ಹೊಂದಾಣಿಕೆ ಮಾಡಿಕೊಂಡಂತೆ ಕಾಣುತ್ತಿವೆ. ಅಶ್ವಿನಿಯ ಹತ್ತಿರ ನಿಂತುಕೊಂಡಿರುವ ಆಗಂತುಕ ಅವಳನ್ನೇ ತದೇಕಚಿತ್ತದಂತೆ ನೋಡುತ್ತಿದ್ದಾನೆ. ಒಂದು ದೀರ್ಘ ನಿಟ್ಟುಸಿರಿನ ಜೊತೆಗೆ ಅವನ ಶ್ವಾಸ ನಿಶ್ವಾಸ ಬಿಸಿಗೊಳ್ಳುತ್ತಿದೆ. ಅವನ ಮಿದುಳಿನಲ್ಲಿ ಇನ್ನೂ ತೊಯ್ದಾಟ ನಡೆಯುತ್ತಿದೆ.

ಅವಳನ್ನು ಮೂರ್ಛೆಗೊಳಿಸಬೇಕೊ ಇಲ್ಲ ಹಾಗೆ ಅನುಭವಿಸಬೇಕೊ ಎನ್ನುವ ತೊಯ್ದಾಟ. ಅದೇ ಬಂಗಲೆಯಲ್ಲಿ ಇನ್ನೊಂದು ಕೋಣೆಯಲ್ಲಿ ಕಾಸ್ಮೋರಾ ಒಬ್ಬಳೆ ಮಲಗಿದ್ದಾಳೆ. ಕಾವಲುಗಾರ ಆ ಬಂಗಲೆಗಿಂತ ಎಷ್ಟೊ ದೂರದಲ್ಲಿ ಕಾವಲು ಕಾಯುತ್ತಿದ್ದಾನೆ. ಆಗಂತುಕ ಅವನನ್ನು ಕಣ್ಣು ತಪ್ಪಿಸಿ ಎತ್ತರವಾದ ಗೋಡೆಗೆ ಕಿಂಡಿ ಕೊರೆದು ಇಲ್ಲಿಗೆ ಆಗಮಿಸಿದ್ದಾನೆ. ಅವಳು ಎಚ್ಚೆತ್ತುಕೊಂಡು ಕೂಗಾಡಿದರೂ. ಕಾವಲುಗಾರನಿಗೆ ಅಷ್ಟು ಸುಲಭವಾಗಿ ಕೇಳಿಸುವುದಿಲ್ಲ, ಈಗ ಏನು ಮಾಡಬೇಕು?

ಅವನ ನಿರ್ಧಾರ ಈಗ ಕಣ್ಣುಗಳಲ್ಲಿ ಕಾಣಿಸಿಕೊಂಡಿತು. ಅವಳ ಕಡೆಗೆ ಬಗ್ಗಿ ಮೈಯನ್ನು ನಿಧಾನವಾಗಿ ಒಮ್ಮೆ ತಡವಿದ. ಅವಳ ದೇಹ ಬೆಳಕೇ ಒಂದು ರೂಪವಾಗಿ ಮಲಗಿದಂತಿದೆ. ಈಗ ಆಗಂತುಕನ ಕೈಗಳಿಗೆ ಇನ್ನಷ್ಟು ಆಕ್ರೋಶ ಬಂತು. ಅಶ್ವಿನಿಗೆ ತನ್ನ ಪಕ್ಕದಲ್ಲಿ ಯಾರೋ ಮಲಗಿರುವಂತೆ ತೋರಿತು. ಅವಳು ಕನಸಿನಲ್ಲಿ ಐಯಾನ್‌ನನ್ನು ತಬ್ಬಿಕೊಂಡಂತೆ ಆಗಂತುಕನನ್ನು ಒಮ್ಮೆ ತಬ್ಬಿಕೊಂಡಳು. ಆಗಂತುಕ ಅವಳ ಮೃದುವಾದ ದೇಹದ ಒಳಕ್ಕೆ ತೂರಿಕೊಳ್ಳತೊಡಗಿದ. ಅಶ್ವಿನಿ ಕನಸಿನಿಂದ ಒಂದು ಕ್ಷಣ ವಾಸ್ತವಕ್ಕೆ ಬಂದಳು. ದಿಢೀರನೆ ಕಣ್ಣು ತೆರೆದು ನೋಡುತ್ತಾಳೆ. ಕೋಣೆ ಕತ್ತಲಿಂದ ತುಂಬಿ ಹೋಗಿದೆ. ಆಗಂತುಕ ದ್ವೀಪ ಆರಿಸಿ ಅವಳ ಹತ್ತಿರಕ್ಕೆ ಬಂದಿದ್ದ

ನಾನು ಎಲ್ಲಿ ಇದ್ದೀನಿ? ನನ್ನ ಪಕ್ಕದಲ್ಲಿ ಮಲಗಿರುವುದು ಯಾರು? ಒಂದು ಕ್ಷಣ ಹೌಹಾರಿದ ಅಶ್ವಿನಿ

"ಏಯ್... ಯಾರು? ಯಾರು?"

ಪಕ್ಕದಲ್ಲಿದ್ದವನನ್ನು ದೂರಕ್ಕೆ ತಳ್ಳಿ ತಲೆಯ ಪಕ್ಕದಲ್ಲಿದ್ದ ವಿದ್ಯುತ್ ಸ್ವಿಚ್ಚನ್ನು ಹುಡುಕಾಡತೊಡಗಿದರು. ಅವಳ ಕೈಗೆ ಸ್ವಿಚ್ಚು ಸಿಕ್ಕಿ ವಿದ್ಯುತ್ ದೀಪ ದಿಗ್ಗನೆ ಹೊತ್ತುಕೊಂಡು ಕೋಣೆಯಲ್ಲಿ ಬೆಳಕು ಮೂಡಿತು. ಎದುರಿಗೆ ನಾರಾಯಣ ನಿಂತಿದ್ದಾನೆ?

''ಏಯ್ ನೀನಾ ಲೋಫರ್ ನಿನಗೆ ಇಷ್ಟು ಧೈರ್ಯ ಬಂದುಬಿಡ್ತ ? ಐಯಾನ್, ಐಯಾನ್'' ಅಶ್ವಿನಿ ಕೂಗಿದಳು.

''ಐಯಾನ್ ಇಲ್ಲಿ ಎಲ್ಲಿದ್ದಾನೆ?'' ನಾರಾಯಣ ವ್ಯಂಗ್ಯವಾಗಿ ನಕ್ಕ. ಐಯಾನ್ ಜೊತೆಗೆ ಜಗಳವಾಡಿಕೊಂಡು ಬಂದಿರುವ ಅಶ್ವಿನಿ ಫಾರ್ಮ್‌ಹೌಸ್‌ನಲ್ಲಿ ಮಲಗಿದ್ದಾಳೆ. ಫಾರ್ಮ್‌ಹೌಸ್‌ನಿಂದ ಓಡಿ ಹೋದವನೆ ಮತ್ತೆ ಹೇಗೆ ಬಂದ? ಇಷ್ಟೊಂದು ನಿಖರವಾಗಿ ಹೇಗೆ ನಮ್ಮ ಚಲನವಲನಗಳನ್ನು ತಿಳಿದುಕೊಳ್ಳುತ್ತಾನೆ ಇವನು? ಅಶ್ವಿನಿಗೆ ಆಶ್ಚರ್ಯದ ಜೊತೆಗೆ ಭಯವು ಆಗುತ್ತಿದೆ.

''ಪೊಲೀಸ್... ಪೊಲೀಸ್?'' ಅಶ್ವಿನಿ ಮತ್ತೆ ಕೂಗಿದಳು.

''ಇಲ್ಲಿಗೆ ಯಾವ ಪೊಲೀಸು ಬರುವುದಿಲ್ಲ'' ನಾರಾಯಣ ನಗುತ್ತ ಹತ್ತಿರಕ್ಕೆ ಬರತೊಡಗಿದ. ಅಶ್ವಿನಿಗೆ ಏನು ಮಾಡಬೇಕೊ ಗೊತ್ತಾಗಲಿಲ್ಲ.

''ನೋಡು ನನ್ನನ್ನು ಏನೂ ಮಾಡ್ಬೇಡ. ನಿನಗೆ ಏನುಬೇಕೊ ಕೇಳು? ಎಷ್ಟು ಹಣ ಬೇಕೊ ಹೇಳು...? ನಾನು ಕೊಡ್ತೀನಿ''

''ನನಗೆ... ಏನೂ ಬೇಕಾಗಿಲ್ಲ ನೀನು ಬೇಕು ಅಷ್ಟೇ. ಅದೂ ಒಂದೇ ದಿನ. ಇವೊತ್ತು ನನ್ನ ಪ್ರಾಣ ಹೋದರೂ ನಿನ್ನನ್ನು ಬಿಡೊದಿಲ್ಲ'' ಎನ್ನುತ್ತ ನಾರಾಯಣ ಹತ್ತಿರಕ್ಕೆ ಒಂದೊಂದೆ ಹೆಜ್ಜೆ ಇಡುತ್ತ ಬರುತ್ತಿದ್ದಾನೆ. ಅಶ್ವಿನಿಯ ದೇಹ ಒಮ್ಮೆಲೆ ನಡುಗತೊಡಗಿತು. ತಲೆದಿಂಬಿನ ಕೆಳಗಿರುವ ಪಿಸ್ತೂಲಿನ ಜ್ಞಾಪಕ ಬಂದಿತು. ಜ್ಞಾಪಕ ಬಂದಿದ್ದೆ ತಡ. ಕ್ಷಣದಲ್ಲಿ ಪಿಸ್ತೂಲನ್ನು ಕೈಗೆ ತೆಗೆದುಕೊಂಡು ಅವನ ಕಡೆಗಿಟ್ಟು,

''ನೋಡು ಮರ್ಯಾದೆಯಾಗಿ ಹೊರುಟೋಗು. ಇಲ್ಲ ಅಂದರೆ ಶೂಟ್ ಮಾಡಿಬಿಡ್ತೀನಿ'' ಅಶ್ವಿನಿ ಜೋರಾಗಿ ಕೂಗಿದಳು. ನಾರಾಯಣನ ಮುಖದಲ್ಲಿ ಯಾವುದೇ ಗಾಬರಿ ಕಾಣಿಸಲಿಲ್ಲ. ಬದಲಾಗಿ ಜೋರಾಗಿ ನಗತೊಡಗಿದ.

ಅಷ್ಟರಲ್ಲಿ ಅವನ ದೇಹದಲ್ಲಿ ಒಂದು... ಎರಡು... ಮೂರು... ಹೀಗೆ ಸಾವಿರಾರು ಪಾಲಿಫೈಬರ್ ಸೂಜಿಗಳು ತೂರಿಕೊಂಡವು. ಕೇವಲ ನಾಲ್ಕೈದು ಕ್ಷಣಗಳಲ್ಲಿ ತೂರಾಡುತ್ತ ದೊಪ್ಪನೆ ನೆಲದ ಮೇಲೆ ಉರುಳಿಕೊಂಡ. ಅಶ್ವಿನಿ, ಇನ್ನೊಂದು ಕೋಣೆಗೆ ಹೋಗಿ ಕಾಸ್ಮೋರಳನ್ನು ಎಬ್ಬಿಸಿ ಕೋಣೆಯ ಹೊರಕ್ಕೆ ಓಡಿ ಬಂದುಬಿಟ್ಟಳು. ಕೋಣೆಯ ಹೊರಕ್ಕೆ ಕೂಗಾಡುತ್ತ ಓಡಿ ಬಂದಿದ್ದೆ ದೂರದಲ್ಲಿದ್ದ ಕಾವಲುಗಾರ, ಅಲ್ಲೆ ಕ್ವಾರ್ಟರ್ಸ್‌ನಲ್ಲಿದ್ದ ಕೆಲಸಗಾರರು ಎದ್ದು ಬಂದರು. ಅಶ್ವಿನಿ ವಿಷಯ ತಿಳಿಸಿದ್ದೆ ? ಅವರೆಲ್ಲ ನಾರಾಯಣನನ್ನು ಹಿಡಿದು ಕೈಕಾಲುಗಳನ್ನು ಕಟ್ಟಾಕಿದರು.

ಅಶ್ವಿನಿ ಹಾರಿಸಿದ ಪಿಸ್ತೂಲಿನಿಂದ ನಾರಾಯಣ ದೇಹವನ್ನು ಸೇರಿದ ಪಾಲಿ ಫೈಬರ್ ಸೂಜಿಗಳು ವಿಷದ ಸೂಜಿಗಳಲ್ಲ, ಅವು ಕೇವಲ ಮತ್ತು ಬರಿಸುವ ಅಂಶವನ್ನು

ತುಂಬಿಕೊಂಡಿದ್ದ ಮಿನಿಮೈಕ್ರೊ ಸೂಜಿಗಳು, ಅವನ ದೇಹದ ಮೇಲೆ ಯಾವುದೇ ಗಾಯವಿಲ್ಲದೆ ಒಳತೂರಿ ರಕ್ತದಲ್ಲಿ ಸೇರಿದ್ದವು. ಸೂಜಿಗಳಲ್ಲಿರುವ ಮದ್ದಿನ ಅಂಶ ಕೆಲವ ಕ್ಷಣಗಳಲ್ಲಿ ಮಿದುಳು ಸೇರಿ ಅವನನ್ನು ಮೂರ್ಛೆ ಹೋಗುವಂತೆ ಮಾಡಿತ್ತು. ಬೆಳಗಿನವರೆಗೂ ಅವನು ಹಾಗೆ ಬಿದ್ದುಕೊಂಡಿದ್ದ. ಪೊಲೀಸರು ಬಂದು ಅವನನ್ನು ತಮ್ಮ ವಶಕ್ಕೆ ತೆಗೆದುಕೊಂಡುಬಿಟ್ಟರು. ಅಶ್ವಿನಿ ಮತ್ತು ಕಾಸ್ಮೋರಾ ನಾರಾಯಣನ ಬಗ್ಗೆ ಎಲ್ಲರಿಗೂ ತಿಳಿಸಿ ಬೆಳಿಗ್ಗೆಯೇ ತಮ್ಮ ಫಾರ್ಮ್‌ಹೌಸ್ ಬಿಟ್ಟು ತಮ್ಮ ಎ ವಲಯದ ಕಡೆಗೆ ಪ್ರಯಾಣ ಬೆಳೆಸಿದರು. ನಾರಾಯಣನ ಬಗ್ಗೆ ಮೊದಲೆ ಕೇಸು ದಾಖಲಾಗಿದ್ದರಿಂದ ಅವನನ್ನು ಪೊಲೀಸರು ಇನ್‌ವೆಸ್ಟಿಗೇಷನ್ ಮಾಡಲು ತಮ್ಮ ವಶಕ್ಕೆ ತೆಗೆದುಕೊಂಡುಬಿಟ್ಟರು. ಅಲ್ಲಿಗೆ ನಾರಾಯಣನ ಇಷ್ಟು ದಿನಗಳ ಚಾಕಚಕ್ಯತೆಗೆ ತೆರೆ ಬಿದ್ದಿತು.



ಹಿಮಾಲಯ ಶಿಖರಗಳು ಪ್ರಪಂಚದಲ್ಲಿಯೇ ಎತ್ತರವಾದವು. ಈ ಪ್ರದೇಶದ ಲಡಕ್ ಜಿಲ್ಲೆಯಲ್ಲಿ ಹೆನ್ಲೆ ಎಂಬ ಪುಟ್ಟ ಹಳ್ಳಿ ಇದೆ. ಈ ಹಳ್ಳಿಗೆ ಕೇವಲ ಕೆಲವು ನೂರು ಮೀಟರುಗಳ ದೂರದಲ್ಲಿ ಕ್ರಿ.ಶ. 2002ನೇ ವರ್ಷದಲ್ಲಿ ಅಂದಿನ ಭಾರತ ಸರಕಾರ ಒಂದು ವಿಶಾಲವಾದ ಖಗೋಳ ವೀಕ್ಷಣಾಲಯವನ್ನು ಸ್ಥಾಪಿಸಿತ್ತು. ಭೂಮಿಯ ಮೇಲಿನ ಎತ್ತರವಾದ ಈ ಜನನಿಬಿಡವಿಲ್ಲದ ಸ್ವಚ್ಛ ಪರಿಸರದಲ್ಲಿ ವಿಜ್ಞಾನಿಗಳು ಅಂದಿನಿಂದ ಇಂದಿನವರೆಗೂ ಆಕಾಶದ ಕಡೆಗೆ ನೋಡುತ್ತ ಕುಳಿತಿದ್ದಾರೆ. ಭೂಮಿಯ ಮೇಲೆ ವೈಜ್ಞಾನಿಕ ಚಟುವಟಿಕೆಗಳು ಪ್ರಾರಂಭವಾದ ಕಾಲದಿಂದಲೂ ಮನುಷ್ಯ ಆಕಾಶದ ಕಡೆಗೆ ನೋಡುತ್ತ ಅನೇಕ ವಿಸ್ಮಯಗಳನ್ನು ಗುರುತಿಸುತ್ತಾ ಹೋಗುತ್ತಿದ್ದಾನೆ. ಆದರೆ ತಿಳಿದುಕೊಳ್ಳುವುದು ಇನ್ನೂ ಎಷ್ಟೋ ಇದೆ.

ಅನ್ಯ ಗ್ರಹಗಳಲ್ಲಿ ಯಾರಾದರೂ ಇದ್ದಾರೆಯೆ? ಅವರು ಯಾವಾಗಲಾದರು ಭೂಮಿಯ ಕಡೆಗೆ ಬರುತ್ತಾರೆಯೆ? ಇಲ್ಲ! ನಮ್ಮ ಕಡೆಗೆ ಯಾವುದಾದರೂ ಚಿಹ್ನೆ ಅಥವಾ ಸಂಕೇತಗಳನ್ನು ಕಳುಹಿಸುತ್ತಿದ್ದಾರೆಯೆ? ಎನ್ನುವ ಪ್ರಶ್ನೆಗಳನ್ನು ಮಾನವರು ನೂರಾರು ವರ್ಷಗಳಿಂದ ಕುತೂಹಲದಿಂದ ಕೇಳುತ್ತಲೆ ಬರುತ್ತಿದ್ದಾರೆ.

ಒಂದು ದಿನ ಬೆಳಗಿನ ಜಾವ ಹೆನ್ಲೆ ಹಳ್ಳಿಯ ಜನ ಹಿತವಾದ ನಿದ್ದೆಯಲ್ಲಿದ್ದಾರೆ. ತಣ್ಣನೆಯ ಗಾಳಿ ಇದ್ದಕ್ಕಿದ್ದಾಗೆ ರಭಸವಾಗಿ ಬೀಸತೊಡಗಿತು. ಗಾಳಿ ಮಳೆಯನ್ನು ಹೊತ್ತು ತರುತ್ತಿದೆಯೇ ಇಲ್ಲ ಬರಿ ಗಾಳಿಯೇ ಅವರಿಗೆ ಗೊತ್ತಾಗಲಿಲ್ಲ. ಎತ್ತರ ಪ್ರದೇಶಗಳಲ್ಲಿ ಗಾಳಿ ಯಾವಾಗಲೂ ರಭಸವಾಗಿಯೇ ಬೀಸುತ್ತಿರುತ್ತದೆ. ಸ್ವಲ್ಪ ಸಮಯದ ನಂತರ ಎಲ್ಲರೂ ಮತ್ತೆ ಹಿತವಾದ ಕನಸುಗಳಿಗೆ ಜಾರಿಕೊಂಡರು. ಎಂದಿನಂತೆ ಸೂರ್ಯನ ತಂಪು ಕಿರಣಗಳು ತಪ್ಪಲುಗಳನ್ನು ಪಸರಿಸಿಕೊಳ್ಳತೊಡಗಿತು. ಹಳ್ಳಿಯ ಜನರು ಆ ದಿನ ಬೆಳಿಗ್ಗೆ ತಮ್ಮ ದೈನಂದಿನ ಕಾರ್ಯಗಳಲ್ಲಿ ತೊಡಗಿಕೊಂಡರು.

ಹೆನ್ಲೆ ಹಳ್ಳಿಯ ತಪ್ಪಲುಗಳ ಕಡೆಗೆ ಬಹಿರ್ದೆಸೆಗೆ ಹೋಗಿದ್ದ ಹಳ್ಳಿಗರಿಬ್ಬರು ಇದ್ದಕ್ಕಿದ್ದಾಗೆ ಕೂಗಿಕೊಂಡರು. ಕೂಗಾಟ ಬಂದ ಕಡೆಗೆ ಇನ್ನಷ್ಟು ಜನರು ಓಡಿ ಬಂದರು. ವಿಷಯ ಅಲ್ಲಿಂದ ಖಗೋಳ ವೀಕ್ಷಣಾಲಯದವರೆಗೂ ಮುಟ್ಟಿತು. ನಾಲ್ಕು ಜನರು ಕುಳಿತು ಹಾರಾಡುವಷ್ಟು ದೊಡ್ಡದಾದ ತಟ್ಟೆಯಾಕಾರದ ಯಂತ್ರದ ಸುತ್ತಲೂ ಹಳ್ಳಿ ಜನ ನಿಂತು ನೋಡುತ್ತಿದ್ದಾರೆ.

ಬಣ್ಣ ಬಣ್ಣದ ಗ್ಲಾಸುಗಳು... ಅಂಟೇನಾಗಳು... ಚಿತ್ರವಿಚಿತ್ರವಾದ ಯಂತ್ರಗಳ ಒಂದು ಮುದ್ದೆಯಂತಿರುವ ಆ ಯಂತ್ರದಲ್ಲಿ ಖಂಡಿತ ಅನ್ಯ ಗ್ರಹದಿಂದ ಯಾರೊ ಅನ್ಯಗ್ರಹ ಜೀವಿಗಳು ಬಂದಿರಬೇಕು. ಇಲ್ಲ ! ಬರಿ ಯಂತ್ರವನ್ನು ಯಾವುದೋ ವೈಜ್ಞಾನಿಕ ಚಟುವಟಿಕೆಗಳಿಗಾಗಿ ಕಳುಹಿಸಿರಬೇಕು. ಇಲ್ಲ ಅಪಘಾತವಾಗಿ ಇಲ್ಲಿಗೆ ಬಂದಿರಬೇಕು. ಹೀಗೆ ಅನೇಕ ಊಹೆಗಳಿಗೆ ಆ ಯಂತ್ರ ಗ್ರಾಸವಾಯಿತು. ವಿಷಯ ಯುಎಸ್ಐ ದೇಶಕ್ಕೆ ಅಲ್ಲದೆ ಪ್ರಪಂಚಕ್ಕೆಲ್ಲ ಕೆಲವೇ ನಿಮಿಷಗಳಲ್ಲಿ ರವಾನೆಯಾಯಿತು. ಸರಕಾರ ತುರ್ತಾಗಿ ಕೆಲವು ವಿಜ್ಞಾನಿಗಳನ್ನು ಅಲ್ಲಿಗೆ ಹೋಗುವಂತೆ ಆದೇಶ ನೀಡಿತು. ವಿಜ್ಞಾನಿಗಳು ಅಲ್ಲಿಗೆ ತಲುಪುವವರೆಗೆ ಯಂತ್ರದ ಹತ್ತಿರಕ್ಕೆ ಯಾರನ್ನು ಬಿಡಬಾರದೆಂದು ಸ್ಥಳೀಯ ಪೊಲೀಸರಿಗೆ ತಿಳಿಸಲಾಯಿತು.

ಯುಎಸ್ಐನ ಬೆನ್ ಸಿಟಿ ಕೆಲ್ ಸಿಟಿ ಡೆಲ್ ಸಿಟಿ ಮತ್ತು ಇನ್ನಿತರ ದೇಶಗಳಿಂದಲೂ ವಿಜ್ಞಾನಿಗಳು ಕುತೂಹಲಗೊಂಡು ಹೆನ್ಲೆ ಹಳ್ಳಿಯ ಕಡೆಗೆ ಧಾವಿಸಿ ಬಂದರು. ಕೆಲವೇ ಗಂಟೆಗಳಲ್ಲಿ ವಿಜ್ಞಾನಿಗಳು ಹೆನ್ಲೆ ಹಳ್ಳಿ ತಲುಪಿ ಯಂತ್ರದ ಬಗ್ಗೆ ಅ  ಯನ ನಡೆಸ ತೊಡಗಿದರು.

ಆ ಯಂತ್ರ ಆಗಲೇ ಪ್ರಪಂಚದಾದ್ಯಂತ ಸ್ಕೈ ಸಿಗ್ನಲ್, ಇಂಟರ್‌ನೆಟ್, ಮೊಬೈಲ್, ಟಿವಿ ಚಾನಲ್‌ಗಳಲ್ಲಿ ನೇರವಾಗಿ ಪ್ರಚಾರವಾಗುತ್ತಿದೆ. ಆದರೆ ಒಂದೇ ಒಂದು ಆಕೃತಿಯು ಆ ಯಂತ್ರದ ಒಳಗಾಗಲಿ, ಹೊರಗಾಗಲಿ ಕಾಣಿಸಲಿಲ್ಲ. ವಿಶೇಷವಾದ ಕ್ಯಾಮರಾಗಳು, ಸ್ಕ್ಯಾನಿಂಗ್ ಯಂತ್ರಗಳು, ಅಲ್ಟ್ರಾವೈಲೆಟ್ ಸ್ಕ್ಯಾನಿಂಗ್ ಯಂತ್ರಗಳನ್ನು ಚಲಿಸಿ ಯಂತ್ರವನ್ನು ಅದರ ಸುತ್ತಲಿನ ಪ್ರದೇಶವನ್ನು ಸೆರೆ ಹಿಡಿದಿದ್ದಾರೆ. ಯಂತ್ರದ ಒಳಗಾಗಲಿ ಹೊರಗಾಗಲಿ ಯಾವುದೇ ಚಲನವಲಗಳು ಕಾಣಲಿಲ್ಲ. ಎಲ್ಲೂ ಏನನ್ನೂ ನೋಡಲಾಗಲಿಲ್ಲ. ಈ ಯಂತ್ರದಲ್ಲಿ ಯಾರಾದರೂ ಬಂದಿದ್ದಾರೆಯೇ? ಅವರು ನಮ್ಮ ಕಣ್ಣಿಗೆ ಕಾಣಿಸುವುದಿಲ್ಲವೆ? ಅವರನ್ನು ಗುರುತಿಸುವಷ್ಟು ವಿಜ್ಞಾನ ನಮ್ಮಲ್ಲಿ ಬೆಳೆದಿಲ್ಲವೆ? ಹೀಗೆ ಅನೇಕ ಪ್ರಶ್ನೆಗಳು ವಿಜ್ಞಾನಿಗಳಿಗೆ ಎದುರಾದವು.

ವಿಜ್ಞಾನಿಗಳು ಯಂತ್ರದ ಸುತ್ತಲೂ ಮತ್ತು ಒಳಗೆ ಹೋಗಿ ಎಲ್ಲವನ್ನೂ ಪರೀಕ್ಷಿಸಿದರು. ಆದರೆ ಯಂತ್ರದ ಒಳಗಿರುವ ಯಾವುದೇ ವಸ್ತುವನ್ನು ಡಿಸ್‌ಕನೆಕ್ಟ್ ಮಾಡಲಿಲ್ಲ. ಅಲ್ಲಿ ಯಂತ್ರವನ್ನು ಬಿಟ್ಟು ಯಾವುದೇ ಬಿಡಿ ವಸ್ತುಗಳು ಇರಲಿಲ್ಲ. ಎಲ್ಲವೂ ಒಂದು ಕಾಂಪ್ಯಾಕ್ಟ್

ಯಂತ್ರದಂತಿದೆ. ಇಡೀ ಯಂತ್ರ ಒಂದು ಉಕ್ಕಿನ ತಟ್ಟೆಯಂತಿದೆ. ಇಷ್ಟಕ್ಕೂ ಆ ಯಂತ್ರವನ್ನು ಯಾವ ಮೆಟಲ್‌ನಿಂದ ರೂಪಿಸಲಾಗಿದೆ ಎಂದು ತಿಳಿದುಕೊಳ್ಳಲು ಆಗಲಿಲ್ಲ.

ವಿಜ್ಞಾನಿಗಳೆಲ್ಲ ತುರ್ತಾಗಿ ಸಭೆ ನಡೆಸಿ ಅದನ್ನು ಏನೂ ಮಾಡಬಾರದು ದೂರದಿಂದಲೇ ಕ್ಯಾಮರಾಗಳ ಮೂಲಕ ಅಲ್ಟ್ರಾವೈಲೆಟ್ ಕಿರಣಗಳ ಮೂಲಕ ಎಡಬಿಡದೆ ವೀಕ್ಷಿಸಬೇಕೆಂದು ನಿರ್ಧರಿಸಿ ದೂರದಲ್ಲಿ ಕಾಯುತ್ತ ಕುಳಿತರು.



ಕಾಸ್ಮೋರಾಗೆ ಈಗ 15 ವರ್ಷ ತುಂಬಿ 16 ವರ್ಷ ನಡೆಯುತ್ತಿದೆ. ತನ್ನ ಕೋಣೆಯಲ್ಲಿ ಒಬ್ಬಳೆ ಹೂವಿನಂತಹ ಹಾಸಿಗೆ ಮೇಲೆ ನಗ್ನವಾಗಿ ಮಲಗಿಕೊಂಡಿದ್ದಾಳೆ. ಅವಳಿಗಿದ್ದ ಹ್ಯಾಬಿಟ್ ಎಂದರೆ ತನ್ನ ಕೋಣೆಯಲ್ಲಿ ನಗ್ನವಾಗಿ ಇರುವುದು. ಅವಳು ಕೋಣೆಯಿಂದ ಹೊರಗೆ ಬಂದಾಗ ಮಾತ್ರ ಸಣ್ಣದೊಂದು ಪ್ಯಾಂಟಿ, ಎರಡು ದಾರಗಳ ಮಧ್ಯೆ ತನ್ನ ಎದೆಗಳನ್ನು ಹಿಡಿದಿರುವ ಒಂದು ಪುಟ್ಟ ಬ್ರಾ ಹಾಕಿಕೊಳ್ಳುತ್ತಾಳೆ. ಇಲ್ಲವೆಂದರೆ ತೆಳುವಾದ ಒಂದು ಟೀ ಶರ್ಟನ್ನು ತೊಡುತ್ತಾಳೆ. ಕೋಣೆ ಸೇರಿದಳೆಂದರೆ ಬಾಗಿಲು ಮುಚ್ಚಿ ನಗ್ನವಾಗಿ ಬಿಡುತ್ತಾಳೆ.

ಒಂದು ಕೋಣೆ ಎಷ್ಟು ಸ್ವಚ್ಛವಾಗಿ ಸೌಕರ್ಯಗಳಿಂದ ಕೂಡಿರಬೇಕೊ ಅಷ್ಟು ಸೌಕರ್ಯ ಮತ್ತು ಸೌಂದರ್ಯವಾಗಿದೆ. ಆ ಕೋಣೆಯಲ್ಲಿ ಕಾಸ್ಮೋರಾ ಒಬ್ಬಳೆ ಮಲಗಿದ್ದಾಳೆ, ಹೂವಿನಷ್ಟೆ ನುಣುಪಾದ ದೇಹ, ಬಂಗಾರದಂಥ ಬಣ್ಣ , ಪುಟಿದ ಎದೆಗಳು, ನಿತಂಬಗಳು, ಕನಸುಗಳ ಕಟ್ಟೆ ಒಡೆದು ಹೋಗುತ್ತಿರುವ ವಯಸ್ಸು , ಉಕ್ಕಿ ಹರಿಯುತ್ತಿರುವ ಯೌವ್ವನ. ಅವಳ ಕೋಣೆಯಲ್ಲಿ ಇದ್ದಕ್ಕಿದ್ದ ಹಾಗೆ ಅತಿ ಪ್ರಕಾಶಮಾನವಾದ ಬೆಳಕು ಕಾಣಿಸಿಕೊಂಡಿತು. ಬೆಳಕು ಆಕಾಶದಿಂದ ನೇರವಾಗಿ ಧಾವಿಸಿಬರುತ್ತಿದೆ. ಕಾಸ್ಮೋರಾ ಕಣ್ಣುಗಳನ್ನು ಅಗಲಿಸಿ ನೋಡುತ್ತಾಳೆ. ಆ ಬೆಳಕಿನಲ್ಲಿ ಮೂವರು ಅನ್ಯಕಾಯ ಜನರು ಕೈಕಾಲುಗಳನ್ನು ಹಕ್ಕಿಗಳಂತೆ ಆಡಿಸುತ್ತಾ ಅವಳ ಕಡೆಗೆ ಬರುತ್ತಿದ್ದಾರೆ. ಅವಳು ಮಲಗಿರುವ ಕೋಣೆಗೆ ಗೋಡೆಗಳಿಲ್ಲ, ಆಕಾಶದ ಕೆಳಗಿರುವಂತೆ ಕಾಣಿಸುತ್ತಿದೆ. ಆ ಕೋಣೆಗಿದ್ದ ಗೋಡೆಗಳು ಎಲ್ಲಿ ಹೋದವು? ಇನ್ನೇನು ಆ ಬೆಳಕಿನ ಮೂಲಕ ಆ ಮೂವರು ಬಂದೇಬಿಟ್ಟರು. ಬಂದು ಅವಳ ಸುತ್ತಲೂ ನಿಂತುಕೊಂಡರು.

ಹಸಿರು ಬಣ್ಣದ ತ್ರಿಕೋನಾಕೃತಿ ಮುಖಗಳು, ಕೆಂಪು ಕಣ್ಣುಗಳು, ಅಗಲವಾದ ಕಿವಿಗಳು, ಮುಖಕ್ಕೆ ತಕ್ಕ ಮೂಗು, ದೇಹಕ್ಕೆ ಹಸಿರು ಉಡುಪು ಧರಿಸಿದ್ದಾರೊ ಇಲ್ಲ ಅವರ ದೇಹಗಳೆ ಹಸಿರೊ ಗೊತ್ತಾಗಲಿಲ್ಲ, ಹೀಮ್ಯಾನ್‌ನಂತೆ ಕಾಣಿಸದಿದ್ದರೂ ಸಣ್ಣದಾದ ನಡು, ಅಗಲವಾದ ಎದೆ ಭುಜಗಳಿವೆ. ಕೈಕಾಲುಗಳು ದೃಢವಾಗಿವೆ. ತಲೆ, ದೇಹ ಎಲ್ಲೂ ಒಂದೇ ಒಂದು ಕೂದಲೂ ಇಲ್ಲ, ತಲೆಗೆ ಏನಾದರೂ ಹಾಕಿಕೊಂಡಿದ್ದಾರೊ ಗೊತ್ತಾಗಲಿಲ್ಲ. ಆದರೆ

ಟೋಟಲಾಗಿ ಸ್ಮಾರ್ಟ್ ಆಗಿ ಕಾಣುತ್ತಿದ್ದಾರೆ. ಮೂವರು ಅವರದೆ ಭಾಷೆಯಲ್ಲಿ ಮಾತನಾಡಿಕೊಳ್ಳುತ್ತಿದ್ದಾರೆ.

ಮೂವರು ಏನೊ ಮಾತನಾಡಿಕೊಂಡ ನಂತರ, ಇಬ್ಬರು ಕಾಶ್ಮೋರಾಳ ಹತ್ತಿರಕ್ಕೆ ಬಂದು ಅ‍ ಳ ಎರಡು ಕೈಗಳನ್ನು ಹಿಡಿದುಕೊಂಡು ಕೈಗಳನ್ನು ಮೇಲಕ್ಕೆ ಮಾಡಿದರು ಅಷ್ಟೆ ಮೂವರು ಆಕಾಶದ ಕಡೆಗೆ ಹಾರಿಹೋಗುತ್ತಿದ್ದಾರೆ. ಇನ್ನೊಬ್ಬ ಅವರ ಹಿಂದೆ ಬರುತ್ತಿದ್ದಾನೆ. ಕಾಸ್ಮೋರಾಳ ಹೃದಯ ಹಕ್ಕಿಯಂತೆ ಉಲಿಯುತ್ತಿದ್ದರೆ, ಕಣ್ಣುಗಳ ಮುಂದೆ ಅನಂತ ನಕ್ಷತ್ರಗಳ ದೀಪಾವಳಿ ಕಾಣಿಸುತ್ತಿದೆ. ಕಾಸ್ಮೋರಾಳಿಗೆ ಏನು ಮಾಡಬೇಕೊ ಒಂದೂ ಗೊತ್ತಾಗಲಿಲ್ಲ. ತನ್ನ ಭಾಷೆಯಲ್ಲಿ ಮಾತನಾಡಿದರೆ ಅವರಿಗೆ ಗೊತ್ತಾಗುತ್ತದೊ ಇಲ್ಲವೊ ಎಂದುಕೊಂಡಳು. ಅವಳ ದೇಹಕ್ಕೆ ತೂಕವೆ ಇಲ್ಲದಂತಾಗಿದೆ. ನನ್ನನ್ನು ಎಲ್ಲಿಗೆ ಕರೆದುಕೊಂಡೋಗುತ್ತಿದ್ದಾರೆ? ಏನು ಮಾಡುತ್ತಾರೆ? ಎಲ್ಲಿಗಾದರು ಹೋಗಲಿ ಏನಾದರೂ ಮಾಡಲಿ, ಒಟ್ಟಿನಲ್ಲಿ ಯಾವುದೊ ಅನ್ಯ ಗ್ರಹಕ್ಕೆ ಕರೆದೊಯ್ಯುತ್ತಾರೆ ಎಂದುಕೊಂಡಳು.

ಕಾಸ್ಮೋರಾಗೆ ಕೆಲವೊಂದು ಸಲ ಅನ್ಯಕಾಯ ಜನರ ದೇಹಗಳು ಬಣ್ಣ ಬಣ್ಣವಾಗಿ ಕೆಲವೊಂದು ಸಲ ಕಣ್ಣಿಗೆ ಕಾಣಿಸದೆ ಹೋಗುತ್ತಿವೆ. ಹಾಗೆ ಎಷ್ಟು ಸಮಯ ಹಾರಿದರೊ ಏನೋ...? ಕಾಸ್ಮೋರಾಗೆ ಸಮಯದ ಪರಿವೆಯೇ ತಿಳಿಯಲಿಲ್ಲ, ದೇಹಕ್ಕೆ ದಣಿವಾಗಲಿ ಹಸಿವಾಗಲಿ ಯಾವುದೂ ಗೊತ್ತಾಗಲಿಲ್ಲ. ಹಕ್ಕಿಯಂತೆ ತೇಲಾಡುತ್ತಿರುವುದು ಮಾತ್ರ ಗೊತ್ತಾಗುತ್ತಿದೆ. ಅಂತೂ ಕೊನೆಗೆ ಯಾವುದೊ ಒಂದು ಗ್ರಹದ ಮೇಲೆ ನಿಂತುಕೊಂಡರು. ಎಲ್ಲಿ ನೋಡಿದರು ಬಣ್ಣ ಬಣ್ಣದ ಕಿರಣಗಳಲ್ಲಿ ಕಟ್ಟಿ ನಿಲ್ಲಿಸಿರುವಂತಹ ಕಟ್ಟಡಗಳು. ಇವುಗಳನ್ನು ಬೆಳಕಿನಿಂದ ಕಟ್ಟಿದ್ದಾರೊ... ನೀರಿನ ಸ್ಪಟಿಕಗಳಿಂದ ಕಟ್ಟಿದ್ದಾರೊ ಅವರಿಗೆ ತಿಳಿಯಲಿಲ್ಲ. ಕಾಸ್ಮೋರಾಳನ್ನು ಒಂದು ಬೆಳಕಿನ ದ್ವಾರಕ್ಕೆ ಕರೆದುಕೊಂಡೋಗಿ ನಿಲ್ಲಿಸಿದರು.

ಅಬ್ಬ... ಇದು ಯಾವ ಲೋಕ? ಎಲ್ಲವೂ ಬಣ್ಣ ಬಣ್ಣದ ಬೆಳಕಿನ ಕಿರಣಗಳಿಂದ ಮಾಡಲಾಗಿದೆ. ಇವು ಯಾವ ಪ್ರಾಣಿಗಳು? ಇವುಗಳ ಹೆಸರೇನು? ಕಾಸ್ಮೋರಾಳಿಗೆ ಆಗುತ್ತಿರುವ ಆಶ್ಚರ್ಯವನ್ನು ಯಾರ ಜೊತೆಗಾದರೂ ಹಂಚಿಕೊಳ್ಳಬೇಕು ಎನಿಸಿತು.

ಆದರೆ ಅಲ್ಲಿ ಮನುಷ್ಯರಂತೆ ಯಾರೂ ಕಾಣಿಸಲಿಲ್ಲ. ಜತೆಗಿದ್ದ ಒಬ್ಬ ತನ್ನ ಹಸಿರು ಕೈಯಲ್ಲಿದ್ದ ಎರಡು ಬೆರಳುಗಳನ್ನು ಎತ್ತಿ ತೋರಿಸಿದ. ಬಹುಶಃ ಎರಡು ನಿಮಿಷ ಅಥವಾ ಎರಡು ಗಂಟೆ ಸಮಯವಿದೆ ಎಂದು ಹೇಳುತ್ತಿರಬೇಕು ಎಂದುಕೊಂಡಳು. ಅವರು, ಅವಳ ಕಣ್ಣುಗಳಿಗೆ ದೂರವಾದರು. ಅವಳಿಗೆ ಆ ತೋಟದಲ್ಲಿ ಏನು ಮಾಡಬೇಕೊ ಅರ್ಥವಾಗಲಿಲ್ಲ, ಎಲ್ಲಾ ಕಡೆ ಓಡಾಡಿದಳು... ಎಲ್ಲವನ್ನೂ ಮುಟ್ಟಿ ನೋಡಿದಳು... ಚಿಟ್ಟೆಯಂತೆ ಹಾರಾಡಿದಳು.

ಮತ್ತೆ ಮೂವರು ಅವಳ ಎದುರಿಗೆ ಕಾಣಿಸಿಕೊಂಡರು. ಅವಳನ್ನು ಕೈಹಿಡಿದು ಕರೆದುಕೊಂಡು ಹೋಗಿ ಒಂದು ಮಂಚದ ಮೇಲೆ ಮಲಗಿಸಿದರು. ಈಗ ಅವಳಿಗೆ

ಭಯವಾಯಿತು. ನೋಡು ನೋಡುತ್ತಿದ್ದಂತೆ ಅವಳ ಕೈಕಾಲುಗಳನ್ನು ಇಬ್ಬರು ಎಳೆದು ಹಿಡಿದುಕೊಂಡರು. ಒಬ್ಬ ಬೆಳಕಿನಂತಿದ್ದ ಕತ್ತಿಯಲ್ಲಿ ಅವಳ ಕಿಬ್ಬೊಟ್ಟೆಯಿಂದ ಕೆಳಗೆ ಸೀಳಿ ಏನೊ ತೆಗೆದುಕೊಂಡ. ಅನಂತರ ಅದೇ ಕತ್ತಿಯಿಂದ ಸೀಳಿದ ಸ್ಥಳವನ್ನು ಸ್ಪರ್ಶಿಸಿದ. ಅದು ಯಥಾಪ್ರಕಾರ ಕೂಡಿಕೊಂಡಿತು. ಅವಳ ದೇಹದಿಂದ ಹೊರತೆಗೆದ ಭಾಗವನ್ನು ಮೂವರು ಕಿತ್ತಾಡತೊಡಗಿದರು. ಅನಂತರ ಮೂವರು ಸ್ವಲ್ಪ ಸ್ವಲ್ಪ ತಮ್ಮ ಬಾಯಿಗೆ ಹಾಕಿಕೊಂಡರು. ಮತ್ತೆ ಅವಳನ್ನು ಮೂವರು ಹಿಡಿದುಕೊಳ್ಳಲು ಬಂದರು.

ಕಾಸ್ಮೋರಾ ಚಿಟ್ಟನೆ ಚೀರಿಕೊಂಡಳು. ಅವಳ ತಾಯಿ ಅಶ್ವಿನಿ "ಕಾಸ್ಮೋ... ಕಾಸ್ಮೋ..." ಎಂದು ಎದ್ದು ಬಂದು ಬಾಗಿಲು ಬಡಿದಳು. ಕಾಸ್ಮೋರಾಗೆ ಎಚ್ಚರವಾಗಿ ತಾನು ಕಂಡಿದ್ದು ಅನ್ಯಕಾಯ ಜನರ ಕನಸೆಂದು ತಿಳಿಯಿತು. ಆದರೂ ಕಿಬ್ಬೊಟ್ಟೆಯನ್ನು ಒಂದು ಸಲ ಮುಟ್ಟಿ ನೋಡಿಕೊಳ್ಳುತ್ತ "ಏನೂ ಇಲ್ಲ ಮಾಮ್" ಎಂದಳು.



ಹೆನ್ಲೆ ಹಳ್ಳಿಯ ಪ್ರದೇಶದಲ್ಲಿ ಅನ್ಯಗ್ರಹದಿಂದ ಬಂದು ಇಳಿದಿದ್ದ ಯಂತ್ರವನ್ನು ಪ್ರಪಂಚದಾದ್ಯಂತ ಜನ ಕುತೂಹಲದಿಂದ ವೀಕ್ಷಿಸುತ್ತಿದ್ದಾರೆ. ಈ ಯಂತ್ರ ದಾರಿ ತಪ್ಪಿ ಇಲ್ಲಿಗೆ ಬಂದಿತೊ. ಇಲ್ಲ ಅಪಘಾತವಾಗಿ ಇಲ್ಲಿ ಬಿದ್ದಿದೆಯೋ ಒಂದು ಗೊತ್ತಾಗಲಿಲ್ಲ. ಯಂತ್ರವನ್ನು ಪೂರ್ಣವಾಗಿ ಚಿತ್ರಿಸಿಕೊಳ್ಳಲಾಯಿತು. ಯಂತ್ರದ ಪ್ರತಿಯೊಂದು ಮಿಲಿಮೀಟರನ್ನು ವಿವರವಾಗಿ ಸೆರೆ ಹಿಡಿದುಕೊಳ್ಳಲಾಯಿತು. ಹಲವಾರು ಕ್ಯಾಮರಾಗಳಲ್ಲೂ ಚಿತ್ರಿಸಿಕೊಳ್ಳಲಾಯಿತು. ಇಷ್ಟಕ್ಕೂ ಇದರಲ್ಲಿ ಯಾರಾದರೂ ಬಂದರೆ ಇಲ್ಲವೆ? ಎನ್ನುವ ಪ್ರಶ್ನೆ ಎಲ್ಲರನ್ನು ಕಾಡತೊಡಗಿತು. ಎರಡು ದಿನಗಳಾದವು... ಮೂರು ದಿನಗಳಾದವು. ಅದರ ಸುತ್ತಲೂ ಯಾವ ಸುಳಿವು ಕಾಣಲಿಲ್ಲ.

ಅದೊಂದು ರಾತ್ರಿ ಬೆಟ್ಟ ಕಣಿವೆಗಳೆಲ್ಲ ಬೆಳದಿಂಗಳಿಂದ ಕಂಗೊಳಿಸುತ್ತಿದೆ. ಆಕಾಶ ಶುಭ್ರವಾಗಿದ್ದು ಗಿಡ ಮರಗಳ ಮೇಲೆಲ್ಲ ಬೆಳದಿಂಗಳ ಕಿರಣಗಳು ಚೆಲ್ಲಾಡುತ್ತಿವೆ. ಇದ್ದಕ್ಕಿದ್ದಾಗೆ ಆಕಾಶದ ಕಡೆಯಿಂದ ಮನುಷ್ಯಾಕೃತಿಯ ಬೆಳಕಿನ ಕಿರಣಗಳ ಗೊಂಚಲುಗಳು ಬಂದು ಯಂತ್ರದ ಒಳಗೆ ಸೇರಿಕೊಂಡವು. ಅವು ಸೇರಿಕೊಂಡಿದ್ದೇ ತಡ ಯಂತ್ರ ಆಕಾಶದ ಕಡೆಗೆ ಬೆಳಕಿನಂತೆ ಹಾರಿಹೋಗುತ್ತದೆ. ಸುತ್ತಲಿದ್ದ ವಿಜ್ಞಾನಿಗಳು ಅದೋ ಹಾರಿಹೋಯಿತು ಎಂದು ಹೌಹಾರಿ ಕಿರಿಚಾಡಿದರು. ಇಷ್ಟಕ್ಕೂ ಅನ್ಯಗ್ರಹ ಮಾನವರು ಯಾವ ಕ್ಯಾಮರಾ ಕಣ್ಣುಗಳಿಗೂ ಬೀಳಲಿಲ್ಲ. ಕೆಲವು ವಿಶೇಷ ಕ್ಯಾಮರಾಗಳು ಬೆಳಕಿನ ಕಿರಣಗಳ ಗೊಂಚಲು ಅಥವಾ ಮನುಷ್ಯಾಕೃತಿಯ ನೀಲಿ ಮೋಡಗಳು ಇಳಿದು ಬಂದು ಯಂತ್ರದಲ್ಲಿ ಸೇರಿಕೊಂಡಿದ್ದನ್ನು ಸೆರೆಹಿಡಿದಿದ್ದವು. ಅಲ್ಲಿಗೆ ವಿಜ್ಞಾನಿಗಳ ಸಂಶೋಧನೆಗೆ ತಣ್ಣೀರು ಎರಚಿದಂತಾಯಿತು. ಪ್ರಪಂಚದಾದ್ಯಂತ ನೋಡುತ್ತಿದ್ದವರ ಕಣ್ಣುಗಳಿಗೆ ಏನೂ ಕಾಣಿಸಲಿಲ್ಲ. ಆ ಯಂತ್ರ ದಿಢೀರನೆ ಅಲ್ಲಿಂದ ಮಾಯವಾಗಿತ್ತು. ಅನ್ಯಗ್ರಹಗಳಲ್ಲಿ ನಮಗಿಂತ ಮುಂದುವರಿದ ಜನರಿದ್ದಾರೆ

ಎನ್ನುವುದು ಮಾತ್ರ ವಿಜ್ಞಾನಿಗಳಿಗೆ ಮತ್ತು ಭೂಮಿಯ ಮೇಲಿದ್ದ ಜನರಿಗೆ ತಿಳಿದಂತಾಯಿತು. ಪ್ರಪಂಚವೆ ಒಂದು ಕ್ಷಣ ಬೆಕ್ಕಸಬೆರಗಾಯಿತು.



ಬೆನ್ ನಗರದ ಎ ವಲಯದ ಜೂಬಿಲಿ ರಸ್ತೆಯಲ್ಲಿ ಒಂದು ನೂರು ಹಾರುವ ದ್ವಿಚಕ್ರ ವಾಹನಗಳು ಒಂದರ ಹಿಂದೆ ಒಂದು ನಿಂತುಕೊಂಡಿವೆ. ಆ ವಾಹನಗಳನ್ನು ಪ್ರಥಮ ಬಾರಿಗೆ ನಗರದ ಪ್ರಖ್ಯಾತ ದ್ವಿಚಕ್ರ ವಾಹನಗಳ ಡಿಸ್ಟ್ರಿಬ್ಯೂಟರ್ಸ್ ಕಂಪನಿ ಒಂದು ಬಿಡುಗಡೆ ಮಾಡಿದೆ. ವಾಹನಗಳನ್ನು ಪಡೆದಿರುವ ಮಾಲೀಕರೆಲ್ಲ ಅದೇ ರಸ್ತೆಯಲ್ಲಿರುವ ಒಂದು ಕೋಣೆಯಲ್ಲಿ ಸೇರಿದ್ದಾರೆ. ಎಲ್ಲರಿಗೂ ವಾಹನಗಳ ರಿಮೋಟ್ ಕಂಟ್ರೋಲ್ ನೀಡಿದ ಮೇಲೆ ಅವುಗಳನ್ನು ಹೇಗೆ ನಡೆಸಬೇಕೆಂದು ಒಬ್ಬ ಆಟೋಮೊಬೈಲ್ ಇಂಜಿನಿಯರ್ ವಿವರಿಸುತ್ತಿದ್ದಾರೆ.

''ಮೊದಲ ಬಾರಿಗೆ ಭೂಮಿಯ ಮೇಲೆ ಹಾರುವ ದ್ವಿಚಕ್ರ ವಾಹನಗಳನ್ನು ತಮ್ಮದಾಗಿಸಿಕೊಂಡಿರುವ ಅದೃಷ್ಟವಂತರಿಗೆಲ್ಲ ನಮ್ಮ ಹಾರ್ದಿಕ ಶುಭಾಶಯಗಳು. ಈ ಹಾರುವ ದ್ವಿಚಕ್ರ ವಾಹನಗಳನ್ನು ನಡೆಸುವುದು ತುಂಬಾ ಸುಲಭ. ಕಂಪ್ಯೂಟರ್ ಅಥವಾ ರೋಬೋಟ್‌ಗಳನ್ನು ನಡೆಸುವಷ್ಟೆ ಸುಲಭ. ನೀವು ಮುಖ್ಯವಾಗಿ ಗಮನಿಸಬೇಕಾಗಿರುವ ವಿಷಯವೆಂದರೆ ವಾಹನದಲ್ಲಿ ಅಳವಡಿಸಿರುವ ಸೋಲಾರ್ ಬ್ಯಾಟರಿಗಳಲ್ಲಿ ಶಕ್ತಿ ಇದೆಯೆ ಎಂದು ಗಮನಿಸಬೇಕು ಅಷ್ಟೆ ಉಳಿದೆಲ್ಲವನ್ನು ನಿಮ್ಮ ಕೈಗಳಲ್ಲಿರುವ ರಿಮೋಟ್ ಕಂಟ್ರೋಲ್‌ನಲ್ಲಿರುವ ಬಟನ್‌ಗಳನ್ನು ಒತ್ತಿದರೆ ಸಾಕು. ನೀವು ತಪ್ಪು ಬಟನ್ ಒತ್ತಿದರು ಏನೂ ಆಗುವುದಿಲ್ಲ. ನೀವು ಸವೆಸಬೇಕಾಗಿರುವ ದಾರಿ ಎಷ್ಟು ದೂರವಿದೆ ಎಂದು ಮೊದಲಿಗೆ ತಿಳಿದುಕೊಳ್ಳಬೇಕು. ಅನಂತರ ಈ ಬಟನ್ ಒತ್ತಿದರೆ ವಾಹನದಲ್ಲಿರುವ ಸೋಲಾರ್ ಬ್ಯಾಟರಿಗಳು ಎಷ್ಟು ಕಿಲೋಮೀಟರುಗಳು ನಡೆಯುತ್ತವೆ ಎಂದು ಗೊತ್ತಾಗಿಬಿಡುತ್ತದೆ. ಆಕಾಶದಲ್ಲಿ ಬಿಸಿಲಿದ್ದರೆ ಅದರ ಬಗ್ಗೆ ನೀವು ಯೋಚಿಸಬೇಕಿಲ್ಲ. ಆಟೋಮ್ಯಾಟಿಕ್ಕಾಗಿ ಸೋಲಾರ್ ಶಕ್ತಿ ರಿಚಾರ್ಜ್ ಆಗುತ್ತದೆ.

ಅನಂತರ ಸುಮ್ಮನೆ ಈ ಬಟನ್ ಒತ್ತಿದರೆ ವಾಹನದ ಇಂಜಿನ್ ಪ್ರಾರಂಭವಾಗುತ್ತದೆ. ಸರಿಯಾಗಿ ಐದು ಸೆಕೆಂಡುಗಳ ನಂತರ ಈ ಬಟನ್ ಒತ್ತಿದರೆ ರೆಕ್ಕೆಗಳು ಬಡಿದುಕೊಳ್ಳಲು ಪ್ರಾರಂಭವಾಗುತ್ತವೆ. ಅನಂತರ ಮತ್ತೆ ಐದು ಸೆಕೆಂಡುಗಳ ನಂತರ ಈ ಬಟನ್ ಒತ್ತಿದರೆ ನಿಮ್ಮ ವಾಹನ ನಿಧಾನವಾಗಿ ಮೇಲೆ ಏಳುತ್ತದೆ. ವಾಹನ ಹತ್ತು ಕಿಲೋಮೀಟರುಗಳ ವೇಗದಿಂದ ಇನ್ನೂರ ಎಪ್ಪತ್ತು ಕಿಲೋ ಮೀಟರುಗಳ ವೇಗದಲ್ಲಿ ಓಡುತ್ತದೆ. ನೀವು ಮೊದಲಿಗೆ ವಾಹನವನ್ನು ಓಡಿಸುತ್ತಿರುವುದರಿಂದ ನಿಧಾನವಾಗಿ ಚಲಿಸಿ. ಅನಂತರ ನಿಮಗೆ ಬೇಕಾದ ವೇಗವನ್ನು ಹೆಚ್ಚಿಸಿಕೊಳ್ಳಿ. ಇಳಿಯುವಾಗಲೂ ಅದೇ ಬಟನ್‌ಗಳನ್ನು ಒಂದೊಂದಾಗಿ ಹಿಂದಕ್ಕೆ ಒತ್ತಿ ಸ್ಟಿರಿಂಗ್‌ನ್ನು ರಿಮೋಟ್‌ನಲ್ಲೂ ಮತ್ತು ಕೈಗಳಲ್ಲೂ ನಿಯಂತ್ರಿಸಬಹುದು. ಈ

ವಾಹನ ಭೂಮಿಯಿಂದ ಒಂದು ಕಿಲೋಮೀಟರು ಮೇಲೆ ಹಾರುತ್ತದೆ. ಆಗಾಗ ಹಕ್ಕಿಗಳು ಬಡಿಯಬಹುದು. ಏನೂ ಆಗುವುದಿಲ್ಲ. ಆದರೆ ಎದುರಿಗೆ ಬಂದರೆ ಪಕ್ಕಕ್ಕೆ ತಿರುಗಿಕೊಳ್ಳಿ. ಇನ್ನೊಂದು ವಿಷಯ ಒಂದು ವೇಳೆ ಬಿಸಿಲು ಇಲ್ಲದೆ, ಸೋಲಾರ್ ಶಕ್ತಿ ಮುಗಿದಿದ್ದರೆ ನಿಮಗೆ ಮುಂಚಿತವಾಗಿ ಸಿಗ್ನಲ್ ದೊರಕುತ್ತದೆ. ಶೀಘ್ರವೇ ಇಳಿದುಕೊಂಡು ಬಿಡಿ. ಇಲ್ಲವೆಂದರೆ ಪ್ಯಾರಾಚೂಟಗಳನ್ನು ಬಳಸಿ ಕೆಳಕ್ಕೆ ಇಳಿದುಕೊಳ್ಳಿ. ಗುಡ್ ಲಕ್ ಫಾರ್ ಎವರಿಬಡಿ. ಥ್ಯಾಂಕ್ಯು ವನ್ ಅಂಡ್ ಆಲ್''

ಎಲ್ಲರೂ ಹೊರಗೆ ಬಂದು ತಮ್ಮ ತಮ್ಮ ವಾಹನಗಳ ಮೇಲೆ ಕುಳಿತುಕೊಂಡರು. ಅವರಲ್ಲಿ ಐವತ್ತಕ್ಕಿಂತ ಹೆಚ್ಚು ಯುವತಿಯರು ಮಹಿಳೆಯರು ಇದ್ದರು. ತಮ್ಮ ಕೈಗಳಲ್ಲಿದ್ದ ರಿಮೋಟ್ ಕಂಟ್ರೋಲ್‌ಗಳನ್ನು ಮತ್ತೊಮ್ಮೆ ಸರಿಯಾಗಿ ನೋಡಿಕೊಂಡು ವಾಹನಗಳನ್ನು ಚಲಿಸಿ ಒಬ್ಬೊಬ್ಬರಾಗಿ ಹಾರಿ ಹೋಗುತ್ತಿದ್ದಾರೆ. ಸುತ್ತಲೂ ನಿಂತಿರುವ ಜನ ಆಕಾಶದ ಕಡೆಗೆ ನೋಡುತ್ತಿದ್ದಾರೆ.

ಬೆನ್ ನಗರದ ಆರ್ ವಿ ಎಸ್ ಇಂಜನಿಯರಿಂಗ್ ಕಾಲೇಜಿನ ವಿದ್ಯಾರ್ಥಿಗಳು ಎರಡು ವರ್ಷಗಳ ಹಿಂದೆ ಹಾರುವ ಇದೇ ವಾಹನವನ್ನು ಸಂಶೋಧಿಸಿದ್ದು ಈ ವಾಹನವನ್ನು ಮತ್ತಷ್ಟು ಉತ್ತಮಪಡಿಸಿ ಮಾರ್ಕೆಟ್ಟಿಗೆ ಬಿಡಲು ಮುಂದಾದ ಕಂಪನಿ ವಿದ್ಯಾರ್ಥಿಗಳು ಕೇಳಿದಷ್ಟು ಹಣ ನೀಡಿ ಹಕ್ಕುಗಳನ್ನು ಪಡೆದುಕೊಂಡಿತ್ತು, ಕಂಪನಿ ತಿಳಿಸಿದ ಹಾಗೆ ಸರಿಯಾಗಿ ಎರಡು ವರ್ಷಗಳಿಗೆ ಆ ವಾಹನಗಳನ್ನು ಮಾರ್ಕೆಟ್ಟಿಗೆ ಬಿಟ್ಟಿತು. ವಾಹನಗಳನ್ನು ಮಾರ್ಕೆಟ್ಟಿಗೆ ಬಿಡುವ ಮುನ್ನ ಕಂಪನಿ ''ಬರಲಿವೆ ಬೆನ್ ಸಿಟಿಗೆ ಆಕಾಶದಲ್ಲಿ ಹಾರುವ ದ್ವಿಚಕ್ರ ವಾಹನಗಳು'' ಎನ್ನುವ ಜಾಹಿರಾತು ನೀಡಿ ಹೇರಳ ಹಣವನ್ನು ಕೊಳ್ಳೆಹೊಡೆದು ಬಿಟ್ಟಿತ್ತು.

ಬೆನ್ ಸಿಟಿಯಲ್ಲಿ ಈಗ ಮೂರು ರೀತಿಯ ವಾಹನಗಳು ಓಡುತ್ತಿವೆ. ವಿದ್ಯುತ್ತಿನಿಂದ ಚಲಿಸುವ ಅಂತರ ಭೂಮಿಯ ಮೆಟ್ರೋ ರೈಲುಗಳು, ರಸ್ತೆಗಳಲ್ಲಿ ಚಲಿಸುವ ಬಸ್ಸು ಕಾರುಗಳು, ಆಕಾಶದಲ್ಲಿ ಹಾರುವ ದ್ವಿಚಕ್ರ ವಾಹನಗಳು. ರೈಲುಗಳು ಮಾತ್ರ ಪೂರ್ಣವಾಗಿ ವಿದ್ಯುತ್‌ನಲ್ಲಿ ಚಲಿಸಿದರೆ, ಬಸ್ಸು ಕಾರು ಮತ್ತು ಹಾರುವ ದ್ವಿಚಕ್ರ ವಾಹನಗಳು ಸೋಲಾರ್ ಬ್ಯಾಟರಿಗಳಿಂದ ಚಲಿಸುತ್ತವೆ. ಸೋಲಾರ್ ಬ್ಯಾಟರಿಗಳನ್ನು ಸ್ಪೇಸ್ ಕಾಲೋನಿಗಳಲ್ಲಿ ಸೋಲಾರ್ ಬ್ಯಾಟರಿಗಳೆ ಅಲ್ಲದೆ ಅನೇಕ ರೀತಿಯ ವಸ್ತುಗಳನ್ನು ತಯಾರಿಸಿ ಭೂಮಿಗೆ ರವಾನಿಸಲಾಗುತ್ತಿದೆ. ಕಂಪ್ಯೂಟರ್‌ಗಳು ಮತ್ತು ರೊಬೋಟ್‌ಗಳಿಗೆ ಉಪಯೋಗಿಸುವ ಬಿಡಿ ಭಾಗಗಳನ್ನು ಸ್ಪೇಸ್ ಕಾಲೋನಿಗಳಲ್ಲಿ ತಯಾರಿಸುತ್ತಾರೆ. ಭೂಮಿಯ ಮೇಲೆ ಇಂಧನ ಪೂರ್ಣವಾಗಿ ಮುಗಿದುಹೋದ ಮೇಲೆ ಸೋಲಾರ್ ಶಕ್ತಿಯನ್ನು ಎಲ್ಲದ್ದಕ್ಕೂ ಉಪಯೋಗಿಸಿಕೊಳ್ಳಲಾಗುತ್ತಿದೆ.



ಬೆನ್ ಸಿಟಿಯ ಟ್ರಬಲ್ ಎಕ್ಸ್ ಚಾನಲ್‌ನಲ್ಲಿ ಒಂದು ಕಾರ್ಯಕ್ರಮ ಬರುತ್ತಿದ್ದು ಇತ್ತೀಚೆಗೆ ಅದು ನಗರದಲ್ಲಿ ಭಾರಿ ಪ್ರಚಾರಕ್ಕೆ ಒಳಗಾಗಿದೆ. ಅದರ ಸದಸ್ಯರಾಗಿರುವ ಯುವಕ ಯುವತಿಯರ ಗುಂಪು ತಮ್ಮನ್ನು ಜಾಕ್ ಆಫ್ ಆಷ್, ಬ್ಯಾಡ್ ಆಷ್, ಟ್ರಬಲ್ ಶೂಟರ್ಸ್ ಸೈಕೊ ಪಾತ್ಸ್ ಇತ್ಯಾದಿ ಹೆಸರುಗಳಿಂದ ತಮ್ಮನ್ನು ಕರೆದುಕೊಳ್ಳುತ್ತಿದ್ದಾರೆ. ಹನ್ನೆರಡರಿಂದ ಇಪ್ಪತ್ತು ವರ್ಷಗಳವರೆಗಿನ ಇವರೆಲ್ಲರೂ ಮನೆಗಳನ್ನು ತೊರೆದೊ ಇಲ್ಲ ತಂದೆ ತಾಯಿಯರ ಜೊತೆಗೆ ಜಗಳವಾಡಿ ಮನೆಗಳಿಂದ ದೂರವಾಗಿದ್ದಾರೆ.

ಇವರ ಹುಚ್ಚು ಕಾರ್ಯಕ್ರಮಗಳು ಬೀದಿ ಬೀದಿಗಳಲ್ಲೂ ಯುವಕ ಯುವತಿಯರು ಮತ್ತು ಮಕ್ಕಳನ್ನು ಕೆರಳಿಸಿ ಕಂಗೆಡಿಸಿವೆ. ಇದ್ದಕ್ಕಿದ್ದಾಗೆ ಇವರ ತಲೆಗಳಲ್ಲಿ ಹುಟ್ಟಿಕೊಳ್ಳುವ ಯೋಚನೆಗಳನ್ನು ಎಲ್ಲೆಂದರಲ್ಲಿ ಹೇಗೆಂದರೆ ಹಾಗೆ ಕಾರ್ಯರೂಪಕ್ಕೆ ತಂದುಬಿಡುತ್ತಾರೆ. ಒಬ್ಬ ಯುವಕ ದಿಢೀರನೆ ತನ್ನ ಬೆಲ್ಟ್ ತೆಗೆದುಕೊಂಡು ತಂದೆಯನ್ನು ಒಂದೇ ಸಮನೆ ಹೊಡೆಯಲು ಪ್ರಾರಂಭಿಸಿಬಿಡುತ್ತಾನೆ. ತಬ್ಬಿಬ್ಬಾದ ತಂದೆ ಇವನಿಗೆ ಏನಾಗಿದೆ? ಹುಚ್ಚು ಹಿಡಿದಿದೆಯಾ ಹೇಗೆ ಒಂದೂ ಗೊತ್ತಾಗದೆ ಸ್ವಲ್ಪ ಹೊತ್ತು ಅವನನ್ನು ತಡೆಯಲು ಪ್ರಯತ್ನಿಸಿ ನೋಡುತ್ತಾರೆ. ಕೊನೆಗೆ ತಾನು ಮಗನನ್ನು ಸಿಕ್ಕಿದ ವಸ್ತುಗಳಿಂದ ಹೊಡೆಯಲು ಪ್ರಾರಂಭಿಸಿಬಿಡುತ್ತಾರೆ. ರಕ್ತ ಸುರಿಯುವವರೆಗೆ ಹೊಡೆದಾಟ ನಡೆಯುತ್ತದೆ. ಯುವಕ ಇದ್ದಕ್ಕಿದ್ದಾಗೆ ತಂದೆಯನ್ನು ಒಮ್ಮೆ ತಬ್ಬಿಕೊಂಡು ಮುದ್ದಾಡಿ ಅನಂತರ ಜೋರಾಗಿ ನಗುತ್ತಾ ಹೊರಕ್ಕೆ ಹೋಗಿಬಿಡುತ್ತಾನೆ. ತಂದೆಯಾದವನು ಕೊನೆಗೆ ಬದುಕಿದೆ ಬಡಪಾಯಿ ಎಂದು ತನಗಾದ ಗಾಯಗಳನ್ನು ನೋಡಿಕೊಳ್ಳುತ್ತ ಮಗನಿಗೆ ಏನಾಯಿತು ಎಂದು ಯೋಚನೆಯಲ್ಲಿ ಬೀಳುತ್ತಾನೆ.

ಇನ್ನೊಂದು ಕಡೆ ಯುವಕನೊಬ್ಬ ಒಂದು ಕೋಣೆಯಲ್ಲಿ ನಾಲ್ಕಾರು ಬೀದಿ ನಾಯಿಗಳನ್ನು ಕೂಡಾಕಿ ಬಾಗಿಲು ಮುಚ್ಚಿ ಅವುಗಳನ್ನೇ ತದೇಕಚಿತ್ತದಿಂದ ನೋಡುತ್ತಿದ್ದಾನೆ. ನಾಯಿಗಳಿಗೆ ಏನೂ ಅರ್ಥವಾಗದೆ ಕುಂಯ್‌ಗುಡುತ್ತ ಅವನನ್ನೇ ನೋಡುತ್ತಿವೆ. ಯುವಕ ಒಂದೆರಡು ಸಲ ಜೋರಾಗಿ ನಗುತ್ತಾನೆ...! ಅನಂತರ ಪ್ಯಾಕ್‌ಗಳಲ್ಲಿದ್ದ ತಿಂಡಿಗಳನ್ನು ತೆಗೆದು ನಾಯಿಗಳಿಗೆ ತಿನ್ನಿಸುತ್ತಾನೆ. ನಾಯಿಗಳು ಬಾಲಗಳನ್ನು ಅಲ್ಲಾಡಿಸುತ್ತ ಚೆನ್ನಾಗಿ ತಿನ್ನುತ್ತವೆ. ಇದ್ದಕ್ಕಿದ್ದಾಗೆ ಯುವಕ ಜೋರಾಗಿ ನಗುತ್ತ ಬೆಲ್ಟ್ ತೆಗೆದುಕೊಂಡು ನಾಯಿಗಳ ಮೇಲೆ ಎರಗಿಬಿಡುತ್ತಾನೆ. ತಿನ್ನುತ್ತಿದ್ದ ನಾಯಿಗಳು ಒಮ್ಮೆಲೆ ಗಾಬರಿಯಾಗಿ ಕೋಣೆಯಿಂದ ಹೊರಗೆ ಹೋಗಲು ಬೊಗಳತೊಡಗುತ್ತವೆ.

ಕೋಣೆಯ ಬಾಗಿಲುಗಳನ್ನು ಭದ್ರಪಡಿಸಿರುವ ಯುವಕ ನಾಯಿಗಳನ್ನು ಒಂದೇ ಸಮನೆ ಬಡಿಯುತ್ತಿದ್ದಾನೆ. ಬೆಲ್ಟ್ ಏಟುಗಳನ್ನು ಸಹಿಸದ ನಾಯಿಗಳು ಯುವಕನ ಮೇಲೆ ತಿರುಗಿ ಬೀಳುತ್ತವೆ. ಯುವಕ ಬೆಲ್ಟ್‌ನ್ನು ಬಿಸಾಕಿ ನಾಯಿಗಳಂತೆ ಬಗ್ಗಿ ಅವುಗಳನ್ನು ಕಚ್ಚಲು ಪ್ರಾರಂಭಿಸಿಬಿಡುತ್ತಾನೆ. ಇದೆ ಸರಿಯಾದ ಸಮಯವೆಂದು ತಿಳಿದುಕೊಂಡ ನಾಯಿಗಳು

ಅವನನ್ನು ಕೆಳಕ್ಕೆ ಕೆಡವಿಕೊಂಡು ಯದ್ವಾ ತದ್ವಾ ಕಚ್ಚಿ ಅವನ ರಕ್ತದ ರುಚಿಯನ್ನು ಚಪ್ಪರಿಸುತ್ತವೆ.

ಈಗ ಯುವಕ ಒಮ್ಮೆಲೆ ಚೀರಾಡುತ್ತ ಸಹಾಯಕ್ಕೆ ಕಿರುಚಿಕೊಳ್ಳುತ್ತಾನೆ. ಬಾಗಿಲುಗಳನ್ನು ಹೊಡೆದು ಒಳಕ್ಕೆ ನುಗ್ಗಿದ ಯುವಕರ ಒಂದು ಗುಂಪು, ನಾಯಿಗಳ ಮೇಲೆ ಪ್ರಹಾರ ಮಾಡುತ್ತದೆ. ನಾಯಿಗಳು ಬಾಗಿಲು ತೆಗೆಯುವುದನ್ನೇ ಕಾಯುತ್ತಿದ್ದರಿಂದ ಹೊರಕ್ಕೆ ಓಡಿಹೋಗುತ್ತವೆ. ಯುವಕನಿಗೆ ತುರ್ತು ಚಿಕಿತ್ಸೆ ನೀಡಿ ಆಸ್ಪತ್ರೆಗೆ ಸಾಗಿಸುತ್ತಾರೆ. ಯುವಕ ಅಟ್ಟಹಾಸದಿಂದ ಜೋರಾಗಿ ನಗುತ್ತಾ ಹೊರಡುತ್ತಾನೆ.

ಯುವಕ ಯುವತಿಯರ ಒಂದು ಗುಂಪು ಬೀದಿಯಲ್ಲಿ ನಡೆಯುತ್ತಾ ಹೋಗುತ್ತಿದೆ. ಚಿತ್ರ ವಿಚಿತ್ರ ಉಡುಪುಗಳಲ್ಲಿರುವ ಆ ಗುಂಪು ಇದ್ದಕ್ಕಿದ್ದಾಗೆ ಒಂದು ಮನೆಯ ಬಾಗಿಲು ತಳ್ಳಿ ಒಳಕ್ಕೆ ನುಗ್ಗಿತು. ಮನೆ ಒಳಗೆ ಸೇರಿಕೊಂಡು ಬಾಗಿಲು ಕಿಟಕಿಗಳನ್ನು ಮುಚ್ಚಿಬಿಟ್ಟರು. ಕೆಲವೇ ಕ್ಷಣಗಳಲ್ಲಿ ಮೊಬೈಲ್, ಇಂಟರ್‌ನೆಟ್, ಫೋನ್, ಸ್ಕೈ ಸಿಗ್ನಲ್‌ಗಳ ಸಂಪರ್ಕವನ್ನು ಕಡಿದು ಹಾಕಲಾಯಿತು.

ಅನಂತರ ಮನೆಯವರನ್ನು ತಮಗೆ ಔತಣ ನೀಡುವಂತೆ ಆಜ್ಞೆ ಮಾಡಿದರು. ಸ್ವಲ್ಪ ತಡವರಿಸಿದ ಮನೆಯವರಿಗೆ "ಹೇಳಿದ್ದನ್ನು ಮಾಡ್ತೀರ...? ಇಲ್ಲ ಪ್ರಾಣ ಕಳೆದುಕೊಳ್ತೀರ?" ಎಂದು ಎಚ್ಚರಿಕೆಯನ್ನು ನೀಡಿದ ಗುಂಪು ಮನೆಯವರ ಎದುರಿಗೆ ಸಾಮಾನುಗಳ ಮೇಲೆ ಪ್ರಹಾರ ಮಾಡಿ ತೋರಿಸಿತು. ಒಮ್ಮೆಲೆ ಹೆದರಿದ ಮನೆಯವರು ಇಡೀ ಗುಂಪನ್ನು ಡೈನಿಂಗ್ ಟೇಬಲ್ ಮುಂದೆ ಕೂರಿಸಿ ಅವರು ಕೇಳಿದ ರೀತಿಯ ಡ್ರಿಂಕ್ಸ್ ಮತ್ತು ತಿನಿಸುಗಳನ್ನು ಸರಬರಾಜು ಮಾಡಲಾಯಿತು. ಎಲ್ಲವನ್ನು ತಿಂದು ಕುಡಿದು ಗುಂಪಿಗೆ ನಶೆ ನೆತ್ತಿಗೆ ಏರಿತು.

ನಶೆ ಏರಿದ್ದೇ ಬ್ಯಾಟು ರಾಡುಗಳಿಂದ ಮನೆಯವರನ್ನು ಹೊಡೆಯಲು ಪ್ರಾರಂಭಿಸಿಬಿಟ್ಟರು. ಹೆದರಿಕೊಂಡ ಮನೆಯವರು ಸಿಕ್ಕ ಸಿಕ್ಕ ಕಡೆಗೆ ಓಡಹೋಗಿ ಅವಿತು ಕೊಂಡರು. ಈಗ ಮನೆಯಲ್ಲಿದ್ದ ಪ್ರತಿಯೊಂದು ವಸ್ತುವನ್ನು ಎಸೆಯುತ್ತ ಹೊಡೆಯುತ್ತ ಗುಂಪು ಅಟ್ಟಹಾಸ ಮೆರೆಯತೊಡಗಿತು. ಮನೆಯವರಿಗೆ ಏನು ಮಾಡಬೇಕೊ ಅರ್ಥವಾಗಲಿಲ್ಲ. ಹೊರಕ್ಕೆ ಓಡಿಹೋಗಲು ಕಿಟಕಿ, ಬಾಗಿಲು ಮುಚ್ಚಿ ಎಲ್ಲಾ ರೀತಿಯ ಸಂಪರ್ಕವನ್ನು ತೆಗೆದು ಹಾಕಲಾಗಿದೆ.

ಮನೆಯಲ್ಲಿನ ಎಲ್ಲಾ ಸಾಮಾನುಗಳನ್ನು ಹೊಡೆದು ಚೂರು ಚೂರು ಮಾಡಿದ ಮೇಲೆ ಸಾಮಾನುಗಳ ಹಿಂದೆ ಅವಿತುಕೊಂಡಿದ್ದ ಜನರನ್ನು ಹಿಡಿದುಕೊಂಡು ಬಂದು ಅವರನ್ನು ಯದ್ವಾತದ್ವಾ ಹೊಡೆಯುತ್ತಿದ್ದಾರೆ. ಮನೆಯವರೆಲ್ಲ ಒಂದೇ ಸಮನೆ ಕಿರುಚಿಕೊಂಡು ಮನೆಯಲ್ಲ ಓಡಾಡುತ್ತಿದ್ದಾರೆ. ಅವರನ್ನು ಬಿಡದೆ ಅಟ್ಟಿಸಿಕೊಂಡು ಹೋಗಿ ಹೊಡೆಯುತ್ತಿದ್ದಾರೆ.

ಕೊನೆಗೂ ಆ ಗುಂಪಿನವರಿಗೆಲ್ಲ ಸುಸ್ತಾಗಿ ಹೋಯಿತು. ಈಗ ಫೋನ್,

ಇಂಟರ್‌ನೆಟ್, ಟಿವಿ ಮತ್ತು ಸ್ಕೈಸಿಗ್ನಲ್ ಸಂಪರ್ಕವನ್ನು ಸರಿ ಮಾಡಿದ ಗುಂಪಿನ ಸದಸ್ಯರ ಕಿಟಕಿ ಬಾಗಿಲುಗಳನ್ನು ತೆರೆದು ತಮ್ಮ ಬಗ್ಗೆ ಪೊಲೀಸರಿಗೆ ತಿಳಿಸುವಂತೆ ಹೇಳಿದರು. ಮನೆಯವರಿಗೆ ಒಂದೂ ಅರ್ಥವಾಗಲಿಲ್ಲ. ಒಬ್ಬರನ್ನೊಬ್ಬರು ಮಿಕ ಮಿಕ ನೋಡಿಕೊಂಡು ಕೊನೆಗೂ ಪೊಲೀಸರಿಗೆ ವಿಷಯ ತಿಳಿಸಿದರು. ಕೆಲವೇ ನಿಮಿಷಗಳಲ್ಲಿ ವ್ಯಾನ್ ತುಂಬಾ ಬಂದ ಪೊಲೀಸರು ಮನೆ ಪ್ರವೇಶಿಸಿದರು.

ನಶೆ ಏರಿ ತೊಳಲಾಡುತ್ತಿದ್ದ ಗುಂಪು ತಾವು ಮಾಡಿದ ಅಟ್ಟಹಾಸಗಳ ಬಗ್ಗೆ ಪೊಲೀಸರಿಗೆ ತಿಳಿಸುವಂತೆ ಮನೆಯವರಿಗೆ ಹೇಳಿತು. ಮನೆಯವರು ಪೊಲೀಸರಿಗೆ ಎಲ್ಲವನ್ನೂ ತಿಳಿಸಿದರು. ಪೊಲೀಸರು ಇಡೀ ಗುಂಪನ್ನು ಅಲ್ಲಿಂದಲೆ ತದಕುತ್ತ ವ್ಯಾನಿಗೆ ತುಂಬಿ ಕರೆದುಕೊಂಡು ಹೊರಟರು. ದಾರಿಯಲ್ಲಿ ''ಯಾರೊ ನೀವು? ನಿಮ್ ಗುಂಪಿನ ಹೆಸರು ಏನು?'' ಎಂದಿದ್ದಕ್ಕೆ ''ನಮ್ಮ ಗುಂಪಿನ ಹೆಸರು ಟ್ರಬಲ್ ಶೂಟರ್ಸ್'' ಎಂದರು, ಎಲ್ಲರೂ ಒಕ್ಕೊರಲಿನಿಂದ. ''ನಡೆಯಿರಿ ಪೊಲೀಸ್ ಠಾಣೆಗೆ. ನಾವು ಎಷ್ಟು ಟ್ರಬಲ್ ಕೊಡ್ತೀವಿ ಅನ್ನೊದನ್ನ ತೋರಿಸ್ತಿವಿ'' ಎಂದ ಪೊಲೀಸರು ಅವರನ್ನು ವ್ಯಾನ್‌ನಲ್ಲೆ ಲಾಠಿಗಳಿಂದ ಹೊಡೆಯತೊಡಗಿದರು. ಎಲ್ಲರೂ ಕೇಕೆ ಹಾಕಿಕೊಂಡು ನಗುತ್ತಿದ್ದಾರೆ. ಇನ್ನಷ್ಟು ಕೋಪಗೊಂಡ ಪೊಲೀಸರು ''ಹುಚ್ಚು ನನ್ಮಕ್ಕಳು'' ಎನ್ನುತ್ತ ಇನ್ನೂ ಜೋರಾಗಿ ಹೊಡೆಯತೊಡಗಿದರು. ಇದು ಇತ್ತೀಚೆಗೆ ಬೆನ್ ನಗರದಲ್ಲಿ ಹುಟ್ಟಿಕೊಂಡ ಯುವಕ ಯುವತಿಯರ ನಮೂನೆಗಳು. ಈ ಗುಂಪಿನಲ್ಲಿ ಕಾಸ್ಮೋರಾ ಮತ್ತು ಅವಳ ಬಾಯ್‌ಫ್ರೆಂಡ್ ರಾಮ್ ಪೀಟರ್ ಕೂಡ ಇದ್ದಾನೆ.



ಐಯಾನ್, ಅಶ್ವಿನಿ ದೂರವಾಗಿ ವರ್ಷಗಳೆ ಕಳೆದುಹೋಗಿವೆ. ಶಮಿ ತೇಜಸ್ ಕೂಡ ದೂರವಾಗಿದ್ದಾರೆ. ಐಯಾನ್ ಶಮಿ ಜೊತೆಗೆ, ಅಶ್ವಿನಿ ತೇಜಸ್ ಜೊತೆಗೆ ಜೀವನ ನಡೆಸುತ್ತಿದ್ದಾರೆ. ಈ ನಡುವೆ ಅವರು ಬೇರೆ ಬೇರೆ ಪಾರ್ಟನರ್‌ಗಳ ಜೊತೆಗೆ ಜೀವನ ನಡೆಸಿದ್ದಾರೆ. ಅವರು ತಮ್ಮ ಸಂಪತ್ತನ್ನು ಕಾನೂನಿನ ಪ್ರಕಾರ ಆಗಾಗ ಹಂಚಿಕೊಂಡಿದ್ದಾರೆ. ಅವರಿಗೆ ಇಷ್ಟವಾದಾಗ ಇಲ್ಲ ತಮ್ಮ ಹಳೆ ಪತಿ ಪತ್ನಿಯರು ಮತ್ತು ಗೆಳೆಯ ಗೆಳತಿಯರು ಜ್ಞಾಪಕ ಬಂದಾಗ ಸಮಯ ನಿಗದಿಪಡಿಸಿ ಭೇಟಿಯಾಗುತ್ತಾರೆ, ಒಟ್ಟಾಗಿ ಕಾಲ ಕಳೆಯುತ್ತಾರೆ.

ಶಮಿ ಮತ್ತು ಐಯಾನ್ ಜೊತೆಗೆ ಶಮಿ ಹೆತ್ತ ಗಂಡು ಮಗುವಿದ್ದರೆ, ತೇಜಸ್ ಮತ್ತು ಅಶ್ವಿನಿ ಜೊತೆಗೆ ಕಾಸ್ಮೋರಾ ಇದ್ದಾಳೆ. ಕಾಶ್ಮೋರಾ ತನ್ನ ಗೆಳೆಯ ರಾಮ್ ಪೀಟರ್ ಜೊತೆಗೆ ಕಾಸ್‌ನೋವಾ ಸೆಂಟರಿನ ಒಂದು ಕ್ಯಾಬಿನ್‌ನಲ್ಲಿ ಬೀರು ಕುಡಿಯುತ್ತ ಸಿಗರೇಟ್ ಸೇದುತ್ತ ಹರಟುತ್ತಿದ್ದಾಳೆ. ಅಲ್ಲಿ ನೂರಾರು ರೀತಿಯ ಕ್ಯಾಬಿನ್, ಕೋಣೆ ಮತ್ತು ಬಂಗಲೆಗಳಿವೆ. ಎಲ್ಲವೂ ಹಣಕ್ಕೆ ತಕ್ಕ ಹಾಗೆ. ಒಂದೊಂದು ಕ್ಯಾಬಿನ್‌ನಲ್ಲೂ ಎಷ್ಟು ಜನರು ಬೇಕಾದರೂ ಕುಳಿತುಕೊಳ್ಳಬಹುದು. ಇಲ್ಲ ಒಂದು ಕೋಣೆಯನ್ನೂ ಬಂಗಲೆಯನ್ನು ಬಾಡಿಗೆಗೆ

ಪಡೆಯಬಹುದು. ಒಮ್ಮೆ ಒಂದು ಕ್ಯಾಬಿನ್ ಅಥವಾ ಬಂಗಲೆ ಒಳಗೆ ಯಾರಾದರೂ ಸೇರಿಕೊಂಡರೆ ಅದರ ಮುಂದೆ ನೊ ಎಂಟ್ರಿ ಎನ್ನುವ ಫಲಕ ಕಾಣಿಸಿಕೊಳ್ಳುತ್ತದೆ. ಅನಂತರ ವೈಟರ್ ಕೂಡ ಕರೆದಾಗ ಮಾತ್ರ ಒಳಗೆ ಹೋಗಬೇಕು.

ಕಾಸ್‌ನೋವಾ ಸೆಂಟರ್ ಎಂದರೆ ಅದೊಂದು ವಿಸ್ಮಯ ಜಗತ್ತೆಂದೆ ಹೇಳಬೇಕು. ಈ ಸಮುಚ್ಚಯದಲ್ಲಿ ನೂರಾರು ರೀತಿಯ ಜೂಜುಗಳು ಮತ್ತು ಗೇಮ್ಸ್‌ಗಳಿವೆ. ಪ್ರಪಂಚದಲ್ಲಿ ದೊರಕುವ ಎಲ್ಲಾ ರೀತಿಯ ಮಾದಕ ವಸ್ತುಗಳು, ಡ್ರಿಂಕ್ಸ್‌ಗಳು, ತಿಂಡಿ ತಿನಿಸುಗಳು, ಬಟ್ಟೆಬರೆಗಳು, ಫ್ಯಾಷನ್ ಸಾಮಗ್ರಿಗಳು ಎಲ್ಲವೂ ದೊರಕುತ್ತವೆ. ಒಳಗೆ ಕೃತಕ ಕಡಲ ದಂಡೆಗಳನ್ನು ಈಜುಕೊಳಗಳನ್ನು ಸ್ಥಾಪಿಸಲಾಗಿದೆ.

ಒಟ್ಟಿನಲ್ಲಿ ಬೆನ್‌ಸಿಟಿಯು ಮಾಡರ್ನ್ ಅಡ್ಡೆಗಳೆಂದೆ ಖ್ಯಾತಿ ಪಡೆದಿರುವ ಈ ಸಮುಚ್ಚಯಗಳಲ್ಲಿ ಬೆನ್ ಸಿಟಿಯ ಯುವಕರು, ಯುವತಿಯರು, ಮಧ್ಯ ವಯಸ್ಸಿನವರು ಮುದುಕರು ಎಲ್ಲರೂ ಇಲ್ಲಿ ಕಾಲ ಕಳೆಯುತ್ತಾರೆ. ಗಂಡು ಗೂಳಿಗಳು ಬಾಡಿಗೆಗೆ ದೊರಕುತ್ತಾರೆ. ಸುಂದರವಾದ ಹುಡುಗಿಯರು, ಮಸ್ತು ಕಟ್ಟಾದ ಪ್ರಿಯತಮೆಯರಿಗೆ ವಿಟರಿಗೆ ಈ ಸ್ಥಳ ಸ್ವರ್ಗ.

ಕಾಸ್ಮೋರಾ ಬೀರು ಕುಡಿಯುತ್ತ ಸಿಗರೇಟು ಸೇದುತ್ತಾ ಹಿಂದಿನ ರಾತ್ರಿ ತನಗಾದ ಅನ್ಯಕಾಯ ಜನರ ಜೊತೆಗಿನ ಅನುಭವವನ್ನು ತನ್ನ ಗೆಳೆಯನಿಗೆ ಹೇಳುತ್ತಿದ್ದಾಳೆ. ಅವನೂ ಬಿದ್ದು ಬಿದ್ದು ನಗುತ್ತಿದ್ದಾನೆ. ಕಾಸ್ಮೋರಾ "ಸ್ಟುಪಿಡ್ ಸುಮ್ಮ ಸುಮ್ಮನೆ ನಗ್ಬೇಡ. ನನ್ಗೆ ಕೋಪ ಬಂದರೆ ಚೆನ್ನಾಗಿರುವುದಿಲ್ಲ" ಎಂದಳು. ಹುಡುಗ ನಗುವುದನ್ನು ಮರೆತು ಗಂಭೀರನಾದ. "ನೀನು ಹೇಳೂದೆಲ್ಲ ನಿಜ. ನಾನು ಬೇರೆ ಏನೋ ನೆನಪಿಕೊಂಡು ನಗ್ತಾ ಇದ್ದೀನಿ" ಎಂದ.

ಕಾಸ್ಮೋರಾ ಮತ್ತು ರಾಮ್ ಪೀಟರ್ ಎಷ್ಟೋ ಹೊತ್ತಿನಿಂದ ಕೈ ಕೈ ಹೆಣೆದುಕೊಂಡು ಪಕ್ಕ ಪಕ್ಕದಲ್ಲೆ ಕುಳಿತಿದ್ದಾರೆ. ಅವರು ಮಧ್ಯೆ ಮಧ್ಯೆ ಚುಂಬನಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದಾರೆ. "ಇನ್ನು ಸಾಕು. ಹೊರ್‍ಗೋಗಿ ಒಂದೆರಡು ಗೇಮ್ಸ್ ಆಡೋಣ" ಕಾಸ್ಮೋರಾ ಹೇಳಿದಳು. ರಾಮ್ ಪೀಟರ್ "ಯುವರ್ ಕೈಂಡ್ ಪರ್‌ಮಿಷನ್" ಎಂದು ಅವಳನ್ನೊಮ್ಮೆ ತಬ್ಬಿಕೊಂಡು ಚುಂಬಿಸಿದ. "ಚುಂಬನ ಎಷ್ಟು ಮಾಡಿದರೂ ಬೇಕೆನಿಸುತ್ತೆ ಅಲ್ವ...?" ಎಂದು ತೊದಲಿದಳು ಕಾಸ್ಮೋರಾ. ರಾಮ್ ಪೀಟರ್ ಮತ್ತು ಕಾಸ್ಮೋರಾ ಹಣವನ್ನು ಕಾರ್ಡ್ ಮೂಲಕ ಪಾವತಿ ಮಾಡಿ ಅಲ್ಲಿಂದ ಎದ್ದು ತೂರಾಡುತ್ತ ಹೊರಕ್ಕೆ ಬಂದರು. "ಈ ದಿನ ಗೇಮ್ ಆಡೋದು ಬೇಡ. ತುಂಬಾ ಹೊತ್ತಾಗಿದೆ ನಡಿ" ಎಂದ ರಾಮ್ ಪೀಟರ್. ಅವನು, ಕಾಸ್ಮೋರಾಳಿಗಿಂತ ಎರಡು ವರ್ಷ ಚಿಕ್ಕವನು.

"ನನ್ಗೆ ಈ ತರಹ ಹೆದರುಕೊಳ್ಳೋರು ಅಂದರೆ ಆಗೋದಿಲ್ಲ" ಎಂದಳು ಕಾಸ್ಮೋರಾ. "ನಾನ್ ಯಾರಿಗೂ ಹೆದರುವುದಿಲ್ಲ ನೋಡು" ಎಂದಿದ್ದೆ ಎದುರಿಗೆ ಬರುತ್ತಿದ್ದ ವ್ಯಕ್ತಿಯ ಮುಖಕ್ಕೆ ಗುದ್ದಲು ಹೋದ. ಆ ವ್ಯಕ್ತಿ ತಪ್ಪಿಸಿಕೊಂಡು ಪಕ್ಕಕ್ಕೆ ಹೋದ. ಕಾಸ್ಮೋರಾ ನಗುತ್ತ

''ಪ್ಘ... ಪ್ಘ ಬೀ ಪ್ರಾಕ್ಟಿಕಲ್'' ಎಂದಳು. ಈಗ ಇಬ್ಬರೂ ಕ್ರೆಡಿಟ್ ಕಾರ್ಡ್ ಕೊಟ್ಟು ಗೇಮ್ಸ್ ಆಡೋದಕ್ಕೆ ಮೆಟಲ್ ಬಿಲ್ಲೆಗಳನ್ನು ಪಡೆದುಕೊಂಡರು. ಇಬ್ಬರೂ ಎಷ್ಟೇ ಆಡಿದರೂ ಒಂದೇ ಒಂದು ರೂಪಾಯಿಯೂ ಬರಲಿಲ್ಲ. ಪಕ್ಕದಲ್ಲಿ ಆಡುತ್ತಿದ್ದ ಹುಡುಗರು ''ಹೋಗು ಮನೆಗೋಗಿ ಹಾಲು ಕುಡಿ ಬಚ್ಚು'' ಎಂದು ಹಂಗಿಸಿದರು. ರಾಮ್ ಪೀಟರ್ ಹುಡುಗರನ್ನು ದುರುಗುಟ್ಟಿ ನೋಡಿದ. ಹುಡುಗನೊಬ್ಬ ಜೇಬಿನಿಂದ ಒಂದು ಪಿಸ್ತೂಲು ತೆಗೆದು ರಾಮ್ ಪೀಟರಗ ಹಣೆಗೆ ತೋರಿಸಿದ. ಕಾಸ್ಮೋರಾ ಅಡ್ಡ ಬಂದು ಪಿಸ್ತೂಲು ತೋರಿಸಿದ ಯುವಕನ ಕೆನ್ನೆ ಸವರಿದಳು. ಯುವಕ ಪಿಸ್ತೂಲನ್ನು ಜೇಬಿಗಿಟ್ಟು ಕಾಸ್ಮೋರಾಳ ಸೊಂಟದ ಮೇಲೆ ಕೈಯಾಡಿಸಿದ. ರಾಮ್ ಪೀಟರ್ ಕೈಹಿಡಿದುಕೊಂಡು ಕಾಸ್ಮೋರಾ ಅಲ್ಲಿಂದ ಬಂದುಬಿಟ್ಟಳು.

ಕಾಸ್ಮೋರಾ ಮತ್ತು ರಾಮ್ ಪೀಟರ್ ನೇರವಾಗಿ ಅಲ್ಲಿಂದ ಮನೆಗೆ ಬಂದು ಬಾಗಿಲು ತಟ್ಟಿದರು. ಸರಿ ರಾತ್ರಿ ಅಶ್ವಿನಿ ಬಾಗಿಲು ತೆರೆದು ಇಬ್ಬರನ್ನೂ ಒಳಗೆ ಕರೆದುಕೊಂಡಳು. ಇಬ್ಬರು ನೇರವಾಗಿ ಕಾಸ್ಮೋರಾ ಕೋಣೆಗೆ ಹೋದರು. ಅಲ್ಲಿ ಅವರಿಗೆ ಊಟ ರೆಡಿಯಾಗಿದೆ ಎಂದು ಅಶ್ವಿನಿ ಬಾಗಿಲು ಮುಚ್ಚಿಕೊಂಡಳು.



ಶಮಿ ಮತ್ತು ಐಯಾನ್ ತಮ್ಮ ಮನೆಯಲ್ಲಿ ಕುಳಿತುಕೊಂಡು ಹರಟುತ್ತಿದ್ದಾರೆ. ಒಳಗೆ ಇನ್ನೊಂದು ಕೋಣೆಯಲ್ಲಿ ಶಮಿಯ ಐದು ವರ್ಷದ ಮಗನಾದ ಶಿಶಿರ ಕಂಪ್ಯೂಟರ್ ಮುಂದೆ ಕುಳಿತುಕೊಂಡು ಅಕ್ಷರ ಮಾಲೆಯನ್ನು ಕಲಿತುಕೊಳ್ಳುತ್ತಿದ್ದಾನೆ.

ಎ ಫಾರ್ ಎ ಒನ್ - ಸ್ವಂತವಾಗಿ ಯೋಚಿಸುವ ಯಂತ್ರ ಅಥವಾ ಬುದ್ಧಿವಂತ ರೋಬೋಟ್.

ಬಿ ಫಾರ್ ಬಯೊಡೈವರ್ಸಿಟಿ - ಭೂಮಿಯ ಮೇಲಿರುವ ಪ್ರತಿಯೊಂದು ಪ್ರಾಣಿ ಗಿಡಮರಗಳನ್ನು ಸಂರಕ್ಷಿಸುವುದು.

ಸಿ ಫಾರ್ ಕ್ಲೋನಿಂಗ್-ತದ್ರೂಪಿಗಳನ್ನು ಸೃಷ್ಟಿಸುವುದರಿಂದ ಏನೇನು ಪರಿಣಾಮ ಗಳಾಗುತ್ತವೆ.

ಡಿ ಫಾರ್ ಡಾಟಾ ಮೈನಿಂಗ್ - ಮನುಷ್ಯನ ಎಲ್ಲಾ ಜ್ಞಾನವನ್ನು ಸಂಗ್ರಹಿಸುವುದು.

ಈ ಫಾರ್ ಏಯೊಲಿನ್ - ಜೀವಿಗಳು ಕೇವಲ ಭೂಗ್ರಹದಲ್ಲಿ ಮಾತ್ರ ಇವೆಯೆ ಅಥವಾ ಇನ್ನೂ ಯಾವುದಾದರೂ ಗ್ರಹದಲ್ಲಿ ಇವೆಯೆ?

ಎಫ್ ಫಾರ್ ಪ್ರಾಂಕನ್ ಫುಡ್ - ಜೀನ್ ತಳಿಗಳಿಂದ ಹೆಚ್ಚು ನ್ಯೂಟ್ರಿಷಿಯಸ್ ಆಹಾರ ಉತ್ಪಾದನೆ ಮಾಡಿ ಆಹಾರದ ಕೊರತೆಯನ್ನು ನೀಗಿಸುವುದು.

ಜಿ ಫಾರ್ ಜೀನೋಮ್ - ಜೀನೋಮ್ ನಕ್ಷೆಯ ಆಧಾರದಿಂದ ಜೀನ್ ತೆರಪಿ ನೀಡಿ ಎಲ್ಲಾ ಕಾಯಿಲೆಗಳನ್ನು ವಾಸಿ ಮಾಡುವುದು.

ಎಚ್ ಫಾರ್ ಹುಮೆನಿಸಮ್ - ಕಲೆ ಮತ್ತು ವಿಜ್ಞಾನ ಮೂಲಕ ಮನುಷ್ಯನೆಂದರೆ ಯಾರು? ನಾವು ಹೇಗೆ ಸೃಷ್ಟಿಯಾದೆವು ಎನ್ನುವುದನ್ನು ಪ್ರಶ್ನಿಸಿಕೊಳ್ಳುವುದು.

ಐ ಫಾರ್ ಐವಿಎಸ್ - ಇನ್ ವಿಟ್ರಿಯೊ ಫರ್ಟಿಲೈಸೇಷನ್, ಸೆಕ್ಸ್ ಇಲ್ಲದೆ ಸಂತಾ ಪಡೆಯುವುದು. ಯಾವುದೇ ಕಾಯಿಲೆಗಳಿಲ್ಲದ ಆರೋಗ್ಯ ವೀರ್ಯಾಣುಗಳಿಂದ ಹೆಚ್ಚು ಬುದ್ಧಿವಂತ ಮತ್ತು ಸ್ಫುರದ್ರೂಪಿ ಮಕ್ಕಳನ್ನು ಪಡೆಯುವುದು.

ಜೆ ಫಾರಗ ಜುರಾಸಿಕ್ - ಜುರಾಸಿಕ್ ಯುಗದಲ್ಲಿದ್ದ ಪೆಡಂಭೂತಗಳೆಲ್ಲ ಭೂಮಿಗೆ ಉಲ್ಕಾಶಿಲೆ ಬಡಿದು ನಾಶವಾದವು. ಕ್ರಿ.ಶ. 2002ರಲ್ಲಿ ಭೂಮಿಗೆ ಹತ್ತಿರ ಬಂದ ಉಲ್ಕಾ ಶಿಲೆ ಕೂದಲೆಳೆಯಿಂದ ದೂರವಾಯಿತು. ಮುಂದೆ...?

ಕೆ ಫಾರ್ ನಾಲೆಡ್ಜ್ - ಇಂಜಿನಿಯರಿಂಗ್ ಜ್ಞಾನವನ್ನು ಸಾಫ್ಟ್‌ವೇರ್‌ನ ಮೂಲಕ ಪ್ರಸ್ತುತಪಡಿಸುವುದು.

ಎಲ್ ಫಾರ್ ಲಾಂಗಿವಿಟಿ - ಜೆನಿಟಿಕ್ಸ್ ಔಷಧಿಗಳು, ಆಹಾರ ಮತ್ತು ದೈಹಿಕ ದೃಢತೆಯಿಂದ ಮನುಷ್ಯನ ಆಯುಷ್ಯ ಹೆಚ್ಚಿಸುವುದು.

ಎಮ್ ಫಾರ್ ಮೆಡಿಸಿನ್ - ಮಾಲಿಕ್ಯೂಲಾರ್ ಗಾತ್ರದ ರೋಬೋಟ್‌ಗಳು ಮನುಷ್ಯನ ರಕ್ತದಲ್ಲಿ ಸೇರಿ ಧಮನಿಗಳಲ್ಲಿರುವ ಕಲ್ಮಷವನ್ನು ಸ್ವಚ್ಛ ಮಾಡುವುದು.

ಎನ್ ಫಾರ್ ನ್ಯೂರೊಸೈನ್ಸ್ - ಮೆದುಳಿನ ನಕ್ಷೆಯನ್ನು ಗುರುತಿಸಿ ಯಾವ ಭಾಗ ಏನು ಮಾಡುತ್ತಿದೆ ಎಂದು ಗೊತ್ತಾದರೆ ಒಬ್ಬ ಮನುಷ್ಯನ ಸುಖ ದುಃಖಗಳನ್ನು ನಿಯಂತ್ರಿಸಬಹುದು.

ಪಿ ಫಾರ್ ಒಮೇಗಾ - ಮೀನುಗಳಲ್ಲಿ ದೊರಕುವ ಒಮೇಗಾ ಕೊಬ್ಬಿನ ಆಸಿಡ್ ಹೃದಯ ಕಾಯಿಲೆಗಳಿಗೆ ಒಳ್ಳೆಯದು.

ಐ ಫಾರ್ ಪ್ಯಾರಾ ಸೈಕಾಲಜಿ - ದೆವ್ವಗಳಿದ್ದ ಯುಎಫ್‌ಓವರೆಗೆ ನಂಬಲು ಯಾವುದೇ ವೈಜ್ಞಾನಿಕ ಆಧಾರಗಳಿಲ್ಲ, ಅದರೆ ಮನುಷ್ಯ ಅವುಗಳನ್ನು ನಂಬುತ್ತಾನೆ ಯಾಕೆ?

ಕ್ಯೂ ಫಾರ್ ಕ್ವಾಂಟಮ್ - ಕ್ವಾಂಟಮ್ ಥಿಯರಿಯ ಹಿನ್ನೆಲೆಯಲ್ಲಿ ಎಲೆಕ್ಟ್ರಾನಿಕ್ಸ್ ಕಂಪ್ಯೂಟರ್ ಮತ್ತು ಜೈವಿಕ ಯಂತ್ರಜ್ಞಾನ ಪ್ರಧಾನವಾಗಲಿದೆ.

ಆರ್ ಫಾರ್ ರೆಡ್ ಪ್ಲಾನೆಟ್ - ಮಂಗಳ ಗ್ರಹವನ್ನು ತಲುಪಿದ ಮಾನವ ಮುಂದಿನ ಯೋಜನೆಯಲ್ಲಿದ್ದಾನೆ.

ಎಸ್ ಫಾರ್ ಸೈಮೊನೆಲ್ - ಕಾಂಡಕೋಶಗಳಿಂದ ಮಾನವ, ಪ್ರಾಣಿ ಪಕ್ಷಿಗಳ ಅಂಗಾಂಗಳನ್ನು ಬೆಳೆಯಲಾಗುತ್ತಿದೆ ಮುಂದೆ.

ಟಿ ಫಾರ್ ಟೆಲಿಕಮ್ಯೂನಿಕೇಷನ್ - ಹಿಡಿ ಭೂಮಿ ತಂತುಗಳಿಂದ ಸುತ್ತಿಕೊಂಡು ಹೆಚ್ಚು ಜನರು ಸಿಸಿಗಳ ಮೂಲಕ ಮಾಹಿತಿ ಪಡೆಯುತ್ತಿದ್ದಾರೆ.

ಯು ಫಾರ್ ಅಲ್ಟಿಮೇಟ್ ಲ್ಯಾಪ್ ಟಾಪ್ - ಪ್ರಪಂಚವೆ ಒಂದು ಕಂಪ್ಯೂಟರಾಗಿದೆ. ಬಿಗ್ ಬ್ಯಾಂಗ್ ಗಂಟೆಯಿಂದ ಇಂದಿನವರೆಗಿನ ಘಟನೆಗಳನ್ನು ಆಲ್ಗೋರಿತಮ್ಸ್ ವಿವರಿಸುತ್ತದೆ.

ವಿ ಫಾರ್ ವೈರಸ್ - ವಿಜ್ಞಾನ ಬೆಳೆದಷ್ಟು ಹೊಸ ಹೊಸ ವೈರಸ್‌ಗಳು ಸೃಷ್ಟಿಯಾಗಿ ಮನುಷ್ಯನಿಗೆ ತೊಂದರೆಪಡಿಸುತ್ತಲೇ ಇವೆ. ಇವುಗಳಿಗೆ ಔಷಧಿ ಕಂಡುಹಿಡಿಯುವುದೇ ಒಂದು ಸವಾಲು. ಅದೇ ರೀತಿ ಕಂಪ್ಯೂಟರ್ ವೈರಸ್‌ಗಳು ಕೂಡ.

ಡಬ್ಲ್ಯೂ ಫಾರ್ ವೆಬ್‌ಲಾಗ್.

ಎಕ್ಸ್ ಫಾರ್ ಎಕ್ಸ್‌ಎಲ್‌ಎಮ್.

ವೈ ಫಾರ್ ಯೋಗಾ -

ಜೆಡ್ ಫಾರ್ ಜೀರೊ - ಸ್ವಿಚ್ ಆಫ್ ಎಂದು ಕಂಪ್ಯೂಟರ್ ಸ್ವಿಚ್ಚನ್ನು ಆಫ್ ಮಾಡಿ "ಮಮ್ಮಿ.. ಮಮ್ಮಿ... ಎ ಟು ಜೆಡ್ ಅಲ್ಫಾ ಬಿಟ್ಸ್‌ನೆಲ್ಲಾ ಪ್ರಾಕ್ಟೀಸು ಮಾಡಿದೆ' ಎಂದು ತಾಯಿ ಇದ್ದ ಕೋಣೆಗೆ ಓಡಿ ಬಂದ ಶಿಶಿರ.

"ನೈಸ್ ಬಾಯ್" ಶಮಿ ಅವನನ್ನು ಅಪ್ಪಿಕೊಂಡು ಮುದ್ದಾಡುತ್ತ" ನಿನ್ನ ಡ್ಯಾಡಿಗೆ ಹೇಳು" ಎಂದಳು.

"ಡ್ಯಾಡಿ... ಡ್ಯಾಡಿ... ಎಲ್ಲಾ ಅಲ್ಫಾಬೀಟ್ಸ್‌ನು ಪ್ರಾಕ್ಟೀಸ್ ಮಾಡಿದೆ' ಎನ್ನುತ್ತಿದ್ದಂತೆ ಐಯಾನ್ ಶಿಶಿರವನ್ನು ತನ್ನ ಕಡೆಗೆ ಎಳೆದುಕೊಂಡು ಮುದ್ದಿಸಿದ.



ಒಂದು ಕಾಲಕ್ಕೆ ಪ್ರಪಂಚವನ್ನೇ ಹಿಡಿತದಲ್ಲಿಟ್ಟುಕೊಂಡಿದ್ದ ಅಮೆರಿಕಾ ಸಿಕ್ಕಿದ ದೇಶಗಳ ಮೇಲೆಲ್ಲ ಕಾಲು ಕೆರೆದುಕೊಂಡು ಯುದ್ಧ ಮಾಡಿದ ಕಾರಣ ಭಾರಿ ನಷ್ಟವನ್ನು ಅನುಭವಿಸ ಬೇಕಾಯಿತು. ಅರೆಬ್ಬಿಯಾ ದೇಶಗಳನ್ನೆಲ್ಲ ತನ್ನ ಹಿಡಿತದಲ್ಲಿ ಇಟ್ಟುಕೊಂಡು ಬಿಲಿಯಾಂತರ ಡಾಲರ್ ಬೆಲೆಯ ಎಣ್ಣೆಯನ್ನು ದೋಚಿತ್ತು. ಅಮೆರಿಕಾದ ಅಹಂ ಎಲ್ಲೆ ಮೀರಿ ಹೋಗಿ ಚೀನಾ, ರಷ್ಯಾ, ಇಂಡಿಯಾ ಇನ್ನಿತರ ದೇಶಗಳ ಒಟ್ಟುಗೂಡಿ ಅಮೆರಿಕಾದ ಎದುರಿಗೆ ಸೆಡ್ಡು ಹೊಡೆದು ನಿಂತುಕೊಂಡುಬಿಟ್ಟಿದ್ದವು. ಅಲ್ಲಿಗೆ ಅಮೆರಿಕಾ ತನ್ನ ಹಿಂದಿನ ತಪ್ಪುಗಳನ್ನು ಮೆಲಕು ಹಾಕಿಕೊಳ್ಳುತ್ತ ತನ್ನ ಗಾಯಗಳನ್ನು ತಾನೆ ನೆಕ್ಕಿಕೊಂಡು ಕೂರಬೇಕಾಯಿತು.

ಇದರ ಜೊತೆಗೆ ಕ್ರಿ.ಶ. 2001ನೇ ವರ್ಷದಲ್ಲಿ ಒಸಾಮ ಬಿನ್ ಲ್ಯಾಡನ್ ಎಂಬುವನು ಅಮೇರಿಕಾದ ಪ್ರತಿಷ್ಠಿತ ಡಬ್ಲ್ಯೂಟಿಓ ಕಟ್ಟಡಗಳ ಮೇಲೆ ವಿಮಾನಗಳನ್ನು ನುಗ್ಗಿಸಿದ್ದ. ಈ ಕಾರಣದಿಂದ ಅಮೆರಿಕಾದ ಓಸಾಮಾನನ್ನು ಹಿಡಿಯಲು ಆಪಘಾನಿಸ್ಥಾನದ ಮೇಲೆ ಸಾವಿರಾರು ಬಾಂಬ್‌ಗಳನ್ನಾಕಿ ನಾಶ ಮಾಡಿತು. ಆದರೆ ಬಿನ್ ಲ್ಯಾಡನ್ ತಪ್ಪಿಸಿಕೊಂಡು ಅಮೆರಿಕಾವನ್ನು ಭೂತದಂತೆ ಕಾಡತೊಡಗಿದ. ಅನಂತರ ಅದೇ ರೀತಿಯಾಗಿ ಅಮೆರಿಕಾ ಎಣ್ಣೆಗಾಗಿ ಇರಾಕ್ ದೇಶದ ಮೇಲೆ ದಾಳಿ ಮಾಡಿದ್ದರಿಂದ ಸದ್ದಾಂ ಹುಸೇನ್ ಇರಾಕಿನಿಂದ ತಪ್ಪಿಸಿಕೊಂಡು ಬಿನ್‌ಲ್ಯಾಡನ್ ಜೊತೆಗೂಡಿದ.

ಅರಬ್ಬಿ ದೇಶಗಳಿಂದ ಇಂಧನವನ್ನು ದೋಚಲು ಪ್ರಾರಂಭಿಸಿದ ಬಲಾಢ್ಯ ಅಮೇರಿಕಾದ ಎದುರಿಗೆ ಸೆಡ್ಡೊಡ್ಡೆದು ನಿಂತವನು ಸದ್ದಾಂ ಹುಸೇನ್ ಮಾತ್ರ. ಎಲ್ಲಾ ಅರಬ್ಬಿ ದೇಶಗಳನ್ನು ತನ್ನ ಬೆರಳ ತುದಿಯಲ್ಲಿ ಆಡಿಸತೊಡಗಿದ ಅಮೆರಿಕಾಗೆ ಸದ್ದಾಂ ಮಾತ್ರ ಮುಳ್ಳಾಗಿ ಅಡ್ಡ ನಿಂತುಕೊಂಡ. ಇದನ್ನು ಸಹಿಸದ ಅಮೆರಿಕಾದ ರಾಷ್ಟ್ರಪತಿ ಮತ್ತು ವಿಶ್ವ ಇಂಧನ ವ್ಯಾಪಾರಿ ಬಿಲ್ ಜಾರ್ಜ್‌ಬುಷ್ ಇಂಗ್ಲೆಂಡಿನ ಪ್ರಧಾನಮಂತ್ರಿ ಟೋನಿ ಬ್ಲೋರ್ ಜತೆಗೂಡಿ ಇರಾನ್‌ನಲ್ಲಿ ಮಿಲಿಟ್ರಿ ಬೀಡುಬಿಟ್ಟು ಇರಾಖ್ ದೇಶದ ಸ್ವಯಂಶಾಸಕ ಸದ್ದಾಂನನ್ನು ಕೆಣಕುತ್ತಲೇ ಹೋದರು.

ಅಮೆರಿಕಾ ದೇಶದ ತುಂಬಾ ಯುದ್ಧ ಸಾಮಾಗ್ರಿಗಳನ್ನು ತುಂಬಿಕೊಂಡಿದ್ದ ಜಾರ್ಜ್‌ಬುಷ್ ಸಿದ್ಧಾಂತ ಖನಿಜದಲ್ಲಿ ಯುದ್ಧ ಸಾಮಗ್ರಿಗಳಿವೆ ಎಂದು ಅವನ ದೇಶದ ಒಳಗೆ ನುಗ್ಗಿ ಅವನ ಮನೆಯ ಮೇಲೆಯ ಲಗ್ಗೆ ಹಾಕಿದ್ದ. ಇರಾಖ್ ರಾಜಧಾನಿ ಬಾಗ್ದಾದ್ ನಗರವನ್ನು ರಣರಂಗ ಮಾಡಿ ಸಾವಿರಾರು ಜನರನ್ನು ಬಲಿ ತೆಗೆದುಕೊಂಡರು.

ಬಾಗ್ದಾದ್‌ನಿಂದ ತಪ್ಪಿಸಿಕೊಂಡು ಅಫ್‌ಘಾನಿಸ್ಥಾನದ ಪರ್ವತಗಳನ್ನು ಸೇರಿದ ಸಿದ್ದಾಂತನನ್ನು ನಾಲ್ಕಾರು ತಿಂಗಳು ಹುಡುಕಿ ಕೊನೆಗೆ ಕೈದಿ ಮಾಡಿ ಅಮೆರಿಕಾಗೆ ಕೊಂಡೊಯ್ದು ಹೆಸರಿಗೆ ಮಾತ್ರ ವಿಚಾರಣೆ ನಡೆಸಿ ಪ್ರಪಂಚದ ಎದುರಿಗೆಯೆ ನೇಣುಗಂಬ ಏರಿಸಿ ಸಾಯಿಸಿದ್ದರು. ಬಿನ್‌ಲ್ಯಾಂಡ್ ಎಲ್ಲಿದ್ದ ? ಹೇಗೆ ಸತ್ತೋದ ಎನ್ನುವುದು ಇಂದಿಗೂ ಯಾರಿಗೂ ಗೊತ್ತಿಲ್ಲ. ಸಾವಿರ ವರ್ಷಗಳ ಹಿಂದೆ ನಡೆಯಬಹುದಾಗಿದ್ದ ಈ ಘಟನೆ ಆಧುನಿಕ ಪ್ರಪಂಚದಲ್ಲಿ ಸಂಭವಿಸಿತು. ವಿಚಿತ್ರವೆಂದರೆ ಐಶ್ವರ್ಯವಂತ ಮುಸ್ಲಿಂ ದೇಶಗಳ ಯಾವ ನಾಯಕನೂ ಸದ್ದಾಂ ಬಗ್ಗೆ ಕನಿಕರದ ಮಾತುಗಳನ್ನು ಆಡಲಿಲ್ಲ.

ಅನಂತರದ ದಿನಗಳಲ್ಲಿ ಅಮೆರಿಕಾ ಮತ್ತು ಇಂಗ್ಲೆಂಡ್ ದೇಶಗಳು ಮಾಡಿದ್ದುಣ್ಣೊ ಮರಾಯ ಎಂಬಂತೆ ಮುಸ್ಲಿಂ ದೇಶಗಳ ಬಂಡೆಕೋರರಿಂದ ಅನೇಕ ರೀತಿಯಲ್ಲಿ ತೊಂದರೆಗೆ ಒಳಗಾದವು. ವಿಮಾನ, ರೈಲು ನಿಲ್ದಾಣ, ಮಾರುಕಟ್ಟೆ ಐಟಿಬಿಟಿ ಕಂಪನಿಗಳು ಮೇಲೆ ಬಾಂಬುಗಳನ್ನು ಸ್ಫೋಟಿಸಿ ಸಾವಿರಾರು ಜನರನ್ನು ಬಲಿ ತೆಗೆದುಕೊಂಡರು. ಬೆಂಗಳೂರಿನ ಮುಸ್ಲಿಂ ಯುವ ವೈದ್ಯರು ಮತ್ತು ಇಂಜನಿಯರುಗಳು ಅಮೆರಿಕಾ, ಇಂಗ್ಲೆಂಡಿಗೋಗಿ ವಿಮಾನ ನಿಲ್ದಾಣಗಳ ಮೇಲೆ ದಾಟಿ ಮಾಡಿ ಸಿಕ್ಕಿಕೊಂಡಿದ್ದರು.

ಬೆಂಗಳೂರಿನ ಉಗ್ರಗಾಮಿಗಳ ಕಥೆ 2007 ರಿಂದಲೇ ಪ್ರಾರಂಭಗೊಂಡಿತ್ತು. ಅದಕ್ಕೆ ಮುಂಚೆ ಬೆಂಗಳೂರಿನ ಐಐಎಂ ಮೇಲೆ ಉಗ್ರಗಾಮಿಗಳು ದಾಳಿ ಮಾಡಿ ಪ್ರೊಫೆಸರ್ ಒಬ್ಬರನ್ನು ಸಾಯಿಸಿ ತಪ್ಪಿಸಿಕೊಂಡು ಓಡಿಹೋಗಿದ್ದರು. ಅಂದಿನಿಂದ ಇಂದಿನವರೆಗೂ ಸಿದ್ದಾಂಹುಸೇನ್ ಮತ್ತು ಬಿನ್‌ಲ್ಯಾಡನ್ ಅನುಯಾಯಿಗಳು ಅಮೆರಿಕಾ ಮತ್ತು ಇಂಗ್ಲೆಂಡ್ ದೇಶಗಳ ಮೇಲೆ ದಾಳಿ ಮಾಡುತ್ತಲೆ ಬಂದಿದ್ದಾರೆ.



ಬಿನ್ ಲ್ಯಾಡನ್ ಮತ್ತು ಸದ್ದಾಂ ಹುಸೇನ್ ತಾವು ಸಾಯುವುದಕ್ಕೆ ಮುಂಚೆ ತಮ್ಮ ವಿರ್‍ಯಾಣುಗಳನ್ನ ಬಳಸಿ ಇಪ್ಪತ್ತೊಂದನೇ ಶತಮಾನದ ಮೊದಲ ದಶಕದಲ್ಲಿ ತದ್ರೂಪಿಗಳನ್ನು ಸೃಷ್ಟಿಸಿದ್ದರು. ಅನಂತರ ಅವರ ಮುಂದಿನ ತಲೆಮಾರಿನವರು ಬಿನ್ ಲ್ಯಾಡನ್ ಮತ್ತು ಸದ್ದಾಂ ಹುಸೇನ್ ರೀತಿಯ ಲಕ್ಷಾಂತರ ತದ್ರೂಪಿಗಳನ್ನು ಸೃಷ್ಟಿಸಿ ಅಮೆರಿಕಾ ಮೇಲೆ ದಾಳಿ ಮಾಡುವುದಾಗಿ ವದಂತಿಗಳು ಹುಟ್ಟಿಕೊಂಡಿದ್ದವು. ಅಮೆರಿಕಾ ಇರುವವರೆಗೆ ಆ ದೇಶವನ್ನು ನಾಶ ಮಾಡುವುದಾಗಿ ಮತ್ತು ತಲೆ ತಲಾಂತರಗಳ ಕಾಲ ಒಬ್ಬನೆ ಒಬ್ಬ ಉಳಿಯುವವರೆಗೂ ಹೋರಾಡುವುದಾಗಿ ಶಪಥ ಮಾಡಿದ್ದಾರಂತೆ. ಅವರು ಯಾವ ರೀತಿ ದಾಳಿ ಮಾಡಬಹುದು ಎನ್ನುವುದು ತಿಳಿಯದೆ ಅಮೆರಿಕಾ ಕಂಗಾಲಾಗಿದೆ. ಕೆಲವು ಊಹೆಗಳಂತೆ ಅವರಿಬ್ಬರ ಅನುಯಾಯಿಗಳು ಸಮುದ್ರದ ಕೆಳಗೆ ಎಲ್ಲೋ ನೆಲೆಯೂರಿದ್ದಾರೆ ಎನ್ನುವ ಗುಮಾನಿ ಇದೆ. ಇನ್ನಷ್ಟು ಗುಂಪುಗಳು ಆಫ್ರಿಕಾದ ದಟ್ಟ ಕಾಡುಗಳಲ್ಲಿ ಭೂಮಿಯ ಒಳಗೆ ಇರುವುದಾಗಿ ತಿಳಿಯಲಾಗಿದೆ.

ಅಮೆರಿಕಾ ಎಷ್ಟೇ ರೀತಿಯ ಬೇಹುಗಾರಿಕೆಯ ಜಾಲವನ್ನು ಹರಡಿದ್ದರೂ, ಅವರು ಕಳೆದ ನಲವತ್ತು ವರ್ಷಗಳಲ್ಲಿ ಅಮೆರಿಕಾವನ್ನು ಅನೇಕ ರೀತಿಯಲ್ಲಿ ಗೋಳಾಡಿಸಿದ್ದಾರೆ.

ಒಮ್ಮೆ ಅಂಥರಾಕ್ಸ್ ಬೀಜಗಳನ್ನು ಸಿಂಪಡಿಸಿದರೆ ಮತ್ತೊಮ್ಮೆ ಸರಸ್ ವೈರಸ್‌ನ್ನು ಅಮೆರಿಕಾದ ಮೇಲೆ ಚೆಲ್ಲಿದ್ದಾರೆ. ಕೆಲವೊಂದು ಸಲ ಅಸ್ಟಿರಾಯ್ಡ್ ರೀತಿಯ ಶಿಲಾಕಾಯಗಳನ್ನು ಅಮೆರಿಕಾದ ಮೇಲೆ ಚೆಲ್ಲಿದ್ದಾರೆ. ಇವು ಎಲ್ಲಿಂದ ಬಂದು ಬೀಳುತ್ತಿದ್ದವು ಎನ್ನುವುದು ಗೊತ್ತಾಗುತ್ತಿರಲಿಲ್ಲ. ಮತ್ತೊಂದು ಭಯಂಕರವಾದ ದಾಳಿ ಎಂದರೆ ಸದ್ದಾಂ ಹುಸೇನ್ ಮತ್ತು ಬಿನ್ ಲ್ಯಾಡನ್‌ನ ಹತ್ತು ಸಾವಿರ ತದ್ರೂಪಿಗಳು ಅಮೆರಿಕಾದ ನಗರದಲ್ಲಿ ಒಂದು ರಾತ್ರಿ ದಿಢೀರನೆ ಕಾಣಿಸಿಕೊಂಡುಬಿಟ್ಟಿದ್ದರು.

ವಿಶೇಷ ಮಾರ್ಷಲ್ ಯುದ್ಧ ತರಬೇತಿ ಪಡೆದಿದ್ದ ಆ ತದ್ರೂಪಿಗಳು ಬರಿ ಕೈಗಳಲ್ಲೆ ಸಿಕ್ಕಿದವರನ್ನು ಆ ರಾತ್ರಿ ಸಾಯಿಸತೊಡಗಿದರು. ಅವರು ಯಾವುದೇ ಯುದ್ಧ ಆಯುಧಗಳನ್ನು ತೆಗೆದುಕೊಂಡು ಅಮೆರಿಕಾ ಒಳಗೆ ನುಗ್ಗಿ ಬರಲಿಲ್ಲ. ಬರಿಕೈಗಳಲ್ಲೆ ಅಮೆರಿಕಾದ ಗಡಿ ಒಳಕ್ಕೆ ನುಗ್ಗಿ ಬಂದು ಬಿಟ್ಟಿದ್ದರು. ಅಷ್ಟು ಜನರು ಒಮ್ಮೆಲೆ ಅಮೆರಿಕಾ ಗಡಿ ಒಳಕ್ಕೆ ಅದು ಅನೇಕ ನಗರಗಳಿಗೆ ಹೇಗೆ ಬಂದರು ?

ಯಾವುದಾದರೂ ಸುರಂಗಗಳ ಮೂಲಕ ಬಂದರೆ ಇಲ್ಲ ಸಮುದ್ರಗಳ ಮೂಲಕ ನುಗ್ಗಿ ಬಂದರೆ ಎನ್ನುವುದು ಇಂದಿಗೂ ನಿಗೂಢವಾಗಿಯೇ ಉಳಿದಿದೆ. ಅಮೆರಿಕಾ ಜನ ಏನು ನಡೆಯುತ್ತಿದೆ ಎಂದುಕೊಳ್ಳುವಷ್ಟರಲ್ಲಿ ಬರಿ ಕೈಗಳಲ್ಲಿ ಎದುರಿಗೆ ಸಿಕ್ಕಿದ ಅಮೆರಿಕಾ ನಾಗರಿಕರನ್ನು ಒಂದೊಂದೆ ಏಟಿಗೆ ಹೊಡೆದು ಹೊಡೆದು ಸಾಯಿಸತೊಡಗಿದರು. ಅವರೆಲ್ಲ ಆತ್ಮಹತ್ಯಾ ದಳದವರಾಗಿದ್ದರಿಂದ ತಾವು ಸಾಯುವ ಮುಂಚೆ ಎಷ್ಟು ಅಮೆರಿಕಾದವರನ್ನು ಸಾಯಿಸಬಹುದು ಎನ್ನುವ ಲೆಕ್ಕಾಚಾರದಲ್ಲಿ ಮುನ್ನುಗ್ಗುತ್ತಿದ್ದರು. ಆ ದಿನ ರಾತ್ರಿ ಅಮೆರಿಕಾದ ಹಲವು ನಗರಗಳು ಮಸಣಗಳಾಗಿ ಮಾರ್ಪಟ್ಟಿದ್ದವು.

ಬೆಳಗಿನ ಹೊತ್ತಿಗೆ ಹತ್ತು ಸಾವಿರ ಸದ್ದಾ ಮತ್ತು ಲ್ಯಾಡನ್ ತದ್ರೂಪಿಗಳನ್ನು ಅಮೆರಿಕಾದ ಮಿಲಿಟರಿ ಮತ್ತು ಪೊಲೀಸರು ಹುಡುಕಿ ಹುಡುಕಿ ಸಾಯಿಸುವುದರೊಳಗೆ ಅಮೆರಿಕಾ ತನ್ನ ನಲವತ್ತು ಸಾವಿರ ನಾಗರಿಕರನ್ನು ಕಳೆದುಕೊಂಡಿತ್ತು. ಈ ಘಟನೆ ನಡೆದ ನಂತರ ಇಡೀ ಪ್ರಪಂಚವೇ ತಲ್ಲಣಿಸಿ ಹೋಗಿತ್ತು. ಯಾವುದೇ ದೇಶ ಇನ್ನಾವುದೇ ದೇಶದ ಮೇಲೆ ಸುಮ್ಮ ಸುಮ್ಮನೆ ಕಾಲು ಕೆದರಿಕೊಂಡು ಜಗಳಕ್ಕೆ ಹೋಗುವುದನ್ನು ಬಿಟ್ಟು ಬಿಟ್ಟಿದ್ದವು.

ಮುಂದೆ ಸದ್ದಾಂ ಹುಸೇನ್ ಮತ್ತು ಬಿನ್‌ಲ್ಯಾಡನ್ ವಿಜ್ಞಾನ ತಂತ್ರಜ್ಞಾನವನ್ನು ಯಾವ ರೀತಿ ದುರುಪಯೋಗಿಸಿಕೊಂಡರು ಎನ್ನುವುದು ತಿಳಿದ ವಿಷಯ. ಅದಕ್ಕೂ ಮುಂಚೆ ಜಪಾನ್ ಅಮೆರಿಕಾದ ಪೆರ್ಲ್ ಹಾರ್ಬಲ್ ಮೇಲೆ ದಾಳಿ ಮಾಡಿದ್ದು, ಅಮೆರಿಕಾ ಹಿರೋಷಿಮಾ ನಾಗಸಾಕಿ ಮೇಲೆ ದಾಳಿ ಮಾಡಿದ್ದು ಪ್ರಪಂಚ ಎಂದಿಗೂ ಮರೆಯಲಾಗದ ಕಪ್ಪು ಚುಕ್ಕೆಗಳಾಗಿವೆ. ಅದೇ ರೀತಿ ಮೊದಲನೆ ಮಹಾಯುದ್ಧ ಮತ್ತು ಎರಡನೆ ಮಹಾಯುದ್ಧಗಳು ಕೂಡ.



ವಿಜ್ಞಾನ ಎಷ್ಟು ಬೆಳೆಯುತ್ತಿತ್ತೋ ಅಷ್ಟೇ ತೊಂದರೆಗಳು ಕಾಣಿಸಿಕೊಳ್ಳುತ್ತಿದ್ದವು. ಜೊತೆಗೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಮನುಷ್ಯರು ದುರುಪಯೋಗಿಸಿಕೊಳ್ಳುತ್ತಿದ್ದರಿಂದ ಮನುಷ್ಯ ಅನೇಕ ರೀತಿಯ ತೊಂದರೆಗಳಿಗೆ ಸಿಲುಕಿಕೊಳ್ಳುತ್ತಿದ್ದ. ಉದಾಹರಣೆಗೆ 1998ರಲ್ಲಿ ಮೊದಲಿಗೆ ಇಟಲಿ ದೇಶದಲ್ಲಿ ಡಾಲಿ ಎಂಬ ಹೆಸರಿನ ತದ್ರೂಪಿ ಕುರಿಯನ್ನು ಒಂದು ಕುರಿಯ ಕಾಂಡಕೋಶಗಳಿಂದ ಸೃಷ್ಟಿಸಲಾಯಿತು ಕೊನೆಗೆ ಮನುಷ್ಯ ತದ್ರೂಪಿಗಳೂ ಬಂದವು. ಎಲ್ಲಾ ಜೀವಿಗಳನ್ನು ಸೃಷ್ಟಿಸಬಾರದು ಪ್ರಕೃತಿಯ ತುಲನೆ ಏರುಪೇರಾಗುತ್ತದೆ ಎಂದು ಎಷ್ಟೋ ಜನರು, ಸಂಘಗಳು ದುಂಬಾಲು ಬಿದ್ದರು. ಕೆಲವು ದೇಶಗಳು ಯಾರ ಮಾತಿಗೂ ಬೆಲೆ ನೀಡಲಿಲ್ಲ. ಮನುಷ್ಯ ತದ್ರೂಪಿಗಳನ್ನು ಸೃಷ್ಟಿಸಿ ಅವುಗಳಿಗೆ ಕೊಡಲಾರದ ಹಿಂಸೆ ನೀಡತೊಡಗಿದರು. ಅನಂತರ ಕೆಲವು ವರ್ಷಗಳು ತದ್ರೂಪಿಗಳನ್ನು ಸೃಷ್ಟಿಸಬಾರದೆಂದು ಪ್ರಪಂಚದಾದ್ಯಂತ ತಾಕೀತು ಮಾಡಲಾಯಿತು.

ಐಯಾನ್ ತನ್ನ ಹೊಸ ಕಾರಿನಲ್ಲಿ ಕುಳಿತುಕೊಂಡಿದ್ದಾನೆ. ಕಾರು ಪುರ್ರನೆ ಹಕ್ಕಿಯಂತೆ

ಹಾರುತ್ತಿದೆ. ಅವನು ತನ್ನ ಕೈಯಲ್ಲಿ ಒಂದು ಪತ್ರಿಕೆಯನ್ನು ಹಿಡಿದುಕೊಂಡು ಓದುತ್ತ ರಸ್ತೆಯ ಕಡೆಗೆ ನೋಡುತ್ತಿದ್ದಾನೆ. ಆ ಕಾರಿಗೆ ಗೀಯರು, ಕ್ಲಚ್ಚು ಬ್ರೇಕು ಅಷ್ಟೇಕೆ ಸ್ಟೀರಿಂಗು ಸಹ ಇರಲಿಲ್ಲ, ಕಾರು ಮಾತ್ರ ಸರಾಗವಾಗಿ ಐಯಾನ್ ಯೋಚಿಸುವಂತೆ ಸಾಗುತ್ತಿದೆ.

ಐಯಾನ್ ಮನಸ್ಸಿನಲ್ಲಿ ಏನು ಯೋಚಿಸುತ್ತಿದ್ದಾನೊ ಅದನ್ನು ಆ ಕಾರು ಅರ್ಥ ಮಾಡಿಕೊಳ್ಳುತ್ತಿದೆ. ವೇಗ ಗಂಟೆಗೆ ನೂರು ಮೈಲಿ ಇರಲಿ... ನೂರಾ ಇಪ್ಪತ್ತು ಮೈಲಿ ಇರಲಿ... ಶಬ್ದ ಇನ್ನಷ್ಟು ಕಡಿಮೆಯಾಗಲಿ... ನಿಧಾನವಾಗಿ ಬಲಗಡೆ ರಸ್ತೆಗೆ ತಿರುಗಿಕೊಳ್ಳಲಿ... ರಸ್ತೆಯ ಮಧ್ಯದಲ್ಲಿ ಬಳಿದಿರುವ ಬಿಳಿ ಬಣ್ಣದ ಗೆರೆಯಿಂದ ನಾಲ್ಕು ಅಡಿ ಅಂತರದಲ್ಲಿಯೆ ವಾಹನ ಸಾಗಲಿ.

ಒಟ್ಟಿನಲ್ಲಿ ಐಯಾನ್ ಯೋಚಿಸುವ ರೀತಿಯಲ್ಲೇ ಆ ಕಾರು ಸಾಗುತ್ತಿದೆ. ಆ ಕಾರಿಗೆ ಯಾವುದೇ ತೊಂದರೆಯಾದರೆ ಐಯಾನ್‌ಗೆ ತಿಳಿಸಿ ಅವನಿಂದ ನಿರ್ದೇಶನಗಳನ್ನು ಪಡೆದು ಕೊಳ್ಳುತ್ತಿದೆ. ಎದುರಿಗೆ ಬರುತ್ತಿರುವ ವಾಹನದ ವೇಗವನ್ನು ಅದು ತಿಳಿದುಕೊಳ್ಳುತ್ತಿದೆ. ರಸ್ತೆಯ ಮಧ್ಯದಲ್ಲಿ ಯಾವುದೇ ರೀತಿಯ ಸಂದೇಹ, ತೊಂದರೆ ಕಾಣಿಸಿಕೊಂಡರೆ ಅದನ್ನು ದೂರದಿಂದಲೇ ತಿಳಿದುಕೊಂಡು ಜಾಗರೂಕತೆಯಿಂದ ಸಾಗುತ್ತದೆ.

ಐಯಾನ್ ತನ್ನ ಎರಡು ತೋಳುಗಳನ್ನು ಶಸ್ತ್ರಚಿಕಿತ್ಸೆಗೆ ಒಳಪಡಿಸಿ ಅಲ್ಲಿ ಮಿನಿ ಕಂಪ್ಯೂಟರ್‌ಗಳನ್ನು ಅಳವಡಿಸಿಕೊಂಡಿದ್ದಾನೆ. ಎರಡು ತೋಳುಗಳಿಂದ ಎರಡು ಅಂಗೈಗಳವರೆಗೆ ನೂರು+ನೂರು ಫೈಬರ್ ತಂತುಗಳನ್ನು ಎಳೆದು ಚರ್ಮದ ಕೆಳಗೆ ಹುದುಗಿಸಿಡಲಾಗಿದೆ. ವೇಗದ ಜೊತೆಗೆ ನಿರಂತರವಾಗಿ ಕೆಲಸದಲ್ಲಿ ತೊಡಗಿರುವ ಸುಮಾರು ಹದಿಮೂರು ಬಿಲಿಯ ನರಕೋಶಗಳ ಜೊತೆಗೆ ಮಿನಿ ಕಂಪ್ಯೂಟರುಗಳು ಐಯಾನ್ ಯೋಚಿಸುವ ವಿಷಯಗಳನ್ನು ಮಿದುಳಿಗೆ ರವಾನಿಸುತ್ತವೆ.

ಮಿದುಳಿಗೆ ರವಾನಿಸಿದ ಸಂಕೇತಗಳು ಅಂಗೈಗಳ ತಳದಲ್ಲಿರುವ ತಂತುಗಳ ಮೂಲಕ ಕಾರಿನಲ್ಲಿ ಅಳವಡಿಸಿರುವ ಕಂಪ್ಯೂಟರ್ ಚಿಪ್‌ಗೆ (ಕಂಪ್ಯೂಟರ್ ಮಿದುಳು) ತಲುಪಿ, ಅದು ಅಲ್ಲಿ ಸಂಸ್ಕರಣೆ ನಡೆದು ಕಾರಿಗೆ ಆದೇಶವನ್ನು ನೀಡುತ್ತದೆ. ಕಾರು ಐಯಾನ್ ಯೋಚಿಸಿದಂತೆ ಚಾಚೂ ತಪ್ಪದೆ ರಸ್ತೆಯಲ್ಲಿ ಧಾವಿಸುತ್ತದೆ.

ಕಾರು ಮನೆ ಮುಂದೆ ಬಂದು ನಿಂತುಕೊಂಡಿತು. ಕಾರಿನಿಂದ ಐಯಾನ್ ಇಳಿದು ತನ್ನ ಮನೆಯ ಕಡೆಗೆ ನಡೆದ. ಕಾರು ಎಂದಿನಂತೆ ತನ್ನ ಸ್ಥಳಕ್ಕೆ ಹೋಗಿ ನಿಂತುಕೊಂಡಿತು. ಐಯಾನ್ ಬರುವುದನ್ನೇ ಕಾಯುತ್ತಿದ್ದ ಶಮಿ, ಐಯಾನ್ ಬಾಗಿಲಿಗೆ ಬಂದಿದ್ದೆ ಒಂದು ಚುಂಬನ ನೀಡಿ ಒಳಗೆ ಬರಮಾಡಿಕೊಂಡಳು. ಶಿಶಿರ ಓಡಿ ಬಂದು ಅಪ್ಪನನ್ನು ತಬ್ಬಿಕೊಂಡ.

ಶಮಿ ಮತ್ತೆ ಹೋಗಿ ಸೋಫಾ ಮೇಲೆ ಕುಳಿತುಕೊಂಡು ತಾನು ನೋಡುತ್ತಿದ್ದ ಸಿನಿಮಾ ನೋಡತೊಡಗಿದಳು. ಒಂದು ಯುವ ಜೋಡಿ ತಪ್ಪಲುಗಳಲ್ಲಿ ಮಳೆಯಲ್ಲಿ ನೆನೆಯುತ್ತ ಹೋಗುತ್ತಿದ್ದಾರೆ. ಗಾಳಿ ರಭಸವಾಗಿ ಬೀಸುತ್ತಿದೆ. ಬೀಸಿ ಬಿರುವ ಬಿರುಗಾಳಿಯ ಜೊತೆಗೆ

ಮಳೆಯ ಗಮ್ಮನೆ ವಾಸನೆಯನ್ನು ಐಯಾನ್ ಮತ್ತು ಶಮಿ ಆಸ್ವಾದಿಸುತ್ತಿದ್ದಾರೆ. ತಪ್ಪಲುಗಳಲ್ಲಿ ಬೀಳುತ್ತಿರುವ ಮಳೆ ಮನೆಯಲ್ಲಿ ಬೀಳುತ್ತಿರುವಂತೆ ಕಾಣುತ್ತಿದೆ. ತಪ್ಪಲುಗಳು ಚಳಿಗೆ ನಡುಗುತ್ತಿದ್ದರೆ. ಇಲ್ಲಿ ಐಯಾನ್ ಮತ್ತು ಶಮಿ ಕೂಡ ಚಳಿಗೆ ನಡುಗುತ್ತಿದ್ದಾರೆ.

ಮಳೆಯಿಂದ ತಪ್ಪಿಸಿಕೊಳ್ಳಲು ಯುವಕ, ಯುವತಿ ಓಡಿಹೋಗಿ ಒಂದು ಛತ್ರಿಯಾಕಾರ ಹರಡಿಕೊಂಡಿರುವ ಬಳ್ಳಿಯ ಕೆಳಗೆ ನಿಂತುಕೊಳ್ಳುತ್ತಾರೆ. ಯುವತಿ ಆ ಬಳ್ಳಿಯಲ್ಲಿದ್ದ ಹೂವನ್ನು ಕಿತ್ತು ಯುವಕನ ಮೂಗಿಗೆ ಹಿಡಿಯುತ್ತಾಳೆ.

''ಎಂತಹ ಸುವಾಸನೆ ರೀ ?'' ಶಮಿ, ಐಯಾನ್‌ಗೆ ಹೇಳುತ್ತಾಳೆ.

''ಹೌದು ! ಈ ಸುವಾಸನೇನ ನಾನು ಮೊದಲ ಬಾರಿಗೆ ಸ್ಮೆಲ್ ಮಾಡ್ತಾ ಇದ್ದೀನಿ'' ಐಯಾನ್ ಹೇಳಿದ.

ಮಳೆ ಕಡಿಮೆಯಾಗಿ ಈಗ ತುಂತುರು ಮಳೆ ಬೀಳುತ್ತಿದೆ. ಇಬ್ಬರೂ ಅಲ್ಲಿಂದ ಹತ್ತಿರದಲ್ಲೇ ಇದ್ದ ಒಂದು ಕಾಫಿ ಬಾರಿಗೆ ಹೋಗಿ ಕುಳಿತುಕೊಳ್ಳುತ್ತಾರೆ. ವೈಟರ್ ಎರಡು ಕಾಫಿಗಳನ್ನು ತಂದು ಅವರ ಮುಂದಿಡುತ್ತಾನೆ. ಕಾಫಿ ಕಪ್ಪುಗಳಿಂದ ಮೇಲೇಳುತ್ತಿದ್ದ ಆ ಗಮ ಗಮ ವಾಸನೆಯನ್ನು ಶಮಿ ಮತ್ತು ಐಯಾನ್ ಕೂಡ ಆಸ್ವಾದಿಸುತ್ತಿದ್ದಾರೆ. ಇದು ಇತ್ತೀಚಿನ ತಂತ್ರಜ್ಞಾನ. ಪ್ರಸ್ತುತ ತ್ರಿಬಲ್ ಡಿ ತಂತ್ರಜ್ಞಾನದ ಸಿನಿಮಾಗಳನ್ನು ನೋಡಿದಾಗ ಈ ರೀತಿಯ ಅನುಭವವಾಗುತ್ತದೆ.

''ಇದು ಕಾಫಿ ಸಮಯವಲ್ಲ'' ಎಂದ ಐಯಾನ್ ಎದ್ದು ಮನೆ ಬಾರ್ ಕಡೆಗೆ ನಡೆಯುತ್ತಾನೆ.

''ನನ್ಗೂ ಒಂದು ಪೆಗ್. ಚಳಿಯಾಗ್ತಾ ಇದೆ'' ಎನ್ನುತ್ತಾಳೆ ಶಮಿ.

''ಆಯಿತು ಡಾರ್ಲಿಂಗ್'' ಎಂದ ಐಯಾನ್ ಎರಡು ಗ್ಲಾಸುಗಳಲ್ಲಿ ಡ್ರಿಂಕ್ಸ್ ಸುರಿದುಕೊಳ್ಳುತ್ತಾನೆ. ಮಾಸ್ಟರ್ ರೋಬೋಟ್,

''ಮೆ ಐ ಹೆಲ್ಪ್ ಯು'' ಎಂದು ಹತ್ತಿರಕ್ಕೆ ಬರುತ್ತದೆ.

''ನೋ ಥ್ಯಾಂಕ್ ಯು'' ಎನ್ನುತ್ತಾನೆ ಐಯಾನ್.



ಬೆನ್ ಸಿಟಿ... ಸಮಯ ಸರಿಯಾಗಿ ರಾತ್ರಿ ಹನ್ನೊಂದು ಗಂಟೆ ಎರಡು ನಿಮಿಷ ಬೆನ್ ಸಿಟಿಯಲ್ಲಿ ಪ್ರಸಾರವಾಗುತ್ತಿದ್ದ ಎಲ್ಲಾ ಟಿವಿ ಚಾನಲ್‌ಗಳಲ್ಲೂ, ಇಂಟರ್‌ನೆಟ್‌ನಲ್ಲೂ, ನ್ಯೂಸ್ ಮೊಬೈಲ್‌ಗಳಲ್ಲೂ, ಸ್ಕೈ ಸಿಗ್ನಲ್‌ಗಳಲ್ಲೂ ಇದ್ದಕ್ಕಿದ್ದಾಗ್ಗೆ ಒಂದು ವಿಶೇಷ ಸಮಾಚಾರ ಕಾಣಿಸಿಕೊಂಡಿತು. ಅದೇನೆಂದರೆ ಸುಮಾರು 1,50,000 ಕಿಲೋಮೀಟರುಗಳು ದೂರದಲ್ಲಿ

ಭೂಮಿಯ ಕಡೆಗೆ ಒಂದು ದೈತ್ಯಾಕಾರದ ಉಲ್ಕಾಶಿಲೆ ಧಾವಿಸಿ ಬರುತ್ತದೆ ಎನ್ನುವುದನ್ನು ಖಗೋಳ ವಿಜ್ಞಾನಿಗಳು ಪತ್ತೆ ಹಚ್ಚಿದ್ದಾರೆ ಎನ್ನುವುದು.

ಈ ಉಲ್ಕಾಶಿಲೆ ಒಮ್ಮೆ ಭೂ ಕಕ್ಷೆಗೆ ತಲುಪಿತೆಂದರೆ ಕೇವಲ ಕೆಲವು ದಿನಗಳಲ್ಲಿ ಭೂಮಿಗೆ ಬಂದು ಬಡಿಯುತ್ತದೆ ಎನ್ನುವ ಸಮಾಚಾರ ತಿಳಿದಿದ್ದೆ ಸಿಟಿಯ ಜನರೆಲ್ಲ ನಡುಗಿಹೋದರು.

ಬೆನ್ ಸಿಟಿಯಲ್ಲಿ ಈ ವಿಷಯ ತಿಳಿದ ಮೇಲೆ ಭೂಮಿಯ ಮೇಲಿರುವ ಜನರೆಲ್ಲ ನಡುಗಿಹೋದರು. ಈ ಉಲ್ಕಾಶಿಲೆ ಯಾವಾಗ ಭೂಕಕ್ಷೆಗೆ ನುಗ್ಗುತ್ತದೆ? ಭೂಮಿಗೆ ಎಷ್ಟು ಕಿಲೋಮೀಟರುಗಳ ದೂರದಲ್ಲಿದೆ? ನಿಜವಾಗಿಯೂ ಭೂಮಿಗೆ ಬಂದು ಬಡಿಯುತ್ತದೆಯೆ? ಬೇರೆ ಕಡೆಗೆ ಹೋಗುವುದಿಲ್ಲವೆ? ವಿಜ್ಞಾನಿಗಳ ಹತ್ತಿರ ಯಾವುದೇ ನಿಖರವಾದ ಉತ್ತರವಿರಲಿಲ್ಲ. ಆದರೆ ಅದನ್ನು ಸಾವಿರಾರು ಕಿಲೋಮೀಟರುಗಳ ದೂರದಲ್ಲಿಯೆ ಚೂರು ಚೂರು ಮಾಡುವುದರ ಬಗ್ಗೆ ವಿಜ್ಞಾನಿಗಳು ತರಾತುರಿಯಾಗಿ ತಯಾರಿ ನಡೆಸತೊಡಗಿದರು.

ಸುಮಾರು ಹದಿಮೂರು ಬಿಲಿಯ ವರ್ಷಗಳ ಹಿಂದೆ ಅನಂತ ವಿಶ್ವದ ಯಾವುದೊ ಮೂಲೆಯಲ್ಲಿ ಬಿಗ್ ಬ್ಯಾಂಗ್ ಘಂಟೆ ಬಾರಿಸಿತ್ತು. ಕೋಟ್ಯಾಂತರ ಸೂರ್ಯ ಮಂಡಲಗಳಲ್ಲಿ ಒಂದಾದ ನಮ್ಮ ಸೂರ್ಯಮಂಡಲ ಸುಮಾರು 8 ಬಿಲಿಯ ವರ್ಷಗಳ ಹಿಂದೆ ರೂಪಗೊಂಡಿತ್ತು. ಸುಮಾರು 4.6 ಬಿಲಿಯ ವರ್ಷಗಳ ಹಿಂದೆ ಭೂಮಿ ಸೂರ್ಯದಿಂದ ಬೇರ್ಪಟ್ಟಿತು. ಮೊದಲಿಗೆ ಅನಿಲ ಮುದ್ದೆಯಾಗಿದ್ದ ಸೂರ್ಯನು ಮುಂದೆ ಮಿಲಿಯಾಂತರ ವರ್ಷಗಳು ಬ್ರಹ್ಮಾಂಡದಲ್ಲಿ ಗಿರಕಿ ಹೊಡೆಯುತ್ತ ಬೆಟ್ಟ ಗುಡ್ಡಗಳ ಹೊರಮೈ ಪಡೆದುಕೊಂಡಿತು.

ಈ ನಡುವೆ ಅನಂತ ವಿಶ್ವದಲ್ಲಿ ಕೋಟಿ ಕೋಟಿ ನಕ್ಷತ್ರ ಮಂಡಲಗಳು ಒಂದಕ್ಕೊಂದು ಡಿಕ್ಕಿ ಹೊಡೆದುಕೊಳ್ಳುತ್ತ, ಬಡಿದುಕೊಳ್ಳುತ್ತ ಚೂರು ಚೂರಾಗುತ್ತ ತಮ್ಮ ಪಥಗಳನ್ನು ತಾವು ಕಂಡುಕೊಳ್ಳುತ್ತಿದ್ದವು. ನಕ್ಷತ್ರಗಳು, ಗ್ರಹಗಳು, ಉಪಗ್ರಹಗಳು, ಧೂಮಕೇತುಗಳು, ಉಲ್ಕಾಶಿಲೆಗಳು ಮತ್ತು ಮೇಲಿನ ಎಲ್ಲಾ ಗ್ರಹಗಳಿಂದ ತುಂಡು ತುಂಡಾದ ಅಸ್ಟಾರಾಯಿಡ್ಸ್‌ಗಳು ವಿಶ್ವದಲ್ಲಿ ತಮಗೆ ಇಷ್ಟವಾದ ಕಡೆ ಅಬ್ಬೆಪಾರಿಗಳಾಗಿ ಹಾರಾಡುತ್ತಲೆ ಇವೆ.

ಭೂಮಿ ಕಳೆದ 4.6 ಬಿಲಿಯ ವರ್ಷಗಳಿಂದ ಅನೇಕ ಕಷ್ಟ ಸುಖಗಳನ್ನು ಅನುಭವಿಸಿದೆ. ಇಂದು ಭೂಮಿಯ ಮೇಲೆ ಪಂಚಭೂತಗಳಿಂದ ಹಿಡಿದು ಪ್ರತಿಯೊಂದು ವಸ್ತು ಪ್ರಾಣಿಗಳು, ಮನುಷ್ಯ ಸೃಷ್ಟಿಯಾಗಿದ್ದಾನೆ. ಭೂಮಿ ಎಳೆಯ ವಯಸ್ಸಿನಲ್ಲಿದ್ದಾಗ ಯಾವುದೊ ಅಬ್ಬೆಪಾರಿ ಗ್ರಹವೊಂದು ಭೂಮಿಗೆ ಬಡಿದಾಗ ಭೂಮಿಯ ಬಸಿರಿಂದ ಚಂದ್ರನು ಹೊರಗೆ ಬಿದ್ದುದಾಗಿ ವಿಜ್ಞಾನಿಗಳು ಹೇಳುತ್ತಾರೆ. ಅದೇ ರೀತಿ ಜುರಾಸಿಕ್ ಯುಗದಲ್ಲಿ ಇನ್ನೊಂದು ದೈತ್ಯ ಉಲ್ಕಾಶಿಲೆ ಬಡಿದು ಪೆಡಂಭೂತಗಳ ಸಂತಾನವೆ ಅಳಿಸಿ ಹೋಯಿತು. ತೀರ ಇತ್ತೀಚೆಗೆ

ಕ್ರಿ.ಶ. 2002ನೇ ವರ್ಷದಲ್ಲಿ ದೈತ್ಯ ಉಲ್ಕಾಶಿಲೆಯೊಂದು ಭೂಮಿಯ ತೀರ ಹತ್ತಿರಕ್ಕೆ ಬಂದು ಇನ್ನೇನು ಭೂಮಿಯನ್ನು ಬಡಿಯಬೇಕು ಎನ್ನುವಾಗ ಅದರ ಮನಸ್ಸಿಗೆ ಏನೆನ್ನಿಸಿತೊ ಏನೊ ಬೇರೆ ಕಡೆಗೆ ಹಾರಿಹೋಯಿತು. ಹೀಗೆ ಭೂಮಿಯ ಚರಿತ್ರೆ ಉಗಾದಿಯ ಬೇವು ಬೆಲ್ಲದಂತೆ ಬೆರೆತು ಹೋಗಿದೆ.

ಅಶ್ವಿನಿ ಮನೆಯಲ್ಲಿ ಅಶ್ವಿನಿ ಮತ್ತು ಕಾಸ್ಮೋರಾ ಇಬ್ಬರೂ ಮುಖಗಳನ್ನು ಗಂಟಿಕ್ಕಿಕೊಂಡು ಉತ್ತರ ದಕ್ಷಿಣಕ್ಕೆ ಕುಳಿತಿದ್ದಾರೆ.

ಅಶ್ವಿನಿ "ಕಾಸ್ಮೋ ನೀನು ಮತ್ತೆ ಬೇರೆ ಮನೇಗೆ ಹೋಗೂದು ಸರಿಯಲ್ಲ. ಈಗಾಗ್ಲೆ ಇಬ್ಬರು ಹುಡುಗರ ಜತೆಗಿದ್ದು ತೊಂದರೆ ಅನುಭವಿಸಿದ್ದೀಯಾ! ಇನ್ನಷ್ಟು ದಿನ ನನ್ನ ಜತೇಗಿರು. ಆ ಮೇಲೆ ಒಳ್ಳೆ ಹುಡುಗ ಸಿಕ್ಕಿದರೆ ಬೇರೆ ಹೋಗುವಿಯಂತೆ. ತೇಜಸ್ ಕೂಡ ನನ್ನೊಜ್ತೆ ಕೋ-ಆಪರೇಟ್ ಮಾಡ್ತಾ ಇಲ್ಲ. ಈಗ್ಲೂ ಶಮಿ ಜೊತೆಗೆ ಸಂಬಂಧ ಇಟ್ಟುಕೊಂಡಿದ್ದಾನೆ" ಎನ್ನುತ್ತಿದ್ದಂತೆ.

"ಅದಕ್ಕೆ ನಾನೇನು ಮಾಡ್ಲಿ? ನನ್ಗೆ ಫ್ರೀಡಂ ಬೇಕು?" ಕಾಸ್ಮೋರಾ ಹೇಳಿದಳು.

"ನಿನ್ಗೆ ಇಲ್ಲಿ ಏನು ತೊಂದರೆ ಆಗಿದೆ? ನಿನ್ಗೆ ತಿನ್ನೂದಕ್ಕೆ ಕಡಿಮೆ ಮಾಡ್ತಾ ಇದ್ದೀನಾ? ಕುಡಿಯೂದಕ್ಕೆ ಕಡಿಮೆ ಮಾಡ್ತಾ ಇದ್ದೀನಾ? ನಿನ್ನ ಬಾಯ್ ಫ್ರೆಂಡ್ಸ್‌ನ ಮನೇಗೆ ಕರ್‍ಕೊಂಡು ಬರ್‍ಬೇಡ ಅಂತೇಳ್ತಾ ಇದ್ದೀನಾ? ಏನು ತೊಂದರೆ ಆಗಿದೆ ನಿನಗೆ?"

"ಮಾಮ್ ನಿನಗೆ ಅದೆಲ್ಲ ಗೊತ್ತಾಗ್ತೊಲ್ಲ. ನನ್ನ ಪ್ರಾಪರ್ಟಿ ನನ್ಗೆ ಕೊಟ್ಟುಬಿಡು. ನನ್ನ ತಂದೆ ಐಯಾನ್ ಕೊಟ್ಟ ಪ್ರಾಪರ್ಟೀನೂ ನಿನ್ನ ಕಡೇನೆ ಇದೆ' ಎಂದಳು ಕಾಸ್ಮೋರಾ.

"ನನ್ನನ್ನ ಅರ್ಥ ಮಾಡಿಕೊಳ್ಳುವುದಕ್ಕೆ ಟ್ರೈ ಮಾಡು ಕಾಸ್ಮೋ" ಅಶ್ವಿನಿ ಕೇಳಿಕೊಂಡಳು.

"ಮಾಮ್ ನನ್ಗೆ ಯಾವುದು ತಪ್ಪು ಯಾವುದು ಸರಿ ಅನ್ನೂದು ಗೊತ್ತು" ಎಂದಳು ಕಾಸ್ಮೋರಾ. ಕಾಸ್ಮೋರ ಮಾತುಗಳನ್ನು ಕೇಳಿದ ಅಶ್ವಿನಿ ತಲೆ ಮೇಲೆ ಕೈಗಳನ್ನು ಇಟ್ಟುಕೊಂಡು ಕುಳಿತುಕೊಂಡುಬಿಟ್ಟಳು.

ಅದೇ ಹೊತ್ತಿಗೆ ಶಮಿ ಮನೆಯ ಮಾಸ್ಟರ್ ಕಂಟ್ರೋಲ್ ರೋಬೋಟ್ ಹತ್ತಿರಕ್ಕೆ ಬಂದು "ಮೇಡಮ್ ಎ ಮೆಸೇಜ್ ಫಾರ್ ಯು" ಮೊಬೈಲ್ ಫೋನನ್ನು ಕೈಗೆ ಕೊಟ್ಟು ಸ್ವಲ್ಪ ದೂರದಲ್ಲಿ ಹೋಗಿ ನಿಂತುಕೊಂಡಿತು. ಈಗೀಗ ಯಾವುದೇ ಮುಖ್ಯ ವಿಷಯವನ್ನೂ ಯಾರಿಗೂ ಗೊತ್ತಾಗದಂತೆ ಮೊಬೈಲ್‌ನಲ್ಲಿ ಮಾತ್ರ ತಿಳಿಸುತ್ತಿದ್ದರು.

"ಎಸ್ ಶಮಿ ಹಿಯರ್" ಎಂದಳು ಶಮಿ.

"ಹಲೊ ಮೇಡಮ್ ಎ ಸ್ಯಾಡ್ ಮೆಸೇಜ್ ಫಾರ್ ಯು. ಪ್ಲೀಸ್ ಟ್ರೈ ಟು ಕಂಟ್ರೋಲ್ ಯುವರ್‌ಸೆಲ್ಫ್" ಎಂದಿತು ಆ ಕಡೆಯ ಧ್ವನಿ. ಶಮಿ ಮೈಯೊಳಕ್ಕೆ ಒಮ್ಮೆಲೆ ಸಿಡಿಲು

ನುಗ್ಗಿದಂತಾಯಿತು. ಸಾವರಿಸಿಕೊಂಡ ಶಮಿ "ಪ್ಲೀಸ್ ಟೆಲ್ ಮಿ" ಎಂದಳು ಗದ್ಗತೆ ತುಂಬಿದ ಧ್ವನಿಯಲ್ಲಿ.

"ಯುವರ್ ಹಸ್ಬೆಂಡ್ ಮಿಸ್ಟರ್ ಐಯಾನ್...?" ಎನ್ನುತ್ತಿದ್ದಂತೆ.

"ಮೈ ಹಸ್ಬೆಂಡ್ ಐಯಾನ್‌ಗೆ ಏನಾಯಿತು" ಶಮಿ ಕೇಳಿದಳು.

"ಸ್ಪೇಸ್ ಕಾಲೋನಿಯಿಂದ ಏರ್‌ಬಸ್ಸಿಗೆ ಬರುವಾಗ ಅಚಾನಕ್ಕಾಗಿ ಒಂದು ಉಲ್ಕಾ ಶಿಲೆ ಬಡಿದಾಗ ಐಯಾನ್ ಏರ್ ಬಸ್ಸಿನಿಂದ ಕೆಳಕ್ಕೆ ಬಿದ್ದೋಗಿದ್ದಾರೆ. ಅವರ ದೇಹಾನ ರಿಕವರಿ ಮಾಡಿಕೊಳ್ಳುವುದಕ್ಕೆ ಸ್ಪೆಶಲ್ ಏರ್‌ಸ್ಕ್ವಾಡ್ ಟ್ರೈ ಮಾಡ್ತಾ ಇದ್ದಾರೆ."

"ಈಜ್ ಹಿ ಆಲ್‌ರೈಟ್...?"

"ಸಾರಿ ಮೇಡಮ್. ಅವರ ಡೆಡ್‌ಬಾಡೀನ ರಿಕವರಿ ಮಾಡೂದಕ್ಕೆ ಏರ್‌ಸ್ಕ್ವಾಡ್‌ನವರು ಟ್ರೈ ಮಾಡ್ತಾ ಇದ್ದಾರೆ. ಅದು ಕೂಡಾ ತುಂಬಾ ಕಷ್ಟ ಮೋಸ್ಟ್ಲಿ ಅವರ ಬಾಡಿ ಯಾರಿಗೂ ದೊರಕೂದಿಲ್ಲ" ಎನ್ನುತ್ತಿದ್ದಂತೆ.

"ಓ ಗಾಡ್...!" ಶಮಿ ಜೋರಾಗಿ ಅಳತೊಡಗಿದಳು. ಹತ್ತಿರಕ್ಕೆ ಬಂದ ಮಾಸ್ಟರ್ ಕಂಟ್ರೋಲ್ ರೋಬೋಟ್,

"ಟ್ರೈ ಟು ಕಂಟ್ರೋಲ್ ಯುವರ್ ಸೆಲ್ಫ್ ಮೇಡಮ್" ಎಂದು ಸಮಾಧಾನಪಡಿಸಿತು.

ಶಮಿ ನಿಧಾನವಾಗಿ ಎದ್ದು ಹೋಗಿ ಕಂಪ್ಯೂಟರ್ ಮುಂದೆ ಕುಳಿತಿದ್ದ ಶಿಶಿರನಿಗೆ

"ನಿನ್ನ ಡ್ಯಾಡಿ ಐಯಾನ್ ಸತ್ತೋದರಂತೆ ಕಣೊ" ಎಂದಳು.

"ನನ್ನ ತಂದೆ ತೇಜಸ್ ಅಲ್ಲವ?" ಶಿಶಿರ ಗಲ್ಲದ ಮೇಲೆ ಕೈ ಇಟ್ಟುಕೊಂಡು ತಾಯಿಯ ಮುಖವನ್ನೇ ನೋಡತೊಡಗಿದ.

ಇಪ್ಪತ್ತೊಂದು ದಿನಗಳನ್ನು ಸ್ಪೇಸ್ ಕಾಲೋನಿಯಲ್ಲಿ ಕಳೆದಿದ್ದ ಐಯಾನ್ ಕೊನೆ ದಿನ ಅಂತರಿಕ್ಷದಿಂದ ಭೂಮಿಗೆ ಬರಲು ಏರ್ ಬಸ್ಸು ಹಿಡಿಯಬೇಕಾಗಿತ್ತು. ಸ್ಪೇಸ್ ಕಾಲೋನಿಯ ಹತ್ತಿರಕ್ಕೆ ಏರ್ ಬಸ್ಸು ಯಾವ ರೀತಿಯ ತೊಂದರೆಯೂ ಇಲ್ಲದೆ ನಿಗದಿಪಡಿಸಿದ ಸಮಯಕ್ಕೆ ಸರಿಯಾಗಿ ಹೋಗಿತ್ತು. ಸ್ಪೇಸ್ ಕಾಲೋನಿ ಮತ್ತು ಏರ್‌ಬಸ್ಸಿನ ನಡುವೆ ಪ್ಯಾಸೇಜನ್ನು ಕೂಡಿಸಲಾಯಿತು. ಸ್ಪೇಸ್ ಕಾಲೋನಿ ಬೃಹದಾಕಾರವಾದ ಏರ್ ದೋಣಿಯಾಗಿದ್ದು ಅದಕ್ಕೆ ಏನೂ ವ್ಯತ್ಯಾಸವಾಗಲಿಲ್ಲ.

ಆದರೆ ಏರ್ ಬಸ್ಸು ಒಂದು ಕ್ಷಣ ಅಂತರಿಕ್ಷದಲ್ಲಿ ಗುಂಡುಬಿದ್ದ ಹಕ್ಕಿಯಂತೆ ವಿಲಿವಿಲಿಯಾಗಿಬಿಟ್ಟಿತು. ಏರ್ ಬಸ್ಸಿನ ಪ್ಯಾಸೇಜು ಒಂದು ಕಡೆ ಮುರಿದು ಹೋಗಿ ಅಲ್ಲಿದ್ದ ನಾಲ್ಕಾರು ಜನರು ಆಯತಪ್ಪಿ ಅಂತರಿಕ್ಷಕ್ಕೆ ಬಿದ್ದುಬಿಟ್ಟರು. ಏರ್‌ಬಸ್ಸಿನ ಸಿಬ್ಬಂದಿ ಪ್ಯಾಸೇಜಿನಲ್ಲಿದ್ದ ಕೆಲವರನ್ನು ಒಳಕ್ಕೆ ಎಳೆದುಕೊಂಡು ಬಾಗಿಲು ಮುಚ್ಚಿಬಿಟ್ಟರು.

ಏರ್‌ಬಸ್ಸು ಸಿಬ್ಬಂದಿಗೆ ಏನು ಮಾಡಬೇಕೋ ಒಂದೂ ಅರ್ಥವಾಗಲಿಲ್ಲ. ಕೆಲವೇ ನಿಮಿಷಗಳು ಪ್ಯಾಸೇಜಿನಿಂದ ಅಂತರಿಕ್ಷಕ್ಕೆ ಬಿದ್ದವರು ನೋಡು ನೋಡುತ್ತಿದ್ದಂತೆ ನಿಧಾನವಾಗಿ ಸ್ಪೇಸ್ ಡೆಬ್ರಿ ಕಡೆಗೆ ಹೊರಟು ಹೋಗುತ್ತಿದ್ದಾರೆ. ಅವರಲ್ಲಿ ಐಯಾನ್ ಕೂಡ ಇದ್ದಾನೆ. ಅವರ ಬೆನ್ನುಗಳ ಮೇಲೆ ಪ್ಯಾರಾಚೂಟುಗಳಾಗಲಿ ಆಮ್ಲಜನಕ ಸಿಲೆಂಡರುಗಳಾಗಲಿ ಯಾವುವೂ ಇಲ್ಲ. ಗಾಳಿಯೆ ಇಲ್ಲ ಆ ಕಕ್ಷದಲ್ಲಿ ಯಾರೂ ಯಾರ ಕೈಗಳಿಗೂ ದೊರಕುವುದಿಲ್ಲ. ಏರ್‌ಸ್ಕ್ವಾಡ್‌ನವರು ಏರ್‌ಬಸ್ಸಿನ ತಳ ಕೋಣೆಗಳಲ್ಲಿ ಕುಳಿತು ಸ್ಪೇಸ್ ಡೆಬ್ರಿ ಕಡೆಗೆ ಹೋಗುತ್ತಿದ್ದವರನ್ನು ಹಿಡಿಯಲು ಸಾಗುತ್ತಿದ್ದಾರೆ. ನತದೃಷ್ಟರಾದ ಅವರೆಲ್ಲರೂ ಅಂತರಿಕ್ಷದಲ್ಲಿ ಒಂದೊಂದು ಅಸ್ಟಿರಾಯ್ಡ್ ತುಣುಕುಗಳಂತೆ ಒಂದೊಂದು ಕಡೆಗೆ ಹೋಗುತ್ತಿದ್ದಾರೆ.

ಐಯಾನ್ ತನಗೆ ತಾನೆ ಮಾತನಾಡಿಕೊಳ್ಳುತ್ತಿದ್ದಾನೆ. ಅವನ ಮಾತುಗಳು ಅವನ ದೇಹದಿಂದ ಹೊರಕ್ಕೆ ಬರುತ್ತಿರಲಿಲ್ಲ. ಅವನ ಶ್ವಾಸಕೋಶಗಳಲ್ಲಿ ಗಾಳಿ ಇಲ್ಲದೆ ಇರುವಾಗ ಮಾತುಗಳಾದರೂ ಹೊರಗೆ ಬರಲು ಹೇಗೆ ಸಾಧ್ಯ? ಅದು ಕಷ್ಟಪಟ್ಟು ಮಾತನಾಡುತ್ತಿದ್ದಾನೆ. ''ಸ್ಪೇಸ್‌ನಲ್ಲಿ ಹಾರಾಡುವುದೆಂದರೆ ನನಗೆ ತುಂಬಾ ಇಷ್ಟ ಬಹುಶಃ ಅದಕ್ಕೆ ನನಗೆ ಈ ಶಿಕ್ಷೆ. ಇಲ್ಲ ಇಲ್ಲ.. ಬಹುಮಾನ. ಹಲೊ... ಅಶ್ವಿನಿ, ಹಲೊ ಕಾಶ್ಮೋ ಹಲೊ ಶಮಿ, ಹಲೊ ಲವ್‌ಲೀನಾ, ಹಲೊ ತೇಜಸ್, ಹಲೊ ಥ್ಯಾಂಕ್ಸ್ ಟು ಒನ್ ಅಂಡ್ ಆಲ್...!''

ಅವನ ಬೆನ್ನ ಹಿಂದೆ ಆಕ್ಸಿಜನ್ ಚೀಲ ಇರಲಿಲ್ಲ. ಇದ್ದಿದ್ದರೆ ಇನ್ನು ಸ್ವಲ್ಪ ಹೊತ್ತು ಮಾತನಾಡುತ್ತಲೆ ಇರುತ್ತಿದ್ದ. ಜೊತೆಗೆ, ಎಲ್ಲರನ್ನೂ ಬಿಟ್ಟು ತಾನು ಒಂಟಿಯಾಗಿ ಪ್ರಾಣ ಕಳೆದುಕೊಳ್ಳುವ ಹೊತ್ತಿನಲ್ಲಿ ಅತ್ತು ಕಣ್ಣೀರಿಡುತ್ತಿದ್ದನೊ ಏನೋ ಅವನಿಂದ ಅದು ಸಾಧ್ಯವಾಗಲಿಲ್ಲ.

ಯಾವುದಕ್ಕೂ ಗಾಳಿ ಇಲ್ಲದೆ ಅವನ ದೇಹ ಒತ್ತಡಕ್ಕೆ ಮಣಿದ ಒಂದು ಪ್ಲಾಸ್ಟಿಕ್ ಬಾಕ್ಸಿನಂತೆ ಕುಗ್ಗಿಹೋಗುತ್ತಿದೆ. ರಕ್ತ ಚಲನೆ ನಿಂತುಹೋಗಿ ಮಿದುಳಿನಲ್ಲಿರುವ ಕಾಂಡಕೋಶಗಳು ಲಕ್ಷಾಂತರ ಯೋಧರಂತೆ ಗುಂಪುಗುಂಪಾಗಿ ಸಾಯುತ್ತಿವೆ. ಐಯಾನ್ ದೇಹದಿಂದ ಅವನ ಪ್ರಾಣಪಕ್ಷಿ ನಿಧಾನವಾಗಿ ಹಾರಿ ಹೋಗುತ್ತಿದೆ.

ಅಂತರಿಕ್ಷದ ಕಸದ ಬುಟ್ಟಿಯಾದ ಸ್ಪೇಸ್ ಡೆಬ್ರಿಯ ವಸ್ತುಗಳು ಅವನ ಕೈ ಕಾಲು ದೇಹಕ್ಕೆ ತಗಲುತ್ತಿವೆ. ಅನಂತರ ಸ್ವಲ್ಪ ಹೊತ್ತಿಗೆ ಅವನ ದೇಹ ಪುರ್ಣವಾಗಿ ಸ್ಪೇಸ್ ಡೆಬ್ರಿಯಲ್ಲಿ ಸೇರಿಹೋಯಿತು. ಸ್ಪೇಸ್ ಸ್ಕ್ವಾಡ್‌ನವರು ನುರಾರು ಕಿಲೋಮೀಟರುಗಳು ದೂರ ಸಾಗಿ ಕೊನೆಗೆ ಯಾವ ಲಾಭವೂ ಇಲ್ಲದೆ ಅವರ ಆತ್ಮಗಳಿಗೆ ಶಾಂತಿ ದೊರಕಲಿ ಎಂದು ಪ್ರಾರ್ಥನೆ ಸಲ್ಲಿಸಿದರು.

ಭೂಮಿಯ ಮೇಲಿಂದ ಕಳೆದು ಒಂದು ಶತಮಾನದಲ್ಲಿ ಅಂತರಿಕ್ಷಕ್ಕೆ ಕಳುಹಿಸಿದ ಲಕ್ಷಾಂತರ ಉಪಗ್ರಹಗಳು ತಮ್ಮ ಕಾರ್ಯ ಮುಗಿಸಿದ ಮೇಲೆ, ಇಲ್ಲ ಕೆಟ್ಟು ಹೋಗಿ ಇದೇ

ಗಾರ್ಬೆಜ್‌ನಲ್ಲಿ ಸೇರಿಹೋಗಿವೆ. ಸ್ಪೇಸ್ ಕಾಲೋನಿಯಿಂದ ಕಳೆದುಹೋದ, ಇಲ್ಲ ಬಿದ್ದುಹೋದ ಅನೇಕ ರೀತಿಯ ಉಪಯೋಗವಿಲ್ಲದ ಸಾಮಾನುಗಳು ಮತ್ತು ಅನ್ಯ ಕಾಯಗಳಿಂದ ಕಳಚಿಕೊಂಡು ಬಂದಿರುವ ಶಿಲಾ ಚೂರುಗಳು ಇಲ್ಲಿವೆ. ಅನ್ಯಕಾಯಗಳಿಂದ ಕಳಚಿಕೊಂಡು ಬಂದಿರುವ ಶಿಲಾ ಚೂರುಗಳು ಇಲ್ಲಿವೆ.



ಸ್ಥಳ : ಬೆನ್ ಸಿಟಿ ದಿನಾಂಕ : ಕ್ರಿ.ಶ. Y2K64 28.02

ಆ ದಿನ ಇಡೀ ಭೂಮಿಯ ಮೇಲಿರುವ ಜನರೆಲ್ಲ ಉಲ್ಕಾಶಿಲೆಯ ಕಡೆಗೆ ತಮ್ಮ ಕಣ್ಣುಗಳನ್ನು ನೆಟ್ಟು ಕುಳಿತುಕೊಂಡಿದ್ದಾರೆ.

ದೈತ್ಯಾಕಾರದ ಉಲ್ಕಾಶಿಲೆ ಭೂಕಕ್ಷೆಯ ಒಳಕ್ಕೆ ಜಿಗಿದು ಭೂಮಿಯ ಕಡೆಗೆ ಚೈನಾ ಡ್ರ್ಯಾಗನ್‌ನಂತೆ ಮುಖ ಮಾಡಿ ಬುಸುಗುಡುತ್ತ ಧಾವಿಸಿ ಬರುತ್ತಿದೆ. ಜನರು ಎಲ್ಲಾ ಕೆಲಸಗಳನ್ನು ಬಿಟ್ಟು ಮನೆ, ಕಛೇರಿ, ಕಾರ್ಖಾನೆ, ಕಂಪನಿ, ವಿಮಾನ, ಬಸ್ಸು ಬೀದಿ ರಸ್ತೆಗಳಲ್ಲಿ ಟಿವಿ, ಇಂಟರ್‌ನೆಟ್, ಸ್ಕೈ ಸಿಗ್ನಲ್ ಪರದೆಗಳ ಮೇಲೆ ನೇರವಾಗಿ ಪ್ರಸಾರವಾಗುತ್ತಿರುವ ಉಲ್ಕಾಶಿಲೆಯನ್ನು ನೋಡುತ್ತಿದ್ದಾರೆ.

ಆ ಉಲ್ಕಾಶಿಲೆಯೂ ಭೂಕಕ್ಷೆಯಲ್ಲಿ ನಾಗರಹಾವಿನಂತೆ ಸುತ್ತಿ ಬಳಸಿ ಸಾಗಿ ಬರುತ್ತಿದೆ. ಎಲ್ಲರದೂ ಒಂದೇ ಪ್ರಶ್ನೆ. ಈ ಉಲ್ಕಾಶಿಲೆ ಭೂಮಿಗೆ ಬಡಿಯುವುದೇ?

ಭೂಮಿಗೆ ಕೊನೆ ದಿನಗಳು ಬಂದುಬಿಟ್ಟಿವೆ...? ಭೂಮಿ ಪೂರ್ಣವಾಗಿ ನಾಶವಾಗುವುದಾದರೆ ಅದು ಉಲ್ಕಾಶಿಲೆಗಳು ಇಲ್ಲ ಅನ್ಯಕಾಯಗಳು ಬಡಿಯುವುದರಿಂದಲೆ ಎನ್ನುವುದು ಮಾತ್ರ ವೈಜ್ಞಾನಿಕ ಸತ್ಯ - ಭೂಮಿ ಸಾವಿರಾರು ಪ್ರಳಯಗಳನ್ನು ಕಂಡಿದೆ. ಭೂಕಂಪ, ಚಂಡಮಾರುತ, ಜ್ವಾಲಾಮುಖಿ ಸಿಡಿತ, ಬರ, ಕ್ಷಾಮ, ನೆರೆ, ಬೆಂಕಿ ಇತ್ಯಾದಿ. ಆದರೆ ಅದ್ಯಾವವು ಭೂಮಿಯನ್ನು ಪೂರ್ಣವಾಗಿ ನಾಶ ಮಾಡಲಾರವು. ಇವೆಲ್ಲ ಭೂಮಿಯ ಕೆಲವು ಭಾಗಗಳನ್ನು ಮಾತ್ರ ಭಗ್ನ ಮಾಡಬಲ್ಲವು. ಭೂಮಿಯನ್ನು ನುಚ್ಚುನೂರು, ಸರ್ವನಾಶ ಮಾಡಬಲ್ಲ ಶಕ್ತಿ ಇರುವುದು ಈ ಆಕಾಶಕಾಯಿಗಳಿಗೆ ಮಾತ್ರ. ಅದು ಇಷ್ಟು ಬೇಗನೆ ಬರುತ್ತದೆ ಎಂದು ಯಾರೂ ಊಹಿಸಿರಲಿಲ್ಲ.

ಭೂಮಿ ತನ್ನ ಜೀವಮಾನದಲ್ಲಿ ಅನೇಖ ರೀತಿಯ ತೊಂದರೆಗಳನ್ನು ಅನುಭವಿಸಿದೆ. ಅದರ ಒಡಲ ಮೇಲಿರುವ ಸಸ್ಯ ಪ್ರಾಣಿ ಸಂಕುಲಗಳು ಸಾವಿರಾರು ಬಾರಿ ಸುಟ್ಟುಹೋಗಿವೆ.

ಆದರೆ ಭೂಮಿ ಎಲ್ಲವನ್ನು ನುಂಗಿಕೊಂಡು ಇಂದಿಗೂ ತನ್ನ ಮೇಲಿರುವ ವೈವಿಧ್ಯಮಯ ಸಸ್ಯ ಪ್ರಾಣಿ ಸಂಕುಲವನ್ನು ಉಳಿಸಿಕೊಂಡಿದೆ. ಉಲ್ಕಾ ಶಿಲೆ, ಭೂ ಕಕ್ಷೆಯ ಒಳಕ್ಕೆ ನುಗ್ಗಿ ಒಂದು ವಾರ ಕಳೆದಿದೆ. ಭೂಮಿಯನ್ನು ಸುತ್ತಿ ಬಳಸಿ ವೇಗವಾಗಿ ಭೂಮಿಯ

ಹತ್ತಿರಕ್ಕೆ ಬರುತ್ತಿದೆ. ಇನ್ನೇನು ಆ ಉಲ್ಕಾಶಿಲೆಯನ್ನು ಅಂತರಿಕ್ಷದಲ್ಲಿಯೇ ಸಿಡಿಸಿ ಚೂರು ಚೂರು ಮಾಡಬೇಕು. ಇಲ್ಲವೆಂದರೆ ಭೂಮಿಗೆ ಉಳಿಗಾಲವಿಲ್ಲ.

ಪ್ರಪಂಚದ ಪ್ರಖ್ಯಾತ ವಿಜ್ಞಾನಿಗಳೆಲ್ಲ ಇಂಟರ್‌ನೆಟ್ ಮೂಲಕ ಚರ್ಚಿಸುತ್ತಿದ್ದಾರೆ. ಈ ಉಲ್ಕಾಶಿಲೆಯನ್ನು ಯಾವ ರೀತಿ ಎದುರುಗೊಳ್ಳಬೇಕು? ಎಷ್ಟು ವೇಗದ ಮಿಸ್ಸೈಲ್‌ಗಳಿಂದ ಹೊಡೆಯಬೇಕು...? ಉಲ್ಕಾಶಿಲೆಯನ್ನು ಹೊಡೆದ ಮೇಲೆ ಭೂಮಿಯ ಮೇಲೆ ಯಾವ ರೀತಿಯ ಅನಾಹುತಗಳಾಗಬಹುದು? ಅದಕ್ಕೆ ಮುಂಚೆ ಯಾವ ಯಾವ ರೀತಿಯ ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಳ್ಳಬೇಕು ಇತ್ಯಾದಿಗಳ ಬಗ್ಗೆ ಚರ್ಚೆ ನಡೆಯುತ್ತಿದೆ.

ಈಗ ಮಿಸ್ಸೈಲ್‌ಗಳನ್ನು ಆ ಉಲ್ಕಾ ಶಿಲೆಯ ಕಡೆಗೆ ತಿರುಗಿಸಿ ಅದನ್ನು ಯಾವ ಹಂತದಲ್ಲಿ ಎಷ್ಟು ವೇಗದಲ್ಲಿ ಎಷ್ಟು ಸಮಯಕ್ಕೆ ಎದುರುಗೊಳ್ಳಬೇಕು ಎನ್ನುವ ಲೆಕ್ಕಾಚಾರಗಳನ್ನು ಮುಗಿಸಿ ವಿಜ್ಞಾನಿಗಳು ಪ್ರಪಂಚದ ಮೂಲೆ ಮೂಲೆಗಳಿಂದ ಒಂದೇ ಸಲಕ್ಕೆ ಸಮಯ ಫಿಕ್ಸ್ ಮಾಡಿಕೊಂಡರು. ಉಪಗ್ರಹಗಳು ಮತ್ತು ಸ್ಪೇಸ್ ಕಾಲೋನಿಗಳಲ್ಲಿರುವ ವೀಕ್ಷಣಾ ಕೇಂದ್ರಗಳಿಂದಲೂ ಉಲ್ಕಾ ಶಿಲೆಯ ಜಾಡನ್ನು ನಿಖರವಾಗಿ ಗುರುತಿಸಲಾಯಿತು. ಎಲ್ಲರೂ ಒಂದೇ ಸಲಕ್ಕೆ, ‘‘ಐದು... ನಾಲ್ಕು... ಮೂರು... ಎರಡು ಎಸ್ಸ್...’’ ಎಂದರು.

ಭೂಮಿಯ ಅತಿ ಎತ್ತರದ ಐದು ಪ್ರದೇಶಗಳಿಂದ ಒಂದೇ ಸಲಕ್ಕೆ ಮಿಸ್ಸೈಲ್‌ಗಳು ಉಲ್ಕಾಶಿಲೆಯ ಕಡೆಗೆ ಧಾವಿಸತೊಡಗಿದವು. ಉಲ್ಕಾ ಶಿಲೆ ಯಾವುದೇ ರೀತಿಯಲ್ಲೂ ತಪ್ಪಿಸಿಕೊಳ್ಳಬಾರದು. ಪ್ರಪಂಚದಾದ್ಯಂತ ಜನ ಕಣ್ಣಲ್ಲಿ ಬೆಳಕಿನಂತೆ ಹಾರುತ್ತಿರುವ ಮಿಸ್ಸೈಲ್‌ಗಳನ್ನು ನೋಡುತ್ತಿದ್ದಾರೆ. ನಿಮಿಷಕ್ಕೆ ಸಾವಿರ ಕಿಲೋ ಮೀಟರುಗಳ ವೇಗದಲ್ಲಿ ಭೂಮಿಯ ಐದು ಕಡೆಗಳಿಂದಲೂ ಮಿಸ್ಸೈಲ್‌ಗಳು ಆಕಾಶದ ಕಡೆಗೆ ಧಾವಿಸುತ್ತಿವೆ. ಈಗ ಉಲ್ಕಾ ಶಿಲೆಯೂ ಅದೇ ವೇಗದಲ್ಲಿ ಭೂಮಿಯ ಕಡೆಗೆ ಧಾವಿಸುತ್ತಿದೆ.

ನೋಡು ನೋಡುತ್ತಿದ್ದಂತೆ ಉಲ್ಕಾ ಶಿಲೆ ತನ್ನ ಆಕಾರ ವೇಗವನ್ನು ಬದಲಿಸಿಕೊಳ್ಳುವಂತೆ ತೋರುತ್ತಿದೆ. ಗುಂಡಾಗಿದ್ದ ಉಲ್ಕಾ ಶಿಲೆಗೆ ಇದ್ದಕ್ಕಿದ್ದಾಗೆ ಮುನ್ನುಗ್ಗುವ ಒಂದು ಹಾವಿನಂತಹ ತಲೆ ಅದರ ಹಿಂದೆ ಉದ್ದವಾದ ದೈತ್ಯ ದೇಹ... ಕೊನೆಗೆ ಮುಳ್ಳುಗಳನ್ನು ಸಿಕ್ಕಿಸಿಕೊಂಡಿರುವ ಬಾಲವು ಕಾಣಿಸಿಕೊಂಡಿತು. ಐದು ಕಡೆಗಳಿಂದಲೂ ಮಿಸ್ಸೈಲುಗಳು ಉಲ್ಕಾ ಶಿಲೆಯ ಕಡೆಗೆ ವೇಗವಾಗಿ ಧಾವಿಸಿ ಬಂದು ಹೊಡೆದೇಬಿಟ್ಟವು.

ಬಿಗ್ ಬ್ಯಾಂಗ್ ಗಂಟೆ ಬಾರಿಸಿದಾಗ ಮೂಡಿದಂತಹ ಧೂಳು ಆಕಾಶವೆಲ್ಲ ಎದ್ದುಬಿಟ್ಟಿತು. ಈಗ ಯಾರಿಗೂ ಏನೂ ಕಾಣಿಸಲಿಲ್ಲ, ಬರಿ ಧೂಳು... ಆಕಾಶವೆಲ್ಲ ಧೂಳು ಆವರಿಸಿಕೊಂಡಿರುವ ಆಕಾಶದ ಕಡೆಗೆ ನೋಡುತ್ತಿದ್ದಾರೆ.

ಉಲ್ಕಾ ಶಿಲೆಗೆ ಮಿಸ್ಸೈಲುಗಳು ಬಡಿದು ಅರ್ಧ ಗಂಟೆ ಆಗಿರಬಹುದು. ಒಮ್ಮೆಲೆ

ಭೂಮಿಯನ್ನೇ ಎತ್ತಿ ಬೆಟ್ಟಕ್ಕೆ ಬಡಿದಂತಾಯಿತು. ಭೂಮಿ ಗಡ ಗಡ ಕಂಪಿಸುತ್ತಿದೆ. ಭೂಮಂಡಲವೆಲ್ಲ ಫರಫರನೆ ಬಿರುಕುಗಳು ಮೂಡುತ್ತಿವೆ.

ನದಿಗಳು ದಾರಗಳಂತೆ ತುಂಡು ತುಂಡಾಗುತ್ತಿವೆ. ಸಮುದ್ರಗಳು ನೆಲಕ್ಕೆ ಬಿದ್ದ ಮಡಿಕೆಗಳಂತೆ ಹೊಡೆದು ಹೋಗುತ್ತಿವೆ. ಭೂಮಿಯ ಬುರುಡೆ ಹೊಡೆದು ಹೋಗಿ ಭೂಗರ್ಭದಲ್ಲಿದ್ದ ಲಾವಾರಸ ಅಂತರಿಕ್ಷದಲ್ಲಿ ಸೋರಿ ಹೋಗುತ್ತಿದೆ.

ಭೂಮಿ ಅನಾಥ ಮಗುವಿನಂತೆ ಅಂತರಿಕ್ಷದಲ್ಲಿ ಚೀರಿಕೊಳ್ಳುತ್ತಾ ಸಾಗುತ್ತಿದೆ.





ಭೂವಿಜ್ಞಾನಿ ಮತ್ತು ಲೇಖಕರಾಗಿ ಹೆಸರು ಮಾಡಿರುವ ಡಾ. ಎಂ. ವೆಂಕಟಸ್ವಾಮಿ ಕೋಲಾರ ಜಿಲ್ಲೆ, ಬಂಗಾರಪೇಟೆ ತಾಲ್ಲೂಕಿನ ಬ್ಯಾಟರಾಯನಹಳ್ಳಿಯವರು. ಕನ್ನಡದ ಹೆಸರಾಂತ ಪತ್ರಿಕೆಗಳಲ್ಲಿ ಇವರ ಹಲವಾರು ಕತೆ, ಕವನ, ಕಾದಂಬರಿ, ವೈಚಾರಿಕ, ವಿಮರ್ಶೆ, ವಿಜ್ಞಾನ ಮತ್ತು ಪ್ರವಾಸ ಕಥೆಗಳು ಸೇರಿ ಒಟ್ಟು ೨೦ ಕೃತಿಗಳು ಪ್ರಕಟವಾಗಿವೆ.

ಕನ್ನಡ, ತೆಲುಗು, ತಮಿಳು, ಹಿಂದಿ, ಇಂಗ್ಲಿಷ್ ಭಾಷೆಗಳನ್ನು ಬಲ್ಲವರಾಗಿರುವ ಇವರು ಭಾರತೀಯ ಭೂವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯಲ್ಲಿ ೨೫ ವರ್ಷಗಳಿಂದ ಉತ್ತರ ಭಾರತ, ಈಶಾನ್ಯ ಭಾರತ ಮತ್ತು ದೇಶದ ಮೂಲೆ ಮೂಲೆ ಸುತ್ತಿ ಅಪಾರ ಅನುಭವ ಪಡೆದಿದ್ದಾರೆ. ಚೀನಾ ದೇಶದ ಪ್ರವಾಸವೂ ಮಾಡಿ ಬಂದಿದ್ದಾರೆ. ಕೋಲಾರ ಚಿನ್ನದ ಗಣಿಗಳ ಸಮಗ್ರ ಅಧ್ಯಯನಕ್ಕೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಇತ್ತೀಚೆಗೆ ಡಿ.ಲಿಟ್. ಪದವಿ ನೀಡಿ ಗೌರವಿಸಿದೆ.

ಇವರು ಪ್ರಕಟಿಸಿರುವ ೨೦ ಕೃತಿಗಳಲ್ಲಿ ೭ ಕಾದಂಬರಿಗಳು, ೭ ವಿಜ್ಞಾನ, ೨ ಪ್ರವಾಸ ಕಥನಗಳು, ೧ ಕವನ ಸಂಕಲನ, ೧ ವೈಚಾರಿಕ ಮತ್ತು ೧ ವಿಮರ್ಶೆ ಕೃತಿಗಳು ಸೇರಿವೆ. ಮುಖ್ಯ ಕೃತಿಗಳೆಂದರೆ : ಅಸ್ಪೃಶ್ಯರು (ನವ ಕರ್ನಾಟಕ), ಅಲೆಮಾರಿಯ ಹೆಜ್ಜೆಗಳು (ಪುಸ್ತಕ ಪ್ರಾಧಿಕಾರ), ಸುನಾಮಿ (ಕನ್ನಡ ಸಾಹಿತ್ಯ ಪರಿಷತ್ತು ) ಡ್ರ್ಯಾಗನ್ಸ್ ಮಹಾಗೋಡೆಯೊಳಗೆ (ಗೀತಾಂಜಲಿ ಪಬ್ಲಿಕೇಷನ್ಸ್), ಬೆಟ್ಟಗುಡ್ಡಗಳ ಬೋಗುಣಿಯಲ್ಲಿ (ಕವನ ಸಂಕಲನ), ಪೃಥ್ವಿಯ ಯಶೋಗಾಥೆ (ಭೂವಿಜ್ಞಾನ) ಇತ್ಯಾದಿ. ಕೋಲಾರ ಚಿನ್ನದ ಗಣಿಗಳು : ಸಮಗ್ರ ಅಧ್ಯಯನ ಕನ್ನಡ, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳಲ್ಲಿ ಬರಲಿದೆ.




ಜಾಗೃತಿ ಪ್ರಿಂಟರ್ಸ್

ನಂ. 56/1-6, ನರಸಿಂಹಯ್ಯ ಗಾರ್ಡನ್,
ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯರಸ್ತೆ
ಬೆಂಗಳೂರು - 560 091.